**ಬನ್ನಿರಿ ನಮ್ಮಯ ಅತಿಥಿಗಳೇ** **ರಾಗ: ಅಭೇರಿ**

ಬನ್ನಿರಿ ನಮ್ಮಯ ಅತಿಥಿಗಳೇ। ವಂದಿಸಿ ಸ್ವಾಗತ ಬಯಸುವೆವು। ಸುಸ್ವಾಗತವಾಗಲಿ ನಿಮಗೀಗಾ।।ಪ।। ವಿದ್ಯಾಗಣಪತಿ ಕೃಪೆಯಿಂದ ನಾವು। ವಿವಿಧ ವಿನೋದವ ನಡೆಸುವೆವು। ವಿಘ್ನವ ಗೈಯದೆ ಉತ್ಸವ ನಡೆಯಲು। ವಿಘ್ನೇಶ್ವರನನು ಬೇಡುವೆವು।।1।। ನಾವೆಲ್ಲರು ಸೇರಿ ಒಕ್ಕೊರಲಿಂದ। ಆ ದೇವರನು ಸ್ತುತಿಸೋಣ। ಶಂಕೆಯಿಲ್ಲದೆ ಆತನು ನಮ್ಮಯ ಶಾಲೆಯ ಉತ್ಸವಕೆ ಮಂಗಳವೀಯಲಿ ।।2।।

**ಸ್ವಾಗತವ ನೀಡುವೆವು ಹರುಷದಿಂದಲೀ** **ರಾಗ: ಶುಭಪಂತುವರಾಳಿ**

ಸ್ವಾಗತವ ನೀಡುವೆವು ಹರುಷದಿಂದಲೀ। ಇಂದಿನ ಸುಸಂಭ್ರಮದ ಪುಣ್ಯದಿನದಲಿ।।ಪ।। ಶಾಲೆ ಬಾಲ ಬಾಲಕಿಯರು ಕೂಡುತ। ಹೂವ ಚೆಲುವ ಮಾಲೆಯನ್ನು ಹಿಡಿಯುತ। ಕಂಪು ಬೀರ್ವ ಹೂಗಳನ್ನು ಚೆಲ್ಲುತಾ। ಮನದಿ ಹರುಷವನ್ನು ನಾವು ತಾಳುತಾ। ಹರುಷ ತಂದಿದೆ ಮನಕೆ ಶುಭವ ನೀಡಿದೆ। ಒಮ್ಮನದೆ ಸ್ವಾಗತವ ಹೃದಯ ಬಯಸಿದೆ।।1।। ನಿಷ್ಠೆಯಿಂದ ಶಾಲೆಸೇವೆ ಗೈಯುತಾ। ನಿಮ್ಮಗಳ ಪ್ರೀತಿಯನ್ನು ಗಳಿಸುತಾ। ಅನವರತವು ವಿದ್ಯೆಗಾಗಿ ದುಡಿಯುತಾ। ನಿಮ್ಮಯ ಉದಾರವನ್ನು ಗಳಿಸುತಾ। ನಿಮ್ಮ ಶಕ್ತಿ ಭಕ್ತಿಯನ್ನು ವೃದ್ಧಿ ಪಡಿಸಲಿ।। ಧೀರ್ಘಕಾಲ ಬಾಳಿರೆಂದು ಬೇಡುತಿರುವೆವು।।2।।

**ಸ್ವಾಗತವು ನಿಮಗೆ ಸುಸ್ವಾಗತವೂ** **ರಾಗ: ಕಾನಡ**

ಸ್ವಾಗತವು ನಿಮಗೆ ಸುಸ್ವಾಗತವೂ ನಿಮಗೆ।।ಪ।। ಕೆಚ್ಚೆದೆ ಕಲಿಗಳೆ, ಹೊನ್ನಾಡ ಮಣಿಗಳೆ। ಗಂಧದ ಗುಡಿಯವರೇ, ಸಿರಿಗನ್ನಡ ನೆಲದವರೇ। ಕನ್ನಡಾಂಬೆ ಋಣವಾ ತೀರಿಸಲು ಬನ್ನಿ। ಕರುನಾಡ ಕಣಕಣ ಕಸ್ತೂರಿಯಾಗಿ। ಕರೆಯೋಣ ಪರಿಮಳ ಕನ್ನಡವಾಗಿ। ಕುವೆಂಪು ಕವನ ಕಾನಡವಾಗಿ। ಸ್ವಾಗತ ಕೋರಿಹುದೂ ಸುಸ್ವಾಗತ ಕೋರಿಹುದೂ।।1।। ತಾಯ ಹಾಲ ಋಣವಾ ತೀರಿಸಲು ಬನ್ನಿ। ಕಾವೇರಿ ಅಲೆಗಳ ಕಲರವ ಗಾನ। ಬೇಲೂರ ಬಾಲೆಯ ಬೆಡಗಿನ ನರ್ತನ। ಸಹ್ಯಾದ್ರಿ ಮಲೆಯ ಬೆಡಗಿನ ನರ್ತನ। ಸಹ್ಯಾದ್ರಿ ಮಲೆಯ ಸುಮಧುರ ತಾಣ। ಸ್ವಾಗತ ಕೋರಿಹುದೂ। ಸುಸ್ವಾಗತ ಕೋರಿಹುದೂ। ನಾಡು ನುಡಿಯ ಋಣವಾ ತೀರಿಸಲು ಬನ್ನಿ।।2।।

**ಸ್ವಾಗತವು ಸುಸ್ವಾಗತವು ಇಂದಿನ** **ರಾಗ: ಹಂಸಧ್ವನಿ**

ಸ್ವಾಗತವು ಸುಸ್ವಾಗತವು ಇಂದಿನ ಕೂಟಕೆ ಸ್ವಾಗತವು ಸುಸ್ವಾಗತವು।।ಪ।। "ಸು" ಎಂಬ ಕನ್ನಡ ಅಕ್ಷರವು ಸುಮಧುರವಾಗಿ ಕರೆಯುವುದು। ಎಲ್ಲರೂ ಬನ್ನಿ ಸಂತಸದಿ ನಮ್ಮಯ ಇಂದಿನ ಸಂಭ್ರಮಕೆ।। "ಸ್ವಾ" ಎಂಬ ಕನ್ನಡ ಅಕ್ಷರವು ಸ್ವಾಗತಿಸುವುದು ಸರ್ವರನ್ನು। ಸಭಿಕರೆ ಬನ್ನಿರಿ ಸಂತಸದಿ ನಮ್ಮಯ ಇಂದಿನ ಸಂಭ್ರಮಕೆ।। "ಗ" ಎಂಬ ಕನ್ನಡ ಅಕ್ಷರವು ಘಮಘಮ ಪರಿಮಳ ಬೀರುವುದು। ಸುಮಗಳ ದೇವಗೆ ಅರ್ಪಿಸುತ ಕೋರುವೆವು ಪ್ರೀತಿಯ ಸ್ವಾಗತ।। "ತ" ಎಂಬ ಕನ್ನಡ ಅಕ್ಷರವು ತಾಯಿಯ ಪ್ರೀತಿಯ ಸಾರುವುದು। ದೇವರ ನಾಮದಲಿ ಕೋರುವೆವು ಪ್ರೀತಿಯ ಸ್ವಾಗತ। ಇಂದಿನ ದಿನವೇ ಶುಭದಿನವು ಹಾಡುತಲಿರುವುದು ತನುಮನವು। ಬಂದಿಹರೆಲ್ಲಾ ಸಭಿಕರಿಗೆಲ್ಲಾ ಸ್ವಾಗತವು ಸುಸ್ವಾಗತವು।।

**ಸ್ವಾಗತವು ಸ್ವಾಗತವೂ ಎಲ್ಲರಿಗೂ** **ರಾಗ:ಹಂಸಧ್ವನಿ**

ಸ್ವಾಗತವು ಸ್ವಾಗತವೂ। ಎಲ್ಲರಿಗೂ ಸ್ವಾಗತವೂ।।ಪ।। ಆನಂದ ತುಂಬಿ ನಂದ ಗೋಕುಲ। ಅಂದ ಚೆಂದ ಮಕ್ಕಳ ದೇಗುಲಕ್ಕೆ। ಸ್ವಾಗತವೂ ಸ್ವಾಗತವೂ।।1।। ಸ್ನೇಹದಿಂದ ಹರ್ಷ ತೋರುವ ಒಳ್ಳೆ ಕಲಿಕೆ ಪಡೆಯುವಲ್ಲಿಗೆ। ಸ್ವಾಗತವೂ ಸ್ವಾಗತವೂ।।2।। ಎಲ್ಲರೂ ಬನ್ನಿರಿ ಕಲಿಯಲು ಸುಗುಣವ। ಉತ್ತಮ ಜೀವನದ ದಾರಿ ತೋರುವ। ಶ್ರೀ ಆಲಯಕೆ ಸ್ವಾಗತವೂ ಸ್ವಾಗತವೂ।।3।।

# ಭಾವಗೀತೆ - ಸಾಮಾನ್ಯ

**ಅವತರಿಸು ಬಾ ನಾರಾಯಣ** **ರಾಗ: ಅಭೇರಿ**

ಅವತರಿಸು ಬಾ ನಾರಾಯಣ ಎತ್ತೆನ್ನ ಮೇಲಕೆ। ಬಿದ್ದನನ ಈ ಜೀವವಾಗಲಿ ಪಾವನ॥ಪ॥ ಈ ಪ್ರಾಣ ತನುಮನ ದೇವನ ಹಗಲಿರುಳುಮಾಡಲಿ ಸೇವನ। ಆಗಬಹುದು ಭಗವಜ್ಜೀವನ॥1॥ ಅತ್ಯಂತ ನಿನ್ನೊಳು ಪ್ರೇಮವು ಅದು ಸಹಜ ಜೀವನ ಧಾಮವು। ಅಲ್ಲಿರುವ ಅನ್ನವೇ ಸೋಮವು॥2॥

**ಅಗಣಿತ ತಾರಾಗಣಗಳ** **ರಾಗ: ಹಂಸಾನಂದಿ**

ಅಗಣಿತ ತಾರಾಗಣಗಳ ನಡುವೆ। ನಿನ್ನನೆ ನೆಚ್ಚಿಹೆ ನಾನು। ನನ್ನೀ ಜೀವನ ಸಮುದ್ರ ಯಾನಕೆ। ಚಿರಧೃವ ತಾರೆಯು ನೀನು॥1॥ ಇಲ್ಲದ ಸಲ್ಲದ ತೀರಗಳೆಡೆನಾ। ತೊಳಲುತ ಬಳಲಿದರೇನು। ದಿಟ್ಟಿಯು ನಿನ್ನೊಳು ನೆಟ್ಟಿರೆ ಕಡೆಗೆ। ಗುರಿಯನು ಸೇರೆನೆ ನಾನು॥2॥ ಚಂಚಲವಾಗಿಹ ತಾರಕೆಗಳಲಿ। ನಿಶ್ಚಲನೆಂದರೆ ನೀನೆ। ಮಿಂಚಿ ಮುಳುಗುತಿಹ ನಶ್ವರನೆಡೆಯಲಿ। ಶಾಶ್ವತ ನೆಂದರೆ ನೀನೆ॥3॥

**ಆಡಿದಳು ರಾಧೆ** **ರಾಗ: ಅಮೃತವರ್ಷಿಣಿ**

ಆಡಿದಳು ರಾಧೆ ಆನಂದದಿಂದ ಕುಣಿದಾಡಿದಳು ರಾಧೆ॥ಪ॥ ಮಾಧವನ ಮುರಳಿಯ ವಾದನಕೆ ಮನಸೋತು ಮೈ ಮರೆತು। ಇಳೆಗಿಳಿದ ನಾಟ್ಯ ಮೋಹಿನಿಯಂತೆ॥ಅ.ಪ.॥ ತರುಲತೆಗಳೆಲ್ಲ ಸಂತಸದಿ ತಲೆದೂಗಿ ಕುಸುಮ ಪರಿಮಳವ ದಶದಿಶಗಳು ಚೆಲ್ಲಿ। ರಾಧಿಕಾ ಚರಣ ಕಿಂಕಿಣಿ ದನಿಗೆ ಮರುಳಾಗಿ ಭೂಮಾತೆ ತನ್ನ ಭಾರವನೆಲ್ಲ ಮರೆತಿರಲು॥1॥ ಕೊಳಲುಲಿಗೆ ಮರುಳಾಗಿ ಗೋಪ ವನಿತೆಯರೆಲ್ಲ। ಕಲಕಂಠದಿಂದ ಗಾಯನ ಮಾಡಿ। ನಲಿವೋರು ಆನಂದ ಭರಿತ ಚಂದಿರ ಆಗಸದಿ ಮೆರೆಯೆ ಅಮೃತ ಕಿರಣಗಳಿಂದ ಅಭಿಷೇಕಿಸುತಿರಲು॥2॥

**ಆವು ಈವಿನ ನಾವು ನೀವಿಗೆ** **ರಾಗ: ರೇವತಿ**

ಆವು ಈವಿನ ನಾವು ನೀವಿಗೆ ಆನುತಾನದ ತನನನಾ। ನಾನು ನೀನಿನ ಈನಿನಾನಿಗೆ ಬೇನೇ ಏನೋ ಜಾಣೆ ನಾ॥ಪ॥ ಚಾರುತಂತ್ರಿಯ ಚರಣ ಚರಣದ ಘನ ಘನಿತ ಚತುರಸ್ವನಾ। ಹತವೊ ಹಿತವೊ ಆ ಅನಾಹತಾ ಇತಿಗೆಮಿತಿ ಇತಿ ನನನನಾ। ಬೆನ್ನಿ ನಾನಿಕೆ ಜನನ ಜಾನಿಕೆ ಮನನವೇ ಸಹಿ-ತಸ್ತನಾ॥1॥ ಚಿತ್ತೀಮಳಿ ತತ್ತೀ ಹಾಕುತಿತ್ತು ಸ್ವಾತಿ ಮುತ್ತಿನೊಳಗ। ಸತ್ತಿಯೋ ಮಗನಂತ ಕೂಗಿದರು ಸಾವೀ ಮಗಳು ಭಾವೀ ಮಗಳು ಕೂಡಿ॥2॥ ಈಜಗ, ಅಪ್ಪ ಅಮ್ಮನ ಮಗ ಅಮ್ಮನೊಳಗ ಅಪ್ಪನ ಮೊಗ। ಅಪ್ಪನ ಕುತ್ತಿಗೆ ಅಮ್ಮನ ನೊಗ ನಾ ಅವರ ಕಂದ ಶ್ರೀಗುರುದತ್ತ ಅಂದ। "ನಾನು" "ನೀನು" ಆನು ತಾನು? ನಾಕು ನಾಕೇ ತಂತಿ॥3॥॥2ಸಾರಿ॥ ಸೊಲ್ಲಿಸಿದರು ನಿಲ್ಲಿಸಿದರು। ಓಂದಂತಿ। ಗಣನಾಯಕ ಮೈಮಾಯಕ ಸೈಸಾಯಕ ಮಾಡಿ। ಗುರಿಯ ತೂರಿ ಕುರಿಯ ಕಣ್ಣಿ ಧಾತು ಮಾತು ಕೂಡಿ। ನಾನು, ನೀನು, ಆನು, ತಾನು-ನಾಕು ನಾಕೇ ತಂತಿ॥4॥

**ಇಲ್ಲೇ ಇರು, ಅಲ್ಲಿ ಹೋಗಿ ಮಲ್ಲಿಗೆಯನು** **ರಾಗ:ಶಂಕರಾಭರಣ**

ಇಲ್ಲೇ ಇರು ಅಲ್ಲಿ ಹೋಗಿ ಮಲ್ಲಿಗೆಯನು ತರುವೆನು॥ಪ॥ ನೇಹಕೆಂದು, ನಲುಮೆಗೊಂದು ಗುರುತನಿರಿಸಿ ಬರುವೆನು ಹೋದ ಮೇಲೆ ಸುತ್ತಬೇಕು ಏಳು ಕೋಟೆ ದ್ವಾರವು। ಹಾದಿಯಲ್ಲಿ ತೀರದಂಥ ದುಃಖವಿಹುದಪಾರವು। ಸಾಧಿಸುತ್ತ ಜಯಿಸುವದೇ ಬಾಳುವದರ ಸಾರವು॥1॥ ಇಲ್ಲಿ ಕೊನರದಂಥ ನೋವು ಫಲಿಸದಂಥ ಯಾತನೆ। ಇಲ್ಲಿ ನಿತ್ಯ ಕೊಳೆಯುತಿಹುದು ನನ್ನ ಜೀವ ಚೇತನ। ಇನ್ನು ಮೊಳ್‌ಗಿಸಿದರೆ ಮೊಳಗಿಸುವೆನು ಅದರ ಮಾತನೆ॥2॥ ನವಗ್ರಹಗಳ ನಾಡ ದಾಟಿ ಮಿಗಿಲ ಗಡಿ ಮೀರಿಯೂ ದಿಕ್ಕು ತಪ್ಪುತಲೆವ ತಾರೆಗಳಿಗೆ ದಾರಿ ತೋರಿಯೂ ಕತ್ತಲಿದ್ದ ತಾಣದಲ್ಲಿ ಎದೆಯ

ಬೆಳಕ ಬೀರಿಯೂ॥3॥ ಗಾನದುನ್ಮಾದವೇರಿ ನಡೆದ ರಾಜಭೃಂಗವು। ದೇವಕನ್ನಿಕೆಯರು ನುಡಿಸುವಂಥ ಮೃದು ಮೃದಂಗವು ಇದಕು ಹಿರಿದು ಎದೆಯಲಿರುವ ಭಾವನಾಂತರಂಗವು॥4॥ ಕೋಟಿ ವರುಷದಾಚೆ ಜನಿಸಿದಂಥ ಜೀವದಾಸೆಯು। ತೀರಬಹುದು, ಹಿಂಗಬಹುದು ಅಂದಿನ ಪಿಪಾಸೆಯು। ಇಂದೆ ರುಚಿರವಾಗಬಹುದು ನನ್ನ ದೈವರೇಷೆಯು॥5॥

**ಇರುಳು ಕವಿದ ಹೃದಯದಲ್ಲಿ** **ರಾಗ: ಹಮೀರ್ ಕಲ್ಯಾಣಿ**

ಇರುಳು ಕವಿದ ಹೃದಯದಲ್ಲಿ ನೆರಳು ಇರದ ಬೆಳಕ ಚೆಲ್ಲಿ। ಹೃದಯದಣತೆ ತೈಲವಾಗಿ ಈ ಸೊಡರು ಬೆಳಗಿದೆ॥ಪ॥ ಬಾಳ ದೀಪ ಬೆಳಗಲೆಂದು ಗಾಳಿ ಅದನು ಮುಟ್ಟದಂತೆ। ಸೆರಗ ನೆರಳು ಇತ್ತು ಅದಕೆ ದಾರಿಗೆಲ್ಲ ದೀಪವಾಗಿ। ಈ ಬಾಳು ಬೆಳಗಿದೆ॥ ಹೃದಯದಾಳದಲ್ಲಿ ನಿಂದು ಮಧುರ ವೀಣೆಯಾಗಿ ಮಿಡಿದು। ನಾದದಲೆಯ ಸುಧೆಯನಿತ್ತು ಈ ಹೃದಯ ತಣಿಸಿದೆ॥1॥ ಓರೆ ಕೋರೆ ಎಲ್ಲ ತಿದ್ದಿ ಬಾಳಿಗೊಂದು ಅರ್ಥವಿಟ್ಟು। ಬಾಳ ರಥವ ಕುದುರೆ ಮಾಡಿ ಸೂತ್ರವೆಲ್ಲ ಕೈಯಲ್ಲಿಡಿದು। ಈ ಬಾಳ ನಡೆಸಿದೆ॥ ಕಣ್ಣುಸುತ್ತ ಕೋಟೆಕಟ್ಟಿ, ದಾರಿಗೆಲ್ಲ ದೀಪವಾಗಿ। ಕೈಯಲೊಂದು ಛಾಟಿ ಹಿಡಿದು ಗಾಲಿಯೆಲ್ಲ ನೀನೆ ಆಗಿ ಈ ದಾರಿ ನಡೆಸಿದೆ॥2॥

**ಈ ನಮ್ಮ ನಾಡು** **ರಾಗ: ಶುದ್ಧಧನ್ಯಾಸಿ**

ಈ ನಮ್ಮ ನಾಡು ನಮ್ಮ ಜನ್ಮದಾ ಬೀಡು ಚೆನ್ನದಾ ನಾಡು। ನಮ್ಮ ತಾಯಿನಾಡು॥ಪ॥ ಚನ್ನಪುರವೆಂಬ ಅಭಿದಾನದಾ ನಾಡು। ನಮ್ಮ ಪೊತ್ತವರ ಹೆತ್ತವರ ನೆಲೆವೀಡು। ಹಿರಿಯರು ನಮ್ಮಿರಿಯರು ಅವರ್ಹಿರಿಯರು ಎಲ್ಲರಿಗು। ಆಶ್ರಯವನಿತ್ತ ನಮ್ಮ ತಾಯಿನಾಡು॥1॥ ಪೂರ್ವಕ್ಕೆ ಲಲಿತಾದ್ರಿ ಪಶ್ಚಿಮಕ್ಕೆ ಕರುಣಾದ್ರಿ। ಉತ್ತರಕ್ಕೆ ಹನುಮಾದ್ರಿ ದಕ್ಷಿಣಕೆ ಕಾವೇರಿ। ಅರ್ಕೆಯರ ಸಂಗಮದ ನಾಡು ಇದು ಎಲ್ಲ! ನಮ್ಮ ಸ್ವಂತದಾ ನಾಡು ಈ ತಾಯಿನಾಡು॥2॥ ಪರಮ ಪುಣ್ಯ ಕ್ಷೇತ್ರವಿದು ಎನ್ನಲು ಶ್ರೀರಾಮನಿಂ। ಅರ್ಚನೆಯನು ಗೊಂಡ ಶ್ರೀಅಪ್ರಮೇಯನೇ ಸಾಕ್ಷಿ। ಕಲಿಭೀಮ ಪುರುಷಾಮೃಗವನ್ನು ಸಂಧಿಸಿದ। ಸಹಸ್ರಲಿಂಗ ಕ್ಷೇತ್ರವಿದುವೆ ಸಾಕ್ಷಿ॥3॥ ಪರಮ ಪಾವನೆ ಕಣ್ವ ನದಿಯೊಂದೆ ಸಾಕ್ಷಿ। ಚಿರಶಾಂತಿಯಲಿ ಮಲಗಿರುವ ಪರಮ ಗುರುವರ। ವರಬ್ರಹ್ಮಣ್ಯರ ಬೃಂದಾವನ ಒಂದೇ ಸಾಕ್ಷಿ॥4॥

**ಉಡುಗಣ ವೇಷ್ಟಿತ** **ರಾಗ: ಯಮನ್**

ಉಡುಗಣ ವೇಷ್ಟಿತ, ಚಂದ್ರ ಸುಶೋಭಿತ ದಿವ್ಯಾಂಬರ ಸಂಚಾರಿ। ಕಣ್ಣ ನೀರಿನಲಿ ಮಣ್ಣ ಧೂಳಿನಲಿ ಹೊರಳುತ್ತಿರುವರ ಸಹಚಾರಿ॥ಪ॥ ಕೋಟಿ ಸೂರ್ಯಕರ ತೇಜ ಪುಂಜದರ। ವಿದ್ಯುತ್ತಾರ್ಚಿತ ರಥಗಾಮಿ। ಉಳುತಿಹ ರೈತನ ನೇಗಿಲ ಸಾಲಿನ। ಮಣ್ಣಿನ ರೇಖಾ ಪಥಗಾಮಿ॥1॥ ಬಾಂದಳ ಚುಂಬಿತ ಶುಭ್ರಹಿಮಾವೃತ। ತುಂಗ ಶೃಂಗದಲಿ ಗೃಹವಾಸಿ। ದೀನಾನಾಥರ ದುಃಖಿ ದರಿದ್ರರ। ಮುರುಕು ಗುಡಿಸಿಲಲಿ ಉಪವಾಸಿ॥2॥

**ಉಳ್ಳವರು ದೇಗುಲವ ಕಟ್ಟಿಹರಯ್ಯ** **ರಾಗ: ಹಿಂದೋಳ**

ಉಳ್ಳವರು ದೇಗುಲವ ಕಟ್ಟಿಹರಯ್ಯ ಪರದೇಸಿ ಎನ್ನಲೇನಿಹುದು। ನೀನಿತ್ತ ದೇಹವನೆ ದೇಗುಲವಮಾಡಿ। ಹೃತ್ಕಮಲ ಪುಲ್ಲಾರ ಪೀಠದಲಿ ಇಟ್ಟಿರುವೆ ಆತ್ಮವೆಂಬ ಲಿಂಗವನು॥1॥ ಅನುದಿನದಾ ಸ್ನಾನವೇ ಅಭಿಷೇಕ ಮುಗಿವ ಕರವೆರಡು ಬಿಡಿಹೂವು। ಅದುವೆ ನಿನ್ನರ್ಚನೆಯ ಬಿಲ್ವ। ಮಿಡಿವ ಕಣ್ಣೀರೆ ಸಿರಿಗಂಧ। ನುಡಿವನಲ್ವಾಕೆ ವೇದಮಂತ್ರ॥2॥ ದಿನದಿನದಾ ಆಹಾರವೆ ನೈವೇದ್ಯ ಎಳೆದು ಬಿಡುವ ಉಸಿರೇ ಚಾಮರವು। ನೀನಿತ್ತ ಕಣ್‌ಬೆಳಕೆ ನಂದಾದೀಪ। ಅದುವೆ ಕರ್ಪೂರದಾರತಿಯು। ಅನುದಿನದ ಕಾಯಕವೆ ನಿನ್ನಯ ಸೇವೆ॥3॥ ಎಲ್ಲವು ನೀನಿತ್ತ ಭಾಗ್ಯವಾಗಿರಲು ಕೊಡಲು ನನ್ನದೆಂಬುದೇನಿಹುದು। ದೃಢಭಕ್ತಿ ಎಂಬ ಬಿಡಿಹೂವು ಬಿಟ್ಟು। ಬಿಡದೆ ಕೈಹಿಡಿದು ನಡೆಸೊ ಕರುಣಾಳು॥4॥

**ಎದೆ ತುಂಬಿ ಹಾಡಿದೆನು** **ರಾಗ: ಕರ್ಣರಂಜನಿ**

ಎದೆ ತುಂಬಿ ಹಾಡಿದೆನು ಅಂದು ನಾನು। ಮನವಿಟ್ಟು ಕೇಳಿದಿರಿ ಅಲ್ಲಿ ನೀವು॥ಪ॥ ಇಂದು ನಾ ಹಾಡಿದರು ಅಂದಿನಂತೆಯೆ ಕುಳಿತು। ಕೇಳುವಿರಿ ಸಾಕೆನಗೆ ಅದುವೆ ಬಹುಮಾನ। ಹಾಡು ಹಕ್ಕಿಗೆ ಬೇಕೆ ಬಿರುದು ಸನ್ಮಾನ॥ಅ.ಪ॥॥ ಎಲ್ಲ ಕೇಳಲಿ ಎಂದು ನಾನು ಹಾಡುವುದಿಲ್ಲ। ಹಾಡುವುದು ಅನಿವಾರ್ಯ ಕರ್ಮ ನನಗೆ। ಕೇಳುವವರಿಹರೆಂದು ನಾ ಬಲ್ಲೆ ಅದರಿಂದ। ಹಾಡುವೆನು ಮೈದುಂಬಿ ಎಂದಿನಂತೆ। ಯಾರು ಕಿವಿ ಮುಚ್ಚಿದರು ನನಗಿಲ್ಲ ಚಿಂತೆ॥1॥

**ಎಲ್ಲ ಮರೆತಿರುವಾಗ** **ರಾಗ: ಶಿವರಂಜನಿ**

ಎಲ್ಲ ಮರೆತಿರುವಾಗ ಇಲ್ಲ ಸಲ್ಲದ ನೆವವ ಹೂಡಿ ಬರದಿರು ಮತ್ತೆ ಹಳೆಯ ನೆನಪೇ। ಕಲ್ಲಿನಂದದಿ ಬಿದ್ದು ತಿಳಿಯಾದ ಎದೆಗೊಳವ। ರಾಡಿಗೊಳಿಸುವೆ ಏಕೆ ಮಧುರ ನೆನಪೇ॥1॥ ಕಪ್ಪು ಕಣ್ಣಿನ ನೆಟ್ಟ ನೋಟದರೆಚಣವನ್ನೆ। ತೊಟ್ಟು ಬಾಣದ ಹಾಗೆ ಬಾರದಿರು ನೆನಪೇ। ಬಿರಿದ ತುಟಿಗಳ ತುಂಬುನಗೆಯ ಕಾರಣವನ್ನೆ ಇರಿದು ಕೊಲ್ಲಲು ಬಳಿಗೆ ಸಾರದಿರು ನೆನಪೇ॥2॥ ಸತ್ತ ಭೂತವನೆತ್ತಿ ಹದ್ದಿನಂದದಿ ತಂದು ನನ್ನ ಮನದಂಗಳಕ್ಕೆ ಹಾಕದಿರು ನೆನಪೇ। ಭವ್ಯ ಭವಿತವ್ಯಕೆ ಮೊಗಮಾಡಿ ನಿಂತಿರುವೆ। ಬೆನ್ನಲ್ಲೆ ಇರಿಯದಿರು ಓ ಚಿನ್ನ ನೆನಪೇ॥3॥

**ಎಲ್ಲ ಅನಿಶ್ಚಯ** **ರಾಗ: ಹಂಸನಾದ**

ಎಲ್ಲ ಅನಿಶ್ಚಯ ಒಂದೇ ಸುನಿಶ್ಚಯ ನಿನ್ನ ಅಚಿಂತ್ಯ ಅಪಾರದಯಾ। ದುಃಖ ಹಿರಣ್ಯನ ಸುಖನಖ ಕೃಪೆಯಿಂ। ಸೀಳ್ವ ನೃಸಿಂಹನ ಮುಖದಲದಯಾ॥1॥ ಎಲ್ಲ ಸುಚಂಚಲ ಒಂದೇ ಅಚಂಚಲ ಬಲ ನಿನ್ನ ಚರಣತಲ। ಭಕ್ತಿ ಎಲ್ಲ ಬಲಗಳಿಗೆ ತಾ ಮೂಲದ ಬಲ। ಸಕಲ ತಪೋತರು ಪರಮ ಫಲಾ॥2।

**ಎಲ್ಲಿರುವುದು ನಾವ್ ಸೇರುವ ಊರು** **ರಾಗ: ಕರ್ಣರಂಜನಿ**

ಎಲ್ಲಿರುವುದು ನಾವ್ ಸೇರುವ ಊರು। ಬಲ್ಲಿದರರಿಯದ ಯಾರೂ ಕಾಣದ। ಎಲ್ಲಿಯು ಇರದಾ ಈ ಊರು॥ಪ॥ ಭವಭಯವಿಲ್ಲದ ಊರಂತೆ। ದಿವಿಜರು ಬಯಸುವ ಊರಂತೆ। ತವರೂರಂತೆ ಬಹುದೂರಂತೆ। ಕವಿಗಳು ಕಂಡಿಹ ಊರಂತೆ॥1॥ ಜ್ಞಾನಿಗಳಿರುವುದೆ ಆ ಊರು। ಧ್ಯಾನದ ಮೇರೆಯೆ ಆ ಊರು। ನಾನಿಹ ಊರು, ಸಮೀಪದ ಊರು। ಮೌನತೆಯಾಳುವ ತವರೂರು॥2॥ ಅಲ್ಲಿರುವುದು ನಾ ಸೇರುವ ಊರು। ಬಲ್ಲಿದರರಿತ ಎಲ್ಲರೂ ಕಾಣುವ। ಎಲ್ಲಿಯೂ ಇರುವಾ ಊರು॥3॥

**ಎಲ್ಲೋ ಹುಡುಕಿದೆ** **ರಾಗ: ಹಂಸನಾದ**

ಎಲ್ಲೋ ಹುಡುಕಿದೆ ಇಲ್ಲದ ದೇವರ ಕಲ್ಲು ಮಣ್ಣುಗಳ ಗುಡಿಯೊಳಗೆ। ಇಲ್ಲೇ ಇರುವ ಪ್ರೀತಿ ಸ್ನೇಹಗಳ ಗುರುತಿಸದಾದೆನು ನಿಮ್ಮೊಳಗೆ॥ಪ॥ ಎಲ್ಲಿದೆ ನಂದನ ಎಲ್ಲಿದೆ ಬಂಧನ। ಎಲ್ಲಾ ಇರುವುದು ಈ ನಮ್ಮೊಳಗೆ। ಒಳಗಿನ ತಿಳಿಯದು ಕಲಕದೆ ಇದ್ದರೆ। ಅಮೃತದಾ ಸವಿಯಿದೆ ನಾಲಿಗೆಗೆ॥1॥ ಹತ್ತಿರವಿದ್ದು ದೂರ ನಿಲ್ಲುವೆವು। ನಮ್ಮ ಹಮ್ಮಿನ ಕೋಟೆಯೊಳು। ಎಷ್ಟು ಕಷ್ಟವೋ ಹೊಂದಿಕೆ ಎಂಬುದು। ನಾಲ್ಕು ದಿನದ ಈ ಬದುಕಿನಲಿ॥2॥

**ಏನು ಗೀತೆ ಹಾಡಲಿ** **ರಾಗ: ಶುದ್ಧಧನ್ಯಾಸಿ**

ಏನು ಗೀತೆ ಹಾಡಲಿ। ಎಂಥ ಭಾವ ತುಂಬಲಿ। ಭೀತಿ ಇಲ್ಲದ ಬದುಕಿನಲ್ಲಿ ಯಾವ ನೀತಿ ಹೇಳಲಿ॥ಪ॥ ರೀತಿ ಇಲ್ಲ ನೀತಿಇಲ್ಲ ಭಂಡ ಬದುಕು ಸಾಗಿದೆ। ಸ್ವಾರ್ಥದ ಬಿಸಿಉಸಿರು ಹೃದಯ ಸೂಸಿ ಬರುತಿದೆ। ಸ್ನೇಹ ಸಮತೆ ಸಹಕಾರ ಕಾಣಸಿಗದಾಗಿದೆ। ಪೊಳ್ಳು ಭರವಸೆಯೂ ಸುಳ್ಳು ಹೇಳುತ ಬರುತಿದೆ॥1॥ ವಿವಿಧ ಬಗೆಯ ವ್ಯಾಮೋಹದಿ ಮನಸು ಚಿಕ್ಕದಾಗಿದೆ। ಸತ್ಯನೀತಿ ನ್ಯಾಯಕ್ಕಾಗಿ ನಾಳೆ ಬನ್ನಿ ಎನುತಿದೆ। ಎಷ್ಟು ಬೇಕೊ ಅಷ್ಟು ಮೋಸ ನಯವಂಚನೆ ನಡೆದಿದೆ।

ಸಂಚುಗಾರ ಕುತಂತ್ರದಿ ಕುಬೇರನಾಗುವಂತಿದೆ।।2।। ಸಂಪ್ರದಾಯದ ಮುಗ್ಧತೆಯಲಿ ಅನಾಚಾರ ನಡೆದಿದೆ। ಕಡುಸ್ವಾರ್ಥದ ಕಿಡಿಗೇಡಿ ಬುದ್ಧಿ ಬಹಳವಾಗಿದೆ ಹೃದಯ ಅಗ್ನಿಕುಂಡವಾಗಿ ದಹಿಸಿ ಹೊತ್ತಿ ಉರಿದಿದೆ। ಅನಾಚಾರರ ಆಚಾರ ಆಚರಣೆಯಲ್ಲಿದೆ।।3।। ಬಣ್ಣ ಬಣ್ಣದ ಮಾತಿನಲ್ಲಿ ಬಿನ್ನಾಣದ ಬೆಡಗಿದೆ। ಮುಳುಗು ನಗೆಯ ಮಂತ್ರದಲ್ಲಿ ಕುತಂತ್ರದ ಕುಹುಕಿದೆ। ಗಂಭೀರದ ಗತ್ತಿನಲ್ಲಿ ಗೌಪ್ಯವಾದ ಗುಟ್ಟಿದೆ। ಭಂಡನೀತಿಯಿಂದ ಭವಿಷ್ಯ ಕಳೆದುಹೋಗುವಂತಿದೆ।।4।।

### ಏಳು ಸ್ವರವು ಸೇರಿ ಸಂಗೀತವಾಯಿತು

ಏಳು ಸ್ವರವು ಸೇರಿ ಸಂಗೀತವಾಯಿತು। ಏಳು ಬಣ್ಣ ಸೇರಿ ಬಿಳಿಯ ಬಣ್ಣವಾಯಿತು। ಏಳು ದಿನವು ಸೇರಿ ಒಂದು ವಾರವಾಯಿತು। ಏಳು ತಾರೆ ಸಪ್ತ ಋಷಿಯ ಚಿನ್ಹೆಯಾಯಿತು।।ಪ।। ಕಡಲಿನಿಂದ ನೀರ ಆವಿ ಮೋಡವಾಯಿತು। ಮೋಡ ಗಿರಿಗೆ ಮುತ್ತ ನಿಡೆ ಮಳೆಯು ಆಯಿತು। ಮಳೆಯು ನೆಲಕೆ ಬೀಳಲು ಬೆಳೆಯು ಆಯಿತು। ಬೆಳೆದ ಕಾಳು ನಮಗೆ ತಾನು ಅನ್ನವಾಯಿತು।।1।। ಬೀಜ ಮೊಳೆತು ಸಸಿಯಾಗಿ ಹೂವು ಬಿಟ್ಟಿತು। ಹೂವಿನಿಂದ ಹೂವಿಗೆ ದುಂಬಿ ಹಾರಿತು। ದುಂಬಿ ಆಟ ಹೂವನು ಕಾಯಿ ಮಾಡಿತು। ಕಾಯಿ ಮಾಗಿ ಹಣ್ಣು ಆಗಿ ಬೀಜ ತಂದಿತು।।2।।

### ಅಂತರಂಗದಾ ಮೃದಂಗ ರಾಗ: ಶುದ್ಧಧನ್ಯಾಸಿ

ಅಂತರಂಗದಾ ಮೃದಂಗ ಅಂತುತೊಂತನಾನಾ। ಚಿತ್ತ ತಾಳ ಬಾರಿಸುತಲಿತ್ತು ಝುಂಣ್‌ಝುಣ ಣಾಣಾ ನೆನಹು ತಂತಿ ಮೀಟುತಿತ್ತು ತಂತನನ ತಾನ।।1।। ಹಲವು ಜನುಮದಿಂದ ಬಂದ ಯಾವುದೇನೋಧ್ಯಾನ। ಏಕ ನಾದದಂದದೊಂದು ತಾನದಾವಿತಾನ। ತನಗೆ ತಾನೆ ಸೋಲುತಿಹುದು ನೂಲುತಿಹುದು ಗಾನ।।2।। ಕಲ್ಪದಾದಿಯಲ್ಲೆ ನನ್ನ ನಿನ್ನ ವಿರಹವಾಗಿ। ಎಲ್ಲೊ ಏನೊ ನಿನ್ನ ಹುಡುಕಿ ಕಾಂಬ ಕಣ್ಣೆ ಹೋಗಿ ಮರೆವೆಗೊಂಡು ಬಿದ್ದೆ ನಾನು ನೆಲದ ಮಣ್ಣುತಾಗಿ।।3।। ಕತ್ತಲಲ್ಲೆ ಬೆಳಕು ಮಿಂಚಿ ಪಡೆದಿತೇಳು ಬಣ್ಣ। ಮೂಕ ಮೌನ ತೂಕ ಮೀರಿ ದನಿಯು ಹುಟ್ಟಿ ಸಣ್ಣ। ಕಣ್ಣ ಮಣ್ಣ ಕೂಡಲಲ್ಲಿ ಹಾಡುಕಟ್ಟಿತಣ್ಣ।।4।।

### ಕತ್ತಲು ಕವಿಯಿತು ಕಡುಘೋರವಾಗಿ ರಾಗ: ಕಲ್ಯಾಣಿ

ಕತ್ತಲು ಕವಿಯಿತು ಕಡುಘೋರವಾಗಿ। ಕಾಣದಾಯ್ತು ದಾರಿ ಪ್ರಭೋ।।ಪ।। ನಡೆದು ನಡೆದು ಬಲು ಬಳಲಿ ಸೋತರೂ। ಸವಯದಾಯ್ತು ದಾರಿ-ಪ್ರಭೋ।।ಅ.ಪ।। ದೂರ ದೂರ ಬಲು ದೂರ ನಿನ್ನ ಮನೆ। ಬರುವೆನೆಂತು ಬಳಿ ಸಾರಿ-ಪ್ರಭೋ ಮುಗಿಸುಬೇಗ ಈ ಕಠಿಣ ಯಾತ್ರೆಯನೂ। ನಿನ್ನ ಮುಖವ ತೋರಿ-ಪ್ರಭೋ।।1।।

### ಕಲಾರಸಿಕ ಸಾಗರಕೆ ರಾಗ: ಕಲ್ಯಾಣಿ-ರೂಪಕತಾಳ

ಕಲಾರಸಿಕ ಸಾಗರಕೆ ನಮ್ಮ ಕೋಟಿ ನಮನ। ಕನ್ನಡಿಗರ ಕಾವ್ಯ ನುಡಿಯೆ ನಮ್ಮ ನಿಮ್ಮ ಬಂಧನ।।ಪ।। ನಮ್ಮ ಹಾಡು ನಿಮ್ಮ ಹೃದಯ ನಡುವೆ ಸ್ನೇಹ ಕಿರಣ...। ನಮ್ಮ ಶೃತಿಗೆ ನಿಮ್ಮ ತಾಳ ಸಾ....।। ನಿರಿಸನಿದಪ ಮದಪಮಗರಿ।।ನಿರಿಗಾ...।। ನಮ್ಮ ಶೃತಿಗೆ ನಿಮ್ಮ ತಾಳ ಮನದ ಆಳ ಮಂಥನಾ....।।1।। ತುಂಬು ಭಾವ ತೊದಲು ನುಡಿಯೆ ಬದುಕಿಗಿಂದು ನಂದನ...। ನಮ್ಮ ಉಳಿವು ನಿಮ್ಮ ನಲಿವು ಸಾ......।। ನಿರಿಸನಿದಪ ಮದಪಮಗರಿ।। ನಿರಿಗಾ....।। ನಮ್ಮ ಉಳಿವು ನಿಮ್ಮ ನಲಿವು ಇರಲಿ ಚಿರನೂತನ।।2।।

### ಕಲ್ಲಿನಲಿ ಕೆತ್ತಿದನು ಶಿಲ್ಪಿಯವ ಶಿವನ ರಾಗ: ಶಿವರಂಜನಿ

ಕಲ್ಲಿನಲಿ ಕೆತ್ತಿದನು ಶಿಲ್ಪಿಯವ ಶಿವನ ದೇಗುಲದಿ ಕೂಡಿದನು ವೈದಿಕನು ಅವನ। ಕರುಣಾಳು ಶಿವನವನು ಕಲ್ಲಾದನೇಕೆ। ಮನದಲ್ಲೆ ಇರುವವಗೆ ಮನೆ ಬೇರೆ ಬೇಕೆ?।।ಪ।। ಇರೋವೊಂದು ದೈವಕ್ಕೆ ನೂರೂ ಹೆಸರಿಟ್ಟು। ಅವನ್ಹೆಚ್ಚು ಇವನ್ಹೆಚ್ಚು

ಎನುತ ಬೊಬ್ಬಿಟ್ಟು। ಹೇಳುವುದು ಒಂದು ಮಾಡುವುದು ಮತ್ತೊಂದು। ಶಿವ ಬೆದರಿ ನೋಡಿದನು ಇದನೆಲ್ಲ ನಿಂತು।।1।। ಹಾರುವನು ಬಂದಾಗ ಜನಿವಾರವಿತ್ತೆ? ಶಿವಭಕ್ತ ಬಂದಾಗ ಶಿವದಾರವಿತ್ತೇ? ಪ್ರತಿಯೊಬ್ಬ ಮಾನವನು ಬೆತ್ತಲೆಯೆ ಬಂದು। ಆಮೇಲೆ ಕಿತ್ತಾಟ ಮೇಲು ಕೀಳೆಂದು।।2।। ಹೊಲೆಯ ನಿನ್ನಯ ಮನದಿ ಶಿವನು ತಾನಿರಲು। ಅಡ್ಡಿಮಾಡಿಹರು ನೀ ದೇಗುಲಕ್ಕೆ ಬರಲು। ಕೀಳೆಂದು ಅಳಬೇಡ ಶಿವನ ಮಗ ನೀನು। ಹೃದಯದಲಿ ತುಂಬಿರಲಿ ಭಕ್ತಿಯಾ ಜೇನು।।3।।

**ಕಗ್ಗಲ್ಲ ಕಣಿವೆಯಲಿ** **ರಾಗ: ಪುನ್ನಾಗವರಾಳಿ**

ಕಗ್ಗಲ್ಲ ಕಣಿವೆಯಲಿ ಇಬ್ಬರೇ ಬರುವಾಗ। ತಬ್ಬಿದರೆ ಏನಾಗುವುದೆ ಎಲೆನಾರಿ। ಎತ್ತಿದರೆ ಏನಾಗುವುದೇ? ಅತ್ತೆಯ ಮಗಳೆಂದು ಹತ್ತಿರಕ್ಕೆ ಬಂದು ಎತ್ತಿದರೆ ಏನಾಗುವುದೆ ಎಲೆನಾರಿ? ಮುಟ್ಟಿದರೆ ಏನಾಗುವುದೇ? ಮಾವನ ಮಗಳೆಂದು ಮಾತಿಗೆ ಕರೆದರೆ ಮಾತಿನಿಂದ ಏನಾಗುವುದೆ? ಎಲೆನಾರಿ। ಪ್ರೀತಿಸಿದರೆ ಏನಾಗುವುದೇ?

**ಕವಿಗೋಷ್ಠಿಯೊಂದು** **ರಾಗ: ಮಧ್ಯಮಾವತಿ**

ಕವಿಗೋಷ್ಠಿಯೊಂದು ಕೂಡ್ಯೆತೆ ಇಲ್ಲಿ। ಕವಿತಾ ವಾಚನ ನಡಿತ್ಯೆತೆ ಇಲ್ಲಿ। ಮುದ್ದು ಮುದ್ದಾದ ಕವಿತ್ವ ಆಳೆಯಲು। ಹಿರಿಯರ ಗುಂಪು ನೆರೆದ್ಯೆತೆ।।1।। ಮಗುವಿನ ತೊದಲುನುಡಿ ತಾಯೀಗೆ ತಿಳೀತ್ಯೆತೆ। ಅದರರ್ಥ ಏನೆಂದು ಅದಕ್ಮಾತ್ರ ಗೊತ್ತ್ಯೆತೆ। ಮಕ್ಕಳ ತಪ್ಪನ್ನ ತಿದ್ದೋಕೆ ಬಂದವ್ರೆ। ಪ್ರೋತ್ಸಾಹ ನೀಡಿ ಹರಸ್ತಾರೆ।।2।। ಹೆತ್ತೋರ್ಗೆ ಹೆಗ್ಣಮುದ್ದು ಅನ್ನುವ ನುಡಿಹಾಂಗೆ। ನಮ್ಮಯ ಕವಿತ್ವ ಕಳಪೇನೆ ಆಗಿದ್ರು। ಮೇಲ್ ಪಂಕ್ತಿ ಹಾಕಿ ನಲ್ಮೆಯಿಂದಾಲಿಸಿ। ಬೆಳೆಯುವ ಬಗೆಯ ಬಣ್ಣಿಸಿ ಹೇಳ್ತಾರೆ।।3।।

**ಕಾಣಬಹುದು ಹೇಗೆ ನಿನ್ನ** **ರಾಗ: ಶಿವರಂಜನಿ**

ಕಾಣಬಹುದು ಹೇಗೆ ನಿನ್ನ ಕರೆಯಬಹುದು ಹೇಗೆ? ಯಾವ ಎಲ್ಲೆ ಇರದ ನಿನ್ನ ಅರಿಯಬಹುದು ಹೇಗೆ?।।ಪ।। ಹಗಲು ನಗಲು ಬೆಳಕ ಚೆಲ್ಲಿ ದೃಷ್ಟಿಕೊಡುವ ದಿವ್ಯವೆ। ಇರುಳಿನಲ್ಲಿ ನೀಲ ನಭದಿ ದೀಪವುರಿವ ಕರುಣೆಯೆ। ಮಳೆ ಬಿಸಿಲಿನ ಹೊಳೆ ಉಸಿರಿನ ಪಾದದಲ್ಲಿ ಚಲಿಸಿ। ಉದಯಾಸ್ತದ ಹೊನ್ನ ಬಣ್ಣದಲ್ಲಿ ಪುಟಿವ ಭಾಗ್ಯವೆ।।1।। ಎದೆಯಲ್ಲೆಲ್ಲೂ ಹೊಳೆದು ತುಟಿಯ ತುದಿಗೆ ಬರದೆ ನಿಲ್ಲುವೆ। ಬಳಿಯೆ ನಿಂತು ಸಿಗದೆ ನಿನ್ನ ಹಂಗಿಸುತ್ತ ನಗುವೆ। ನಿನ್ನ ಹೊರತು ಬಾಳೆಲ್ಲವು ಬರಿದು ಎಂದೆನಿಸುವೆ। ಜೀವನದೀ ನಿಡುಯಾತ್ರೆಗೆ ಅಂತಿಮಗುರಿ ಎನಿಸಿಹೆ।।2।।

**ಕುಣಿಯೋಣು ಬಾರಾ** **ರಾಗ: ಪುನ್ನಾಗವರಾಳಿ**

ಕುಣಿಯೋಣು ಬಾರಾ ಕುಣಿಯೋಣು ಬಾ।।ಪ।। ಆಕಾಗಿ ಯಾಕಾಗಿ ಕುಣಿಯೋಣು ಬೇಕಾಗಿ। ಇಲ್ದ ಬಣ್ಣದ ಸೋಗಿ ಕುಣಿಯೋಣ ಬಾ ಹಿಗ್ಗು ಹಾಕಿತು ಕ್ಯಾಕಿ ಇರಲಾರೆನೇ ಕಾಕಿ। ಬಾಬಾರಾ ನನ್ನಾಕಿ ಕುಣಿಯೋಣು ಬಾ।।1।। ತಿಣಿತಿಣಿಕಿ ಇಣಿಇಣಿಕಿ ಹಣಹಣಕಿ ಸಾಕಾತು ಸುಳ್ಳೆಣಿಕಿ ಈ ಬದುಕು ಬರಿ ಭ್ರಮಿ ತಕಧಿಮಿ(2ಸಾರಿ)। ಹಾಂಗೊಮ್ಮೆ ಹೀಂಗೊಮ್ಮೆ ಕುಣಿಯೋಣು ಬಾರ।।2।। ಇದ್ದದ್ದು ಮರೆಯೋಣ ಇಲ್ಲದ್ದು ತೆರೆಯೋಣ। ಹಾಲ್ಜೇನು ಸುರಿಸೋಣ ಕುಣಿಯೋಣ ಬಾ।।3।। ತಾಳ್ಯಾಕ ತಂತ್ಯಾಕ ರಾಗಾದ ಚಿಂತ್ಯಾಕ ಹೆಜ್ಜ್ಯಾಕ ಗೆಜ್ಜ್ಯಾಕ ಕುಣಿಯೋಣು ಬಾ।।4।। ಕುಲುಕಿಸಿ ಕೈಕೈ ಮಲಕಿಸಿ ಮೈಮೈ ಥಕಥಕ ಥೈ ಥೈ ಹದಿನಾಲ್ಕು ಲೋಕಕ್ಕೆ ಚಿಮ್ಮಲಿ ಈ ಸುಖ ಹಿಗ್ಗು ಸಿರಿಮುಖ ಕುಣಿಯೋಣು ಬಾ।।5।।

**ಗಿರಿಯ ಮುಡಿಗೆ ಸೂರ್ಯಬಿಂಬ** **ರಾಗ: ಶಿವರಂಜನಿ**

ಗಿರಿಯ ಮುಡಿಗೆ ಸೂರ್ಯಬಿಂಬ ಹುಲ್ಲ ಹೆಡೆಗೆ ರತ್ನಬಿಂಬ(2ಸಾರಿ)। ಕಂಬನಿಯದು ಕಣ್ಣತುಂಬ।।ಪ।। ತಂಗಾಳಿಗೆ ಹೂವಗಂಧ ತಾರೆಗಿಡಕ್ಕೆ ಹಾರಚೆಂದ ಹೊಟ್ಟೆಗೆ ಹಸಿವೆಂಬ ಕಂದ।। ಹರಿವ ನದಿಗೆ ಸರಿವ ತೆರೆಯ ತುಂಬಿದೆ ಹೂ

ದಡದ ಮರೆಯ ಹೆಗಲಿಗೆ ಕಟ್ಟೆನ್ನ ಹೊರೆಯ॥1॥ ಬಯಲಿಗೆ ಆಕಾಶದೀಪ ಹಸುರಿಗೆ ಮಳೆಶಾಪ। ಬೆಳಕಿಗೆಷ್ಟು ನೆರಳತಾಪ॥ ಹೂವಿಗನಂತ ಸಂತಾನ, ದಂಡೆಯಾಗಿ ನೋವ ರಾಗ। ಅದನು ನುಡಿಯಲೊಂದು ತಾನ॥2॥

**ಗುಡುಗುಡು ಮುತ್ತ್ಯಾ ಬಂದಾನ** **ರಾಗ: ಪುನ್ನಾಗವರಾಳಿ**

ಗುಡುಗುಡು ಮುತ್ತ್ಯಾ ಬಂದಾನ। ಗಡಗಡ ಸದ್ದನು ಮಾಡ್ಯಾನ। ಗಾಳಿ ಕುದುರೆ ಏರ್‍ಯಾನ। ಮೇಲಕೆ ಮೇಲಕೆ ಹಾರ್‍ಯಾನ॥1॥ ದಡಬಡ ಬಾಗಿಲು ಬಡಿದಾನ। ಮೋಡದ ಮನೆಯ ಹೊಕ್ಕಾನ। ಸಿಡಿಲನು ಸಿಡಿಸುತ ನಿಂತಾನ। ಧೋಧೋ ಮಳೆಯನು ಸುರಿಸ್ಯಾನಾ॥2॥ ಕಾಮನ ಬಿಲ್ಲನು ಕಟ್ಯಾನ। ಆಲಿ ಕಲ್ಲನು ಹರಿವ್ಯಾನ। ಹಳ್ಳಕೆ ಹರೆಯ ತಂದಾನ॥3॥ ಕೆರೆಬಾವಿಗಳನು ತುಂಬ್ಯಾನ॥ಹೊಳೆಗಳ ಹಾಡಲು ಹಚ್ಚ್ಯಾನ। ನೆಲಹೊಲ ನೀರನು ಹರಿಸ್ಯಾನ। ಗಿಡಮರ ಬಳ್ಳಿಗೆ ಉಣಿಸ್ಯಾನ। ಭೂಮಿಗೆ ತಂಪನು ತಂದಾನ॥4॥ ಬಿಸಿಲಿನ ಬೇಗೆ ತಣಿಸ್ಯಾನ। ಗುಡು ಗುಡು ಮುತ್ತ್ಯಾ ಬಂದಾನ॥5॥

**ಗಂಗಾಂತರಂಗವಿದೆ ಸಂಗೀತವಿದೆ** **ರಾಗ: ಸೌಖ್ಯದಾಯಿನಿ**

ಗಂಗಾಂತರಂಗವಿದೆ ಸಂಗೀತವಿದೆ ಕಿವಿಗೆ। ಹಿಮಗಿರಿ ಬೃಹತ್‌ದೃಶ್ಯ ಕಣ್ಣುಗಳಿಗೆ॥ಪ॥ ಕರುನಾಡ ಚಂದನದ ನರುಗಂಪು ನಾಸಿಕಕೆ। ಜಲಧಿ ಸಂಗಮ ಸಲಿಲ ಮಾರ್ಜಲವು ಮರಳೆ। ಮಲಯ ಮಾರುತದ ಮಧುರ ಸೋಂಕು ಸರ್ವಾಂಗಕ್ಕೆ। ನೂರು ಶತಮಾನಗಳ ಸತ್ಯಮನಕೆ॥1॥ ಮರಮರಕೆ ಫಲ ಮಧುವು ಹೆಜ್ಜೆ ಹೆಜ್ಜೆಗೂ ನಿಧಿಯು। ಹೊಲಗದ್ದೆ ಕಡಲಿನಲಿ ಆಹಾರ ಮಧುವು। ಏನುಂಟು ಏನಿಲ್ಲ ಭಾರತದಿ ಓ ಬಂಧು। ಪಡೆಯದಿಹುದೇನಿಲ್ಲಿ ನೀ ಓಡಿ ಬಂದು। ಎಲ್ಲ ಇದ್ದೂ ಇಲ್ಲಿ ನಿನಗೆ ಆದರ ಸೊನ್ನೆ। ಯಾಕೆಂದು ಕೇಳಿಕೊ ನೀನು ನಿನ್ನನ್ನೆ॥2॥

**ಚಳಿಗಾಲ ಬಂದಾಗ ಎಷ್ಟು ಚಳಿ** **ರಾಗ: ಸಿಂಧುಭೈರವಿ**

ಚಳಿಗಾಲ ಬಂದಾಗ ಎಷ್ಟು ಚಳಿ ಎಂದರು। ಬಂತಲ್ಲ ಬೇಸಿಗೆ ಕೆಟ್ಟ ಬಿಸಿಲೆಂದರು। ಮಳೆಬಿತ್ತೊ ಬಿಡದಲ್ಲ ಶನಿ ಎಂಬ ಟೀಕೆ। ಇವರು ಮೆಚ್ಚುವ ವಸ್ತು ಇಲ್ಲಿಲ್ಲ ಜೋಕೆ॥1॥ ಚಿಗುರು ಚಿನ್ನದ ನಡುವೆ ಹೂವ ಬಯಸುವರು। ಹೂಗಳ ಕಾಲದಲ್ಲಿ ಹಣ್ಣ ಹೊಗಳುವರು। ಹಣ್ಣಿನಾ ಗಾತ್ರ ಪೀಚು ಎಂದಿವರ ಟೀಕೆ। ಇವರು ಮೆಚ್ಚುವ ವಸ್ತು ಇಲ್ಲಿಲ್ಲ ಜೋಕೆ॥2॥ ನಿಂತವರ ಕೇಳುವರು ನೀನೇಕೆ ನಿಂತೆ? ಮಲಗಿದರೆ ಗೊಣಗುವರು ನಿನಗಿಲ್ಲ ಚಿಂತೆ। ಓಡಿದರೆ ಬೆನ್ನ ಹಿಂದೆಯೇ ಇವರ ಟೀಕೆ। ಇವರು ಮೆಚ್ಚುವ ವಸ್ತು ಇಲ್ಲಿಲ್ಲ ಜೋಕೆ॥3॥ ಓದಿದರೆ ಹೇಳುವರು ಮತ್ತೊಮ್ಮೆ ಬರೆಯೊ। ಬರೆದಿಡಲು ಬೆದಕುವರು ಬರವಣಿಗೆ ಸರಿಯೊ। ಇವರ ಬಯಕೆಗಳೇನೋ? ಇವರದೇ ಟೀಕೆ। ಇವರು ಮೆಚ್ಚುವ ವಸ್ತು ಇಲ್ಲಿಲ್ಲ ಜೋಕೆ॥4॥

**ಜೀವಕುಸುಮವಿದು ಮೀಸಲೂ** **(ಜಾನಪದ ಧಾಟಿ)**

ಜೀವಕುಸುಮವಿದು ಮೀಸಲೂ ನಿನಗೆ। ನೇಸರನ ಹೊಂಗಿರಣ ಸೋಂಕದ ಮುನ್ನ। ಜೀವನ ಬಿರುಗಾಳಿ ಬೀಸುವ ಮುನ್ನ। ಉದ್ಧರಿಸು ದೇವ ದೇವಾದಿ ದೇವ॥1॥ ಪಾತಾಳದಿಂದಾಚೆ ನಿನ್ನಯ ಚರಣ। ಬ್ರಹ್ಮಾಂಡದಿಂದಾಚೆ ನಿನ್ನಯ ಮುಕುಟ। ಬೃಹತ್ ನೀನು ಅಲ್ಪತೆಯು ನಾನು। ಉದ್ಧರಿಸು ದೇವಾ ದೇವಾದಿ ದೇವ॥2॥ ಬೇಡನಾ ಕೊಂಡೊಯ್ದೆ ಕೈಲಾಸಗಿರಿಗೆ। ಕೂರಂಬು ಎಸೆದ ನರನಿಗೆ ಒಲಿದೆ। ಭಕ್ತಿಯ ಪ್ರಿಯನೀನು ಭಕ್ತರ ಪ್ರಿಯನೀನು। ಉದ್ಧರಿಸು ದೇವಾ ದೇವಾದಿ ದೇವಾ॥3॥

**ತನುವು ನಿನ್ನದು ಮನವು ನಿನ್ನದು** **ರಾಗ: ಸಿಂಧುಭೈರವಿ**

ತನುವು ನಿನ್ನದು ಮನವು ನಿನ್ನದು। ಎನ್ನ ಜೀವನ ಧನವು ನಿನ್ನದು। ನಾನು ನಿನ್ನವನೆಂಬ ಹೆಮ್ಮೆಯ। ಋಣವು ಮಾತ್ರವೆ

ನನ್ನದು....॥ಪ॥ ನೀನು ಹೊಳೆದರೆ ನಾನು ಹೊಳೆವೆನು। ನೀನು ಬೆಳೆದರೆ ನಾನು ಬೆಳೆವೆನು। ನನ್ನ ಹರಣದ ಹರಣ ನೀನು। ನನ್ನ ಮರಣದ ಮರಣವು॥1॥ ನನ್ನ ಮನದಲಿ ನೀನೆ ಯುಕ್ತಿ। ನನ್ನ ಮನದೇ ನೀನೆ ಭಕ್ತಿ। ನೀನೆ ಮಾಯಾ ಮೋಹ ಶಕ್ತಿಯು। ನನ್ನ ಜೀವನ ಮುಕ್ತಿಯು॥2॥

**ತೋಟಗಾರನ ತಂಗಿ ಚಂದಮ್ಮ** **ರಾಗ: ಮೋಹನ**

ತೋಟಗಾರನ ತಂಗಿ ಚಂದಮ್ಮ ಬಹಳೆಂದು ಕಾದಿರುವೆನವಳಿಗಾಗಿ। ಜೋಡಿ ತೆಂಗಿನ ಮರದ ಭಾವಿಯಲಿ ತಿಳಿನೀರು ಕಾದಿರುವುದವಳಿಗಾಗಿ। ಚಂದಮ್ಮ ಬಂದಾಳು ಬಿಂದಿಗೆಯ ತಂದಾಳು(2ಸಾರಿ) ಸೇದ್ಯಾಳು ಬಾಗಿದೂಗಿ॥ಪ॥ ನೀರಸೇದೋ ಹೆಣ್ಣೆ ನಿಲ್ಲೆಂದು ಕೂಗಿದರೆ ನಿಂತಾಳು ನನ್ನ ಕಂಡು। ಹೊನ್ನೂರ ದಾರಿಯಲಿ ಹೂವೆಲ್ಲ ನಗುವಂತೆ ನಕ್ಕಾಳು ಇತ್ತ ಬಂದು। ಚಂದಮ್ಮ ಬಂದಾಳು ಬಿಂದಿಗೆಯ ತಂದಾಳು ಬಳುಕುತ್ತ ಬಂದು॥1॥ ಬಾವಿಯಲಿ ಬಿಂದಿಗೆಯ ಬಿಡುವಾಗ ಕೈ ತಡೆದು ಒಪ್ಪಿದೆಯ ಮದುವೆಗೆಂದು। ಸೆರೆಗೆಳದು ಕೇಳೇನು ಚಂದಮ್ಮ ನೀನೆಂದು ನನ್ನೊಡನೆ ಬರುವೆಯೆಂದು। ಚಂದಮ್ಮ ಕೈ ಬಳೆಯ ಸದ್ದಿನಲೆ ನುಡಿದಾಳ ಉತ್ತರವ ನಗುತಲಿಂದು। ಚಂದಮ್ಮನೊಪ್ಪಿದರೆ ಅಂದಣವ ತಂದೇನು ಚಂದುಳ್ಳಿ ಹುಡುಗಿ ಎಂದು॥2॥ ಅವಳಯ್ಯ ಕೇಳಿದರೆ ಅವನುದ್ದ ಸುರಿದೇನು ಬೆಳ್ಳಿಯನು ಕೊಂಡುತಂದು। ಚೆಂದಮ್ಮ ಬಂದಾಳು ಬೆಳಕಾಗಿ ನಿಂತಾಳು ನನ್ನ ಮನೆಗೊಲಿದು ಬಂದು॥3॥ ಚಂದಿರನ ಮಗಳಂಥ ಚಂದಮ್ಮ ಗುಣವಂತೆ ಒಪ್ಯಾಳು ಕಟ್ಟಕಡೆಗೆ। ಹಾಲುಂಡು ಹೂಮುಡಿದು ನನ್ನೊಡನೆ ಸಿರಿವಂತೆ ಬಂದಾಳು ನನ್ನ ಮನೆಗೆ। ಚಂದಮ್ಮ ಬಂದಾಳು ಚಂದಿರನ ಬೆಳಕಂತೆ(2ಸಾರಿ) ತಂದಾಳು ಸುಖವ ನನಗೆ॥4॥ ಹಬ್ಬದೂಟವನುಂಡು ಒಬ್ಬಳೇ ಬಂದಾಳು ಬಂದಾಳು ನೀರ ಬಳಿಗೆ। ಹಳ್ಳದಿಣ್ಣೆಯ ದಾಟಿ ಮುಳ್ಳು ಬಾಗಿಲ ಮೀಟಿ ಬಂದಾಳು ಎನ್ನ ಚೆಲುವೆ। ಚಂದಮ್ಮ ಬಂದಾಳು ಚಂದಿರನ ಬೆಳಕಂತೆ ಬಂದಾಳು ನೀರ ಬಳಿಗೆ॥5॥

**ದೀಪವು ನಿನ್ನದೇ ಗಾಳಿಯು ನಿನ್ನದೇ** **ರಾಗ:ಕಾಮವರ್ಧಿನಿ**

ದೀಪವೂ ನಿನ್ನದೇ ಗಾಳಿಯು ನಿನ್ನದೇ ಆರದಿರಲೀ ಬೆಳಕು। ಕಡಲೂ ನಿನ್ನದೇ ಹಡಗೂ ನಿನ್ನದೇ ಮುಳುಗದಿರಲೀ ಬದುಕು॥ಪ॥ ಬೆಟ್ಟವು ನಿನ್ನದೇ ಬಯಲು ನಿನ್ನದೇ ಹಬ್ಬಿ ನಗಲಿ ಪ್ರೀತಿ...... ನೆಳಲೋ ಬಿಸಿಲೋ ಎಲ್ಲವು ನಿನ್ನದೇ ಇರಲಿ ಏಕರೀತಿ..... ॥1॥ ಆಗೊಂದು ಸಿಡಿಲು ಈಗೊಂದು ಮುಗಿಲು ನಿನಗೆ ಅಲಂಕಾರ......। ಅಲ್ಲೊಂದು ಹಕ್ಕಿ ಇಲ್ಲೊಂದು ಮುಗಿಲು ನಿನಗೆ ನಮಸ್ಕಾರ॥2॥ ಅಲ್ಲಿ ರಣದುಂಧುಭಿ ಇಲ್ಲೊಂದು ವೀಣೆ ನಿನ್ನ ಪ್ರತಿಧ್ವನಿ। ಆ ಮಹಾಕಾವ್ಯ ಈ ಭಾವಗೀತೆ ನಿನ್ನ ಪದ ಧ್ವನಿ.....॥3॥

**ದೂರ2 ಸಾಗುವ ಬಾಳಹೊನಲ** **ರಾಗ: ಸಿಂಧುಭೈರವಿ**

ದೂರ ದೂರ ಸಾಗುವ ಬಾಳಹೊನಲ ತೀರಕೆ। ತೇಲಿತೇಲಿ ಹೋಗುವ ಮನದ ಕಲಡ ತೀರಕೆ॥ಪ॥ ಹುಟ್ಟು ಹಾಕಿ ಮುಂದೆಸಾಗಿ ಗುರಿಯ ಮುಟ್ಟುವ। ಕೆಚ್ಚಿದೆಯ ನಾವೆಯಿಂ ಬಾಳಯಾನ ಮಾಡುವ। ಮೇಲೆ ನೀಲ ಮುಗಿಲಸುತ್ತ ಸೃಷ್ಟಿದರ್ಶನ। ತೇಲುತಿದೆ ಬಾಳದೋಣಿ ಅಂತ್ಯತಾನ ಯೋಜನ॥1॥ ಹಕ್ಕಿಯಂತೆ ಹಾರುವಾ ಮೋಡದಂತೆ ತೇಲುವಾ। ನಕ್ಕುನಲಿವ ಹೂವಾಗಿ ಬಾಳತೀರ ಸೇರುವಾ॥ ದೂರದೂರ ಸಾಗುವ ಬಾಳ ಸಗ್ಗಕೆ। ತೇಲಿ ತೇಲಿ ಹೋಗುವ ಮನದ ಕಡಲ ತೀರಕೆ॥2॥

**ದೂರ ಬಹುದೂರ ಹೋಗುವ** **ರಾಗ: ಶುದ್ಧಧನ್ಯಾಸಿ**

ದೂರ ಬಹುದೂರ ಹೋಗುವ ಬಾರ। ಅಲ್ಲಿಹುದೆಮ್ಮ ಊರ ತೀರ॥ಪ॥ ಚಲ ಜಲದಲೆಗಳ ಮೇಲ್ಮುಣಿದಾಡಿ। ಬಳಲಿಕೆ ತೊಳಲಿಕೆಗಳನ್ನೆಲ್ಲ ದೂಡಿ। ಗೆಲುವಿನ ಉಲಿಗಳ ಹಾಡಿ, ಒಲುಮೆಯ ಮಾತಾಡಿ। ಹಕ್ಕಿಗಳಿಂಚರ ಕೇಳಿ ಆನಂದವ ತಾಳಿ॥1॥ ಹಿಮಮಣಿ ಕಣಗಣ ಸಿಂಚಿತ ಅಂಚಿನ। ಹಸುರಿನ ತೀರದ ಮೇಲಾಡಿ। ಕಿಸಲಯ ಕಂಪನದಿಂಪನು ನೋಡಿ। ಕೂಡಿ ಆಡಿ ನೋಡಿ ಹಾಡಿ। ತೇಲಿ ತೇಲಿ ಹೋಗುವ ಬಾರ॥2॥

**ದೇವರ ಮನೆಯಿದು ಈ ಜಗವೆಲ್ಲ** **ರಾಗ : ಕಲಾವತಿ**

ದೇವರ ಮನೆಯಿದು ಈ ಜಗವೆಲ್ಲ। ಬಾಡಿಗೆದಾರರು ಜೀವಿಗಳೆಲ್ಲ।।ಪ।। ಇಷ್ಟೆ ವರುಷ ಇಷ್ಟೇದಿವಸ ಇರಬೇಕೆನ್ನುವ। ಕಟ್ಟುಕರಾರು ಏನಹುದೇನು ಅರಿತವರಾರು। ಬಾಡಿಗೆದಾರರು ಜೀವಿಗಳೆಲ್ಲ।।1।। ಈಗಲೇ ಬಿಡು ಎನ್ನೀ ಬಿಡಬೇಕಲ್ಲಾ। ನಾನಾಗಿಯೂ ಸಹ ಬಿಡಬೇಕಷ್ಟೇ। ನಾನೇ ಕಟ್ಟಿದೆ ನಾನೇ ಕಟ್ಟಿಸಿದೆ। ಎಂಬುವುದೆಲ್ಲಾ ಜಂಬದ ಸೊಲ್ಲು।।2।। ನಮ್ಮ ಯ ದಿನಗಳು ಮುಗಿದೇ ತೀರಲು। ಬಿಡು ಎಂದೀಶನು ಆಜ್ಞಾಪಿಸಲು। ಇನ್ನು ಇರುವೆನು ನಾ ಬರಲಾರೆನು। ಎಂದರೆ ನಡೆಯದು ಈ ಪ್ರತಿಕಾರ।।3।।

**ದೇವ ನಿನ್ನ ಮಾಯೆಗಂಜಿ** **ರಾಗ: ಧರ್ಮವತಿ**

ದೇವ ನಿನ್ನ ಮಾಯೆಗಂಜಿ ನಡುಗಿ ಬಾಡೆನು। ನಿನ್ನ ಇಚ್ಛೆಯಂತೆ ನಡೆಯಲಡ್ಡಿ ಮಾಡೆನು।।ಪ।। ಮುಕ್ತಿ ಮುಕ್ತಿ ನನ್ನ ನಾನು ತಿಳಿದುಕೊಳ್ವುದೋ। ಸಾವಿಗಂಜಿ ನಿನ್ನಡಿಯಲ್ಲಿ ಅಡಗಿಕೊಳ್ವುದೋ। ಶಕ್ತಿಯಿತ್ತೆ ಮುಕ್ತಿಯನ್ನು ಗಳಿಸಿಕೊಳ್ಳಲು। ನೀರನೆರೆದೆ ಬಳ್ಳಿಯನ್ನು ಬೆಳಸಿಕೊಳ್ಳಲು।।1।। ಜ್ಞಾನರವಿಯನಿತ್ತೆ ಎದೆಯ ನೋಡಿಕೊಳ್ಳಲು। ಗೀತೆಯನ್ನು ಕೊಟ್ಟೆ ಕೊಳಲ ಊದಿಕೊಳ್ಳಲು।। ಎಲ್ಲವನ್ನು ಕೊಟ್ಟಿರುವೆ ಏನ ಬೇಡಲಿ। ನಿನ್ನ ಜಗವ ನನಗೆ ಬಿಟ್ಟಿರುವೆ ಏಕೆಕಾಡಲಿ।।2।।

**ದೇವರು ಸೆರೆಯಾಳ್ ದೇಗುಲ** **ರಾಗ: ತಿಲಂಗ್-ಆದಿತಾಳ**

ದೇವರು ಸೆರೆಯಾಳ್ ದೇಗುಲ ಸೆರೆಮನೆ। ಕಾವಲು ಪೂಜಾರಿ।।ಪ।। ನೀನಾನಾಗಲು ನನ್ನಯ ಬಳಿ ಇರೆ। ಬಲು ತೊಂದರೆ ಎಂದು। ಗಿರಿಶಿಖರದೊಳತಿ ದೂರದಿ ಕಟ್ಟಿದೆ। ಗುಡಿಯನು ನಿನಗೊಂದು। ಕಲ್ಲಿನ ಗೋಪುರ ಕಲ್ಲಿನ ಗೋಡೆ। ದುರ್ಗದವೊಲೆ ಬಲುದುರ್ಗಮ ನೋಡೇ।।1।। ಸೆರೆಯನು ತಪ್ಪಿಸಿಕೊಳ್ಳದ ತೆರದಲಿ ಅರ್ಚಕ ರಕ್ಷೆಯಿದೆ। ತೆಂಗಿನಕಾಯಿಯೊಳ್ ತಲೆಯನು ಒಡೆಯುವ ಪೂಜೆಯ ಶಿಕ್ಷೆಯಿದೆ। ಪುರಸೊತ್ತಾದರೆ ಕೆಲಸದೊಳಿಲ್ಲಿ ಬೇಸರ ಪರಿಹಾರಕೆ ಬಹೆನಲ್ಲಿ।।2।।

**ನನ್ನ ನಲವಿನ ಬಳ್ಳಿ ಮೈದುಂಬಿ** **ರಾಗ:ಸೌಖ್ಯದಾಯಿನಿ**

ನನ್ನ ನಲವಿನ ಬಳ್ಳಿ ಮೈದುಂಬಿ ನಲಿವಾಗ। ಲೋಕವೆ ಹೀರದಿರು ದುಂಬಿಯೊಲು ಹೂವ। ಬಾಳಿನ ಕಷ್ಟಗಳ ಬಲು ಘೋರ ಪಯಣದಲಿ। ಚಣದೊಂದೆ ಕನಸಿದುವೆ ಬೆರಸದಿರು ನೋವ।।1।। ಸವಿ ಸುಖದೀ ಘಳಿಗೆ ಬಂದು ಮೆಲ್ಲನೆ ಬಳಿಗೆ। ಪಲ್ಲವಿಸುತಿದೆ ಎದೆಯ ಚೈತ್ರದಂತೆ। ಇಂದು ನಾ ಮೈ ಮರೆತು ಒಲಿಯುವೆ ಸೊಗಬೆರೆತು। ಆಸೆಗಳ ಚಿವುಟದಿರು ಹಕ್ಕಿಯಂತೆ।।2।। ಆಗಸಕೆ ಎಸೆದಿರುವ ಕಲ್ಲಿನಂತೇರುವೆನು। ಗಾಳಿಯಲಿ ತೇಲುವೆನು ಗಂಧದಂತೆ। ಮತ್ತೆ ಬೀಳುವೆನಿಲ್ಲೆ ಚಿಂತೆಗಳ ಕೆಸರಲ್ಲೆ। ಬಿಟ್ಟು ಬಿಡು ಈಗೆನ್ನ ಮುಕ್ತನಂತೆ।।3।।

**ನನ್ನ ಬದುಕೇ ಕತ್ತಲೆ** **ರಾಗ: ಕಾನಡ**

ನನ್ನ ಬದುಕೇ ಕತ್ತಲೆ ಕಾಣೋ। ನಲ್ಮೆ ದೀಪ ಹಚ್ಚಿದೆ ನೀನು।।ಪ।। ಬವಣೆ ಹಡೆದ ಅಳುವಿನಲ್ಲಿ। ಕರುಣೆ ಇರದು ಹೊದರಿನಲ್ಲಿ। ನೀನು ತಂಪು ಕವಿದೆ ನಲ್ಲೆ। ನಾನು ಬೇರೆ ಬೆಳಕನಿತ್ತೆ।।1।। ಹಸಿವು ಮೊರೆವ ಗುಹೆಗಳಲ್ಲಿ। ಪ್ರೀತಿ ನೇಹ ಕಾಡಿನಲ್ಲಿ। ಮುಸುಕು ಹೊತ್ತು ನಿಂತ ನನಗೆ। ನಿನ್ನ ಹೆಜ್ಜೆ ಮಧುರ ಕೊಡುಗೆ।।2।। ನಿನ್ನ ಕಣ್ಣ ಕಿರಣದಲ್ಲಿ। ನಗೆಯು ಚಿಮ್ಮಿ ಮಿನುಗುವಲ್ಲಿ। ನನ್ನ ಮಬ್ಬು ಕರಗಿದೆ। ಪ್ರೇಮ ಹಚ್ಚಿ ಬೆಳೆದಿದೆ।।3।।

**ನಾಲ್ಕು ವರ್ಷದ ಕಾಲ** **ರಾಗ: ಶಿವರಂಜನಿ**

ನಾಲ್ಕು ವರ್ಷದ ಕಾಲ ನಕ್ಕುನಲಿದಾಡಿದೆವು। ಕೂಡಿ ಕಲಿತೆವು ಒಡನೆ ಕುಣಿದಾಡುತ। ಕಂಡ ಕನಸುಗಳೇನೊ ಆಡಿದಾಟಗಳೇನೋ। ಕೊನೆಯುಂಟೆ ಮೊದಲುಂಟೆ ಕನಸೆ ಜೀವ।।1।। ತುದಿಯ ನಿಲ್ದಾಣದಲಿ ನೂರಾರು ಎಡೆಯಿಂದ। ಜನರ ಜಂಗುಳಿ ನೆರೆದ ಕ್ಷಣಗಳೆರಡು। ಉರುಳೆ ಹಾದಿಯ ಹಿಡಿದು ಸಾಗಿದಂತಿದೆ ಬಾಳು। ಮತ್ತೆ

ಕಾಣುವೆವೆಂಬ ಬಯಕೆ ಬರಡು॥2॥ ಕಾಲ ಸಾಗುವುದೆಂಬ ಭ್ರಾಂತಿ ಬಡಿದಿತ್ತಾಗ। ಪ್ರೀತಿಯಲಿ ಅಪ್ಪಿದೆವು ಬಯಕೆಗಳನು।ಕಾಲ ಸಾಗುವುದುಂಟೆ? ಸಾಗುವುದು ನಾವಂತೆ। ಕಾಲ ಉಳಿಯುವುದಲ್ಲೆ ನರರೆ ಚರರು॥3॥ ಇದ್ದ ನೋವುಗಳೆಲ್ಲ ಸದ್ದುಗದ್ದಲವಿರದೆ। ಎದ್ದು ಹೊರಗೋಡಿದವು ಗೊತ್ತಿಲ್ಲದೆ। ನಲಿವೇನು? ನೋವೇನು? ಸಡಗರವೆ ಸಡಗರವು। ನಲಿವು ನೋವುಗಳೆಲ್ಲ ಸ್ಥಿರವಲ್ಲವೆ?॥4॥

**ನಾ ಕರಿಯಳೆಂದು** **ರಾಗ: ಜುಂಜೋಟಿ**

ನಾ ಕರಿಯಳೆಂದು ನೀ ಜರಿಯಬೇಡ ಬಿಳಿ ಗೆಳತಿ ಗರ್ವದಿಂದ। ಕಪ್ಪಿಗಿಂತ ಬಿಳಿ ಬಣ್ಣ ಹೆಚ್ಚು ಹೇಳಾವ ಹಿರಿಮೆಯಿಂದ॥ಪ॥ ಬಿಳಿಯ ಮೋಡ ನೀಡುವುದು ಇಳೆಗೆ ಬರಿಬೆಡಗು ಅಂದ ಚಂದ। ಇಳೆಯ ಜೀವ ಮಳೆ ಬರುವುದಕ್ಕೆ ಕರಿಮೋಡ ಮಾತ್ರದಿಂದ॥ ಕಣ್ಣನೋಟ ಕರಿಯಾಲಿಯಿಂದಲೇ, ಕುರುಡು ಬರಿಯ ಬಿಳುಪು। ಬಿಳಿಯ ಕೇಶಗಳೆ ಮುಪ್ಪು ಯೌವನದ ವಿಜಯ ಧ್ವಜವು ಕಪ್ಪು। ಕಪ್ಪು ಭೂಮಿಯಲೀ ಬೆಳೆಯಬೇಕು ನೀ ತೊಟ್ಟ ನೂಲ ಬಿಳಿಪು। ಬಿಳಿಯ ಮಂಜಿನಲಿ ಬೆಳೆಯಬಹುದೇ? ಬೆಳೆಯುವುದು ಎಲ್ಲ ಕಪ್ಪು॥1॥ ಕರಿಯಳಾದರೂ ಉದಯ ನಾನು ನೀನಿರುವೆ ಅಸ್ತಮಾನ। ನೀನೆ ತಾವರೆಯು ನಾನೆ ನೈದಿಲೆಯು ಒಂದೇ ಜಲನಿಧಾನ। ನೀ ಬಿಳಿಯ ಹಾಳೆ ನಾ ಕಪ್ಪು ಮಸಿಯು ಆಗೋಣ ಪ್ರೇಮ ಕವನ। ದೇಹಕ್ಕೆ ಬಣ್ಣ, ದೇಶಕ್ಕೆ ಬಣ್ಣ ಆತ್ಮಕ್ಕೆ ಯಾವ ಬಣ್ಣ॥2॥ ನೀ ಹೆಮ್ಮೆ ಪಡುವ ಯಾಂತ್ರಿಕತೆ ಎಲ್ಲ ಭಾವಿಸಲು ಕಪ್ಪು ಕಪ್ಪು। ಕಬ್ಬಿಣವು ಕಪ್ಪು ಯಂತ್ರಗಳು ಕಪ್ಪು ಕಲ್ಲಿದ್ದಲೂ ಕಪ್ಪು ಕಪ್ಪು॥ ವಾಹನದಗಾಲಿ ಅದರುಸಿರುಕಪ್ಪು ದಾಂಬರಿನ ಬೀದಿ ಕಪ್ಪು। ಈ ಕಪ್ಪು ಪ್ರಿಯವು, ಅಪ್ರಿಯವದೇಕೆ ಹೇಳೆನ್ನ ಮೈಯ್ಯ ಕಪ್ಪು॥3॥ ಓ ಶ್ವೇತಕನ್ಯೆ ಕಲಿಸುವೆನು ಬಾರೆ ಶೃಂಗಾರ ಸಾರವನ್ನು। ಕುಂಕುಮವ ನಿಡುವೆ ಬಿಡು ಕೆಂಪು ಕೇಡು ಎಂಬೀವಿಚಾರವನ್ನು॥ ಅರಿಶಿನವ ತೊಡೆವೆ ತೊಡೆ ಹಳದಿ ತ್ಯಾಜ್ಯವೆಂದೆಂಬ ವಾದವನ್ನು। ಹಚ್ಚುವೆನು ಕಣ್ಗೆ ಕಾಡಿಗೆಯ ನೋಡು ದರ್ಪಣದೀ ರೂಪವನ್ನು॥4॥ ನಾ ಕಪಿಲೆ ನನ್ನ ಕೆಚ್ಚಲಲಿ ಬಿಳಿಯ ಹಾಲಾಗಿ ಬೀಳು ಬಾರೇ। ನೀ ಮೃಗವು ನಿನ್ನ ನಾಭಿಯೊಳು ನಾನು ಕಸ್ತೂರಿಯಪ್ಪೆ ಬಾರೇ॥ ನಾ ನೀಲ ಮೇಘ, ನನ್ನುದರದಲ್ಲಿ ಸೆಳೆಮಿಂಚಿನಂತೆ ತೋರೇ। ನೀ ಶ್ವೇತ ಪದ್ಮ, ನಾ ನೀಲ ಭೃಂಗ ನಿನ್ನೆದೆಯ ಮಧುವ ಹೀರೆ॥5॥ ಈ ವರ್ಣ ಮೈತ್ರಿ ಅನಿವಾರ್ಯಗೆಳತಿ ಸರ್ವತ್ರ ವಿಶ್ವಪ್ರಕೃತಿ। ತೋರುವುದು ಇದನೆ ಸಾರುವುದು ಇದನೆ ಇದೇ ಅದರ ರೀತಿ ನೀತಿ॥ ಹೊತ್ತಾರೆ ಕೆಂಪು ಮತ್ತಷ್ಟು ಹಳದಿ ಹೊತ್ತೇರೆ ಬಿಳುಪು ಗೆಳತೀ। ನಿನ್ನಂಗ ಬಿಳಿದು ಇದೊ ನೆರಳು ಕಪ್ಪು, ಎಲ್ಲಿಹುದು ವೈರ ಗೆಳತೀ॥6॥

**ನಿನ್ನ ನೆರವಿಲ್ಲದೆಯೇ** **ರಾಗ: ಯಮನ್‌ಕಲ್ಯಾಣಿ**

ನಿನ್ನ ನೆರವಿಲ್ಲದೆಯೇ ತೊಳಲಿರುವೆ ನೆಲದಲ್ಲಿ। ಚೇತನವನುದ್ಧರಿಸೋ ದೇವ ದೇವಾ। ಹಗಲಿರುಳು ನಿನ್ನೊಂದು ಕೃಪೆಗಾಗಿ ಕಾದಿರುವೆ। ನಿನ್ನ ಕಂದನ ಸಲಹೋ ದೇವದೇವಾ॥1॥ ಎಲ್ಲರ ಹಾದಿಯ ನಂಬಿ ನಾವೆ ತಾನೊಲೆವಂತೆ। ಗುರಿಯಿಲ್ಲದಲೆದಿರುವೆ ನೆಲೆಯನರಸಿ। ದಿವ್ಯ ಅಂಬಿಗ ನೀನು ಬಂದೆನ್ನ ಪೊರೆಯಯ್ಯ। ದೂರ ತೀರದ ಬಳಿಗೆ ನನ್ನ ನಡೆಸಿ॥2॥ ತೋರು ಶಾಂತಿಯ ತಂದೆ ನನ್ನ ಸೋತಿರುವೆಡೆಗೆ। ಭಕ್ತಿ ಭಾವನೆ ಉಳಿದ ಶಕ್ತಿದೇವ। ಕಾಡದಿರು ಪ್ರಭುವೆನ್ನ ನೊಂದಿರುವೆ ಸಾಕಷ್ಟು ನಿನ್ನ ಅಭಯದ ಹಸ್ತ ನೀಡುದೇವಾ॥3॥

**ನಿನ್ನೆಡೆಗೆ ಬರುವಾಗ** **ರಾಗ: ತಿಲಂಗ್**

ನಿನ್ನೆಡೆಗೆ ಬರುವಾಗ ಸಿಂಗರದ ಹೊರೆಯೇಕೆ? ಸಡಗರದ ಮಾತುಗಳ ಬಿಂಕವೇಕೆ? ನಿನ್ನ ಮುಂದಿರುವಾಗ ಮಂತ್ರಗಳ ಮರೆಯೇಕೆ? ಸಂಪ್ರದಾಯದ ಮರುಳು ಲಜ್ಜೆಯೇಕೆ॥ಪ॥ ನೂಪುರದ ಗೆಜ್ಜೆಗಳ ಕಿಂಕಿಣಿಯ ದನಿ ನಿನ್ನ। ಸವಿಗೊರಳಿನಿಂಚರವ ಕೆಡಿಸದಿರಲಿ। ಮಂತ್ರಗಳ ಜವನಿಕೆಯು ತೊರೆ ನಿನ್ನ ಸಿರಿಮೈಯ। ಸೌಂದರ್ಯವನು ಮಬ್ಬುಗೈಯದಿರಲಿ॥1॥ ನಗ್ನತೆಗೆ ನಾಚದಲೆ ಸಿರಿದಳಿರ ತೆಕ್ಕೆಯಿಂ। ಮೂಡಿ ಸುಗ್ಗಿಯನೊಲಿವ ಹೂವಿನಂತೆ। ಸಿಂಗರದ ಹೊರೆಯುಳಿದು ಮಂತ್ರಗಳ ಮರೆಯುಳಿದು। ಪ್ರೇಮದಾರತಿ ಹಿಡಿದು ತೇಲಿ ಬರುವೆ॥2॥

**ನಿನ್ನ ಪದ ಕಮಲದಲಿ** **ರಾಗ: ಖರಹರಪ್ರಿಯ**

ನಿನ್ನ ಪದ ಕಮಲದಲಿ ಮನೆ ಮಾಡಿರುವ ನನಗೆ। ಆಸ್ಥಾನ ಈ ಸ್ಥಾನ ಎಲ್ಲವಾಹ್ವಾನ।। ಅಲ್ಲಲ್ಲಿ ಎನಲೇನು ನೀನೆ ಅಡಿಯಿಡುವಲ್ಲಿ। ದಿವ್ಯ ಪದವಿಗಳಲ್ತೆ ಮಾನಾಪಮಾನ।।1।। ಬೆಟ್ಟಗಳನೇರು ವೆಯಾ? ಕಣಿವೆಗಳನ್ನಿಳಿಯುವೆಯಾ। ಕೆಸರು ಸೊಬಗುಗಳೊಳಾಡಿ ವಿಹರಿಪೆಯೋ। ಅಲ್ಲಿ ಸಂಚರಿಸಲ್ಲಿ ಚರಿಸದಿರೆನಲು ನನಗೆ ನಿನ್ನ ಲೀಲೆಗೆ ಗೆರೆಯನೆಳೆವ ಹಕ್ಕೇನು?।।।। ಎಲ್ಲಿ ನೀ ಪದವಿಡುವೆ ಅಲ್ಲೆ ಉತ್ತಮ ಪದವಿ। ನಿನ್ನ ಪದವಲ್ಲದಾ ಪದವಿಯೂ ಹೀನ। ನಿನ್ನಡಿಯ ಹುಡಿಯ ಬಡತನವೆ ಕಡಿವರ ಕಣ್ಣ. ನಿನ್ನಡಿಗೆ ದೂರವಿರೆ ಧನಿಕನೂ ದೀನ।।3।।

**ನೋಡಮ್ಮ ಮುಗಿಲ ತುಂಬ**

ನೋಡಮ್ಮ ಮುಗಿಲ ತುಂಬ ಬೆಳ್ಬೆಳಕಿನ ಮಲ್ಲಿಗೆ। ಹಾರಿಹೋಗಿ ಕಿತ್ತುತಂದು ಮುಡಿಸಲೇನು ತುರುಬಿಗೆ।।ಪ।। ನಮ್ಮ ಮನೆಯ ಅಂಗಳದಲಿ ಅರಳಿ ನಗುವ। ಹೂವಿಗಿಂತ ದೊಡ್ಡವೇನು ಅವುಗಳು। ಹಸಿರು ನೆಲದ ಮೇಲೆ ಅರಳಿ ನಗುವ ಬದಲು। ಅಷ್ಟುದೂರ ಹೋದವೇಕೆ ಅವುಗಳು।।1।। ನಾನೆ ದೇವರಾಗಿದ್ದರೆ ಚಿಕ್ಕೆಎಲ್ಲ।ನಮ್ಮೂರಿನ ಮನೆಮನೆಯಲಿ ಬೆಳಗುವಂತೆ। ಸೃಷ್ಟಿಮಾಡುತ್ತಿದ್ದೆನು।। ಇಷ್ಟು ತಿಳಿಯಲಿಲ್ಲವೇನೆ ಜಗವ-ಮಾಡಿದಂಥ ದೇವ ನಿಜವಾಗಿಯೂ ದಡ್ಡನು।।2।।।

**ನಂಬಬಹುದೇ ಗೆಳತಿ** **ರಾಗ: ಖರಹರಪ್ರಿಯ**

ನಂಬಬಹುದೇ ಗೆಳತಿ ಇದನು ನಂಬಬಹುದೆ? ಕೇದಗೆಯಲಿ ಹಾವಿರುವುದ। ಬದುಕಿನೊಳು ಸಾವಿರುವುದ। ಯಾರ ಒಳಗೋ ನಾವಿರುವುದ ನಂಬಬಹುದೇ?।।1।। ನಗೆಯ ಒಳಗೆ ಹಗೆಯಿರುವುದ। ನೀರಿನೊಳಗೆ ಧಗೆಯಿರುವುದ। ಬೆಂಕಿಯೊಳಗೆ ಹೊಗೆಯಿರುವುದ ನಂಬಬಹುದೇ?।।2।। ಹಸಿರ ಕೆಳಗೆ ಕೆಸರಿರುವುದ। ಉಸಿರ ಒಳಗೆ ಹೆಸರಿರುವುದ। ಕಲ್ಲಿನೊಳಗೆ ಕುಸುರಿರುವುದ ನಂಬಬಹುದೇ?।।3।। ಬಯಲಿನಲ್ಲಿ ಬಾನಿರುವುದ। ಹುಟ್ಟು ಕೆಳಗೆ ಮೀನಿರುವುದ। ಇನಿಯನೊಡನೆ ನಾನಿರುವುದ ನಂಬಬಹುದೇ?।।4।।

**ಬೆವರು ಸುರಿಸಿ ದುಡಿಯುವವರೆ** **ರಾಗ: ಸಾರಂಗ**

ಬೆವರು ಸುರಿಸಿ ದುಡಿಯುವವರೆ। ಬಾಯಿ ತುಂಬ ನುಡಿಯುವವರೆ। ಅಡ್ಡಿಗಳನು ದಾಟಿದವರೆ। ತುಂಬೂರಿಯ ಮೀಟಿದವರೆ।।1।। ಬಾಳಿಗೊಲವ ತುಂಬಿದವರೆ। ಎಲ್ಲರನೂ ನಂಬಿದವರೆ। ಬೆಳದಿಂಗಳ ಸೀಮೆಯವರೆ। ನಿಮ್ಮ ನೆನಪು ಕೆಂದಾವರೆ।।2।। ಇದೋ ನಮ್ಮ ನಮನ।।

**ಮನವು ನಲಿದಾಡಲಿಕೆ** **ರಾಗ:ಷಣ್ಮುಖಪ್ರಿಯ**

ಮನವು ನಲಿದಾಡಲಿಕೆ ಕಡಲು ಕುಣಿದಾಡುವುದು। ಹಸಿರೆ ಉಸಿರಾಡುವುದು ಎಲ್ಲ ಕಡೆಗೆ (ಅಹ) ಗಗನವನೆ ಮುತ್ತಿಡುವ ಉತ್ತುಂಗ ಶಿಖರವೇ। ಕಳಸವಲ್ಲವೇ ನಮ್ಮ ಬಾಳ ಗುಡಿಗೆ।।ಪ।। ಗಿರಿನಿರ್ಝರದ ಗಾನ ನಮ್ಮ ನುಡಿಯಾಗಿರಲು (ಅಹ-ಅಹ) (2ಸಾರಿ)। ನಮಗೇಕೆ ಸಂಗೀತ ಹಾಳುಹರಟೆ (ಓಹೋ-ಅಹ)(2ಸಾರಿ)। ಕಡಲ ನೊರೆಗಳಾನಗುವೆ ನಮ್ಮ ಮುದ್ದಿನ ಮಗುವು। ವೃದ್ಧಾಪ್ಯ ನಮಗಿಲ್ಲ ಕೊನೆಯವರೆಗೆ।।1।। ಹೊಳೆ ಹಳ್ಳ ಹೃದಯವನು ತುಂಬಿ ತುಳುಕಾಡಿಸುವ। ಪ್ರೇಮದೌದಾರ್ಯವೇ ಬಾಳ ಜೇನು। ಕಡಲ ತೆರೆ ಧಾರುಣಿಯ ಪಾದವಾ ತೊಳೆದಿರಲು। ಸದ್ಭಕ್ತಿ ಭಾವನೆಗೆ ಸಾಲದೇನು(2ಸಾರಿ)।।2।। ಸಾಗರನು ಆಗಸವ ಆಲಂಗಿಸುವ ಕ್ಷಿತಿಜ(ಅಹ-ಅಹ) (2ಸಾರಿ)। ನಮ್ಮ ಮನೆಯಂಗಳದ ಕೊನೆಯ ರೇಖೆ। ನಮ್ಮ ಹೃದಯದಾಕಾರ ಸಾಗರದಾ ವಿಸ್ತಾರ ಅದಕ್ಕಿಂತ ಆಳವೂ ಆಗದೇಕೆ।।3।।

**ಯಾವ ರಾಗ ಯಾವ ತಾಳ** **ರಾಗ: ಧರ್ಮವತಿ**

ಯಾವ ರಾಗ ಯಾವ ತಾಳ ಹೇಳು ಅದನೆ ಕಲಿವೆನು। ಭಾವದೊಳಗೆ ಲೀನವಾಗಿ ಗೀತೆಹಾಡಿ ನಲಿಯುವೆ॥ಪ॥ ತಾನ ರಸದಿ ಲೀನವಾಗಿ ಹಾಡನೆಂತು ಹಾಡುವೆ। ಗಾನ ಕಲೆಯ ಬೆಳಕಿನೊಳಗೆ ದೂರ ಸಾಗಿ ನಲಿಯುವೆ॥1॥ ಮನದ ಶ್ರುತಿಯೊಳೆನ್ನ ಸ್ವರವು ಎಂತು ತಾನೇ ಮರೆವುದು। ಯುಗದ ಲಯಕೆ ಹೊಂದಿಕೊಂಡು ಭವದ ಚಿಂತೆ ಮರೆವೆನು॥2॥ ಮೇಳದೊಡನೆ ಒಂದುಗೂಡಿ ಹಾಡನೆಂತು ಹಾಡುವೆ। ಬಾಳ ಸಂಜೆ ಬರುವ ತನಕ ಗೋಳನೆಲ್ಲ ನೀಗುವೆ॥3॥

**ಯಾವುದೀ ಹೊಸ ಸಂಚು** **ರಾಗ: ಕಲಾವತಿ**

ಯಾವುದೀ ಹೊಸ ಸಂಚು ಎದೆಯಂಚಿನಲಿ ಮಿಂಚಿ। ಕನಸು ಮನಸುಗಳನ್ನು ಕಲೆತಿರುವುದು। ಗಿರಿಕಮರಿ ಆಳದಲಿ ತೆವಳಿದ್ದ ಭಾವಗಳ। ಮುಗಿಲ ಮಂಚದೊಳಿಟ್ಟು ತೂಗುತಿಹುದು॥1॥ ಸತ್ತ ಬಾಳಿಗೆ ಮತ್ತೆ ಅಮೃತವೆರೆದು ಕತ್ತಲಾಳಗಳಲ್ಲಿ ದೀಪ ಉರಿದು। ಬಾಳು ಮುಗಿಲೇರುತಿದೆ ಬೆಳಕಿನುತ್ಸವದಲ್ಲಿ। ಮೈಯ ಕಣ ಕಣದಲ್ಲು ಹಿಗ್ಗು ಹರಿದು॥2॥ ಹೇಗೆ ಹೇಳಲಿ ಹೇಳೆ ಈ ಮಧುರ ಅನುಭವವ। ಕಲ್ಪವೃಕ್ಷದ ಹಣ್ಣು ಹಿಡಿದ ರುಚಿಯ। ಹೇಗೆ ತಾಳಲಿ ಹೇಳೆ ಇಂಥ ಭಾವವೇ ನಾಳೆ। ಉಲಿಯದೆಯೇ ಸರಿಯ ಬೇಕು ಎಂಬ ವ್ಯಥೆಯ॥3॥

**ಯಾರಿಗೂ ಹೇಳೋಣು ಬ್ಯಾಡಾ** **ರಾಗ: ಶಿವರಂಜನಿ**

ಯಾರಿಗೂ ಹೇಳೋಣು ಬ್ಯಾಡಾ ಯಾರಿಗೂ॥ಪ॥ ಹಾರಗುದುರಿ ಬೆನ್ನ ಏರಿ ಸ್ವಾರರಾಗಿ ಕೂತುಹಾಂಗs। ದೂರ ದೂರ ಸಾಗೋಣಂತs॥1॥ ಹಣ್ಣು ಹೂವು ತುಂಬಿದಂಥ ನಿನ್ನ ತೋಟ ಸೇರಿ ಒಂದs ತಿನ್ನೋಣಂತ ಅದರ ಹೆಸರೂ॥2॥ ಕುಣಿಯೋಣಾಂತ ಕೂಡಿಕೂಡಿ ಮಣಿಯೋಣಾಂತ ಜಿಗಿದು। ಹಾರಿ ದಣಿಯದನs ಆಡೋಣಾಂತ ॥3॥ ಮಲ್ಲಿಗೀ ಮಂಟಪದಾಗ ಗಲ್ಲ ಗಲ್ಲ ಹಚ್ಚಿ ಕೂತು। ಮೆಲ್ಲ ದನೀಲೆ ಹಾಡೋಣಾಂತ ॥4॥ ಹಾವಿನಾ ಮರಿಯಾಗಿ ಅಲ್ಲಿ ನಾವುನೂ ಹೆಡೆಯಾಡಿಸೋಣ। ಹೂವೆ ಹೂವು ಹಸಿರೆ ಹಸಿರು॥5॥ ನಿದ್ದೆ ಮಾಡಿ ಮೈಯ್ಯ ಬಿಟ್ಟು ಮುದ್ದು ಮಾಟದ ಕನಸಿನೂರಿಗೆ ಸದ್ದು ಮಾಡದೆ ಸಾಗೋಣಾಂತ ॥6॥

**ಯೋಳ್ಕೋಳಕ್ಕೊಂದೂರು**

ಯೋಳ್ಕೋಳಕ್ಕೊಂದೂರು। ತಲೆಮ್ಯಾಗ್ ಒಂದು ಸೂರು। ಮಲಗಾಕೆ ಭೂಮ್ತಾಯಿ ಮಂಚ। ಕೈಯಿಡ್ದೋಳ್ ಪುಟ್ನಂಜಿ ನೆಗ್‌ನೆಗತ ಉಪ್ಗಂಜಿ। ಕೊಟ್ರಾಯ್ತು ರತ್ನನ್ ಪರ್ಪಂಚ॥ಪ॥ ಯೇನೊ ಖುಸಿಯಾದಾಗ ಮತ್ ಎಚ್ಚ್‌ಓದಾಗ। ಅಂಗೇನೆ ಪರ್‌ಪಂಚದ್ ಅಂಚ। ದಾಟ್ಕೊಂಡಿ ಆರಾಡ್ತ। ಕನ್ನಡದಲ್ ಪದವಾಡ್ತ। ಯಿಗ್ಗೋದೆ ರತ್ನನ್ ಪರ್ಪಂಚ॥1॥ ದುಕ್ಕಿಲ್ಲ ದಾಲಿಲ್ಲ। ನಮಗ್ ಅದರಾಗ್ ಪಾಲಿಲ್ಲ। ನಾವ್ ಕಂಡಿಲ್ಲ ಆ ತಂಚ ವಂಚ। ನಮ್ಮ ಸ್ಟಕ್ ನಾವಾಗಿ ಇದ್ದಿದ್ರಲ್ ಆಯಾಗಿ। ಬಾಳೋದೆ ರತ್ನನ್ ಪರ್ಪಂಚ॥2॥ ಬಡತನ ಗಿಡತನ ಯೇನಿದ್ರೇನು ? ನಡ್ತೇನ ಚೆಂದಾಗ್ ಇಟ್ಕೋಳಾದೆ ಅಚ್ಚ। ಅಂದ್ಕೊಂಡಿ ಸುಖವಾಗಿ। ಕಷ್ಟಕ್ಕೆ ನಗೆಮೊಖವಾಗಿ ನೆಗೆಯೊದೇ ರತ್ನನ್ ಪರ್ಪಂಚ॥3॥ ದೇವ್ರ್ ಏನ್ರ ಕೊಡಲಣ್ಣ। ಕೊಡದಿದ್ರೆ ಬುಡಲಣ್ಣ॥ ನಾವೆಲ್ಲ ಅವನಿಗೆ ಬಚ್ಚ। ಔನಾಕಿದ್ ತಾಳ್ದಾಂಗೆ। ಕಣ್ ಮುಚ್ಕೊಂಡ್ ಯೋಳ್ದಾಂಗೆ। ಕುಣಿಯೋದೆ ರತ್ನನ್ ಪರ್ಪಂಚ॥4॥

**ರೆಕ್ಕೆ ಮುರಿದ ಹಕ್ಕಿಯು ನಾನು** **ರಾಗ: ಕಲ್ಯಾಣಿ**

ರೆಕ್ಕೆ ಮುರಿದ ಹಕ್ಕಿಯು ನಾನು। ಶ್ರುತಿಲಯವಿಲ್ಲದ ಗೀತೆಯು। ನಿಲ್ಲಲು ನೆಲೆಯಿಲ್ಲ ನೆರೆಹೊರೆ ಎನಗಿಲ್ಲ। ನಡೆದದ್ದೇ ನನ್ನ ದಾರಿಯು॥1॥ ತೆರೆದಿತ್ತು ತುಟಿಯು ನಡೆದಿತ್ತು ಕೊಳಲು। ಹೊಮ್ಮುವುದೇ ಸಂಗೀತ। ಕೈಕಾಲದೆಸೆ ಸೂತ್ರದ ಗೊಂಬೆ। ಇದು ವಿಧಿಯ ಸಂಕೇತ॥2॥ ಸುವಿಶಾಲ ಬಾನಲ್ಲಿ ಒಂಟಿ ಮೋಡ। ಗಾಳಿ-ಬೀಸಿದತ್ತ ಪಯಣ। ಇಂದಿಗೆ ಇಲ್ಲಿ ಮುಂದೆ ಇನ್ನೆಲ್ಲೋ। ಗುರಿಗೊತ್ತಿಲ್ಲದ ಪಯಣ॥3॥

**ಶುಭನುಡಿಯೆ ಶಕುನದ ಹಕ್ಕಿ** **ರಾಗ: ಸಾವೇರಿ**

ಶುಭನುಡಿಯೆ ಶಕುನದ ಹಕ್ಕಿ। ಶುಭನುಡಿಯೇ ಶುಭನುಡಿಯೇ।।ಪ।। ನಿದ್ದೆಬಳಲಿ ಬಳಿಯಲಿ ಬಂದು। ಕೂಡಿದೆವೆ ಅವುಗಳಾಸರೆಯಲ್ಲಿ। ಮೆಲ್ಲನೆ ಒರಗುವ ಅದನು ಒಂಟಿ ಸೀನು ಹಾರಿಸುತಿತ್ತಾ।।1।। ನಟ್ಟಿರುಳಿನ ನೆರಳಿನಲ್ಲಿ ನೊಂದ ಜೀವ ಮಲಗಿರಲಾಗಿ। ಸವಿಗನಸನು ಕಾಣುವಾಗ। ಗೂಬೆಯೊಂದು ಗುಗ್ಗೆನುತಿತ್ತು।।2।। ಬೆಳಗಿನ ತಂಗಾಳಿ ಬಂದು। ನಸುಕು ಮುಸುಕು ಮೂಡುತಿರಲು। ಚಿಲಿಪಿಲಿಯೆಂದು। ಹಾಲಕ್ಕಿ ಉಲಿಯುತಲಿತ್ತಾ।।3।। ನಿನ್ನ ಸೊಲ್ಲ ನಂಬಿ ಎದ್ದೆ। ಮೈಯೆಲ್ಲ ನಡುಕವಿದ್ದು। ನೀನೆ ಶುಭ ನುಡಿಯುವಾಗ।। ಏನಿದ್ದೇನು ಎಲ್ಲಾ ಶುಭವೆ।।4।।

**ಸಾರುತಿದೆ ಸೃಷ್ಟಿ ಸಂತೃಷ್ಟಿಯಾಗಿ** **ರಾಗ: ಅಭೇರಿ**

ಸಾರುತಿದೆ ಸೃಷ್ಟಿ ಸಂತೃಷ್ಟಿಯಾಗಿ। ಸವಿಯಾಗು ಛವಿಯಾಗು ಕವಿಯಾಗು ಎಂದು।।ಪ।। ಹಣ್ಣಿನಲಿ ಬೆಣ್ಣೆಯಲಿ ಕೆನೆಮೊಸರು ಹಾಲಿನಲಿ। ಕಂದನಲಿ ಜೇನಿನಲಿ ರಸಗಬ್ಬು ಬಾಳೆಯಲಿ। ಎಳನೀರು ಹೊಳೆನೀರು ಹಾಲ್ದೆನೆಯ ಕಾಳಿನಲಿ। ಸಾರುತಿದೆಯೀ ಸೃಷ್ಟಿ ಸವಿಯಾಗಿ ನಿಂದು। ಸವಿಯಾಗು ಸವಿಯಾಗು ಸವಿಯಾಗು ಎಂದು।।1।। ತಾರೆಯಲಿ ಚಂದ್ರನಲಿ ಸೂರ್ಯನಲಿ ರನ್ನದಲಿ। ಕಂಚಿನಲಿ ಮಿಂಚಿನಲಿ ಮುತ್ತಿನಲಿ ಚಿನ್ನದಲಿ। ಜ್ಯೋತಿಯಲಿ ನಯನದಲಿ ಉಷೆಯ ಹೊಂಬಣ್ಣದಲಿ। ಸಾರುತಿದೆ ಸೃಷ್ಟಿಯದೆ ಛವಿಯಾಗಿ ನಿಂದು। ಛವಿಯಾಗು ಛವಿಯಾಗು ಛವಿಯಾಗು-ಎಂದು।।2।। ಶಬ್ದದಲಿ ಸವಿಯಾಗಿ ಅರ್ಥದಲಿ ಬೆಳಕಾಗಿ। ಬಾಳ ಧನ್ಯತೆಗಿಲ್ಲಿ ಬೆಳಕು ಸವಿ ಸಾಕಾಗಿ। ಬಾಳುವೆಯ ಸವಿಬೆಳಕ ಬರೆಯುವವ ಬೇಕಾಗಿ। ಸಾರುತಿದೆ ಸೃಷ್ಟಿ ಸವಿ ಛವಿಯಾಗಿ ನಿಂದು। ಕವಿಯಾಗು ಕವಿಯಾಗು ಕವಿಯಾಗು ಎಂದು।।3।।

**ಸುಮಸುಂದರ ತರುಲತೆಗಳ** **ರಾಗ: ಮೋಹನ**

ಸುಮಸುಂದರ ತರುಲತೆಗಳ ಬೃಂದಾವನ ಲೀಲೆ ಸುಪ್ರಬೋಧ ಚಂದ್ರೋದಯ ರಾಗಾರುಣ ಜಾಲೆ।।ಪ।। ಗಿರಿಸಿರಿ ಬನ ಸಂಚಾರಿಣಿ ತುಂಗಾ ಜಲ ನೀಲೆ। ದಲದಲದಲ ಮೆದುಹಾಸಲಿ ಗಾನ ಸುಪ್ತ ಲೋಲೆ।।1।। ಮಲೆನಾಡಿನ ಕೋಗಿಲೆಯೇ ಬಯಲುನಾಡ ಮಲ್ಲಿಗೆಯೇ। ವಂಗ ವಿಷಯ ಭೃಂಗವೇ ಧವಳಗಿರಿಯ ಶೃಂಗವೆ। ಕಾವೇರಿ ಗೋದಾವರಿ...ಗಂಗೆ ... ಯಮುನೆ... ಸಿಂಧುವೇ ಶತಶತಶತಮಾನಗಳ ಗುಪ್ತಗಾಮಿ ಚೇತನವೇ(2ಸಾರಿ)।। ಖುತುಖುತುವಿಗು ಹೂವಾಗಿ ಫಲವಾಗುವ ತನಿರಸವೇ। ಚಿಲಿಪಿಲಿಯೆಂದಾಮೋದದಿ ನಲಿದುಲಿವಾ ಕೂಜನವೆ। ಮಧುತರ ಮಂದಾನಿಲ ಸೌಗಂಧದ ಸಿರಿ ಪರಿಮಳವೇ। ಕಾವೇರಿ..ಗೋದಾವರಿ.. ಗಂಗೆ.. ಯಮುನೆ.. ಸಿಂಧುವೇ।।2।। ನಸು ಹಸುರಿನ ಹಿಮಮಣಿಯೇ ಎಳೆಬಿಸಿಲಿನ ಮೇಲುದವೆ। ಬಿರಿದ ಮುಗುಳ ಬಿಂಕವೇ ತೆರೆದ ಸೋಗೆ ನರ್ತನವೇ।। ನಿರ್ಭರ.. ನಿರ್ಝರಣಿಯ..ಜಲಪಾತದ.. ಗಿರಿಘರ್ಜನೆಯೆ। ಕಾವೇರಿ..ಗೋದಾವರಿ.. ಗಂಗೆ..ಯಮುನೆ.. ಸಿಂಧುವೇ।।3।।

**ಸ್ನೇಹ ಅತಿಮಧುರ** **ರಾಗ: ಮೋಹನ-ರೂಪಕತಾಳ**

ಸ್ನೇಹ ಅತಿಮಧುರ ಸ್ನೇಹ ಅದು ಅಮರ। ಸ್ನೇಹವೇ ಗುಡಿಯು ಪ್ರೀತಿಯೆ ದೇವರು। ಕಾಲ ದೇಶ ಮೀರಿದ ಭಾವ।।ಪ।। ಸ್ನೇಹಕೆ ವಯಸಿನ ಅಂತರವಿಲ್ಲ ಸಿರಿತನ ಬಡತನ ಸೀಮೆಗಳಿಲ್ಲ। ಸ್ನೇಹಕೆ ಸ್ವಾರ್ಥದ ಆಸೆಗಳಿಲ್ಲ ಸಮತೆ ಮಮತೆ ಸ್ನೇಹದಗಾನ।।1।। ಓಡುವ ನದಿಗೆ ಮೋಡದ ಸ್ನೇಹ ಅರಳುವ ಹೂವಿಗೆ ಕಿರಣದ ಸ್ನೇಹ। ಬಂಗಾರದಾ ಶಶಿಗೆ ಸಾಗರದ ಸ್ನೇಹ ಒಲವು ನಲಿವೂ ಸ್ನೇಹದ ಚೆಲುವು।।2।। ಲೋಕದ ಜೀವ ಸ್ನೇಹದ ಬಂಧನ ಪಾವನ ಪ್ರೇಮ ಸ್ನೇಹದ ಸ್ಪಂದನ। ಸ್ನೇಹವ ಬಯಸದ ಜನರೆಲ್ಲಿಹರು ಹಾಲೂಜೇನು ಸ್ನೇಹದ ಸಂಗಮ।।3।।

**ಸ್ನೇಹವೆಂಬುದು ಹೆಮ್ಮರವು** **ರಾಗ:ಪುನ್ನಾಗವರಾಳಿ**

ಸ್ನೇಹವೆಂಬುದು ಹೆಮ್ಮರವು। ನಂಬಿದವರಿಗೆ ಆಶ್ರಯವು। ಬದುಕಿಗೆ ಜೀವಾಧಾರವು। ಎಲ್ಲ ತೃಪ್ತಿಗೆ ಮೂಲಾಧಾರವು।।1।। ಮಳೆಗಾಳಿಗೆ ಸಿಕ್ಕಿದ್ದರೂ। ಉರಿಯಲಿ ಬೇಯುತ್ತಿದ್ದರೂ। ಬದುಕನು ಸಾರ್ಥಕ ಮಾಡಲು।

ಬಿಡದೆ ಸೇವೆಯ ಮಾಡುವುದು॥2॥ ಕಾಲಕಾಲಕೆ ಫಲ ಕೊಟ್ಟು। ಸಹಿಸಿ ದಿನವೂ ಕಷ್ಟನೋವು। ಮೂಕನಾಗಿ ಬದುಕುತಿಹುದು। ಎಂದಿನಂತೆ ಧೃಡವಾಗಿ ನಿಂತು॥3॥ ವ್ಯಸನವ ತೊರೆದು ಬಾಳಿರೆಂದು। ಹುಟ್ಟಿನ ಗುಟ್ಟನು ತಿಳಿಸುವುದು। ಉಪಕಾರಕ್ಕಾಗಿ ಸ್ವಾರ್ಥವ ಬಿಟ್ಟು। ಶ್ರೀ ನೆಮ್ಮದಿಯ ಬೇಡಿರಿಂದು॥4॥

**ಹರಿವ ತೊರೆ ತೀರದಲಿ** **ರಾಗ: ಮೋಹನ**

ಹರಿವ ತೊರೆ ತೀರದಲಿ ಎಳೆಹಸಿರು ಬಳ್ಳಿಯಲಿ। ಅರಳು ನೀ ಪುಷ್ಪವಾಗಿ॥ ಬೆಳಗು ಮುಂಜಾವಿ ನಲ್ಲಿ ಅರಸುತ್ತಾ ಬನದಲ್ಲಿ। ನಾ ಬರುವೆ ಭೃಂಗವಾಗಿ॥ಪ॥ ದೂರದಾಗಸದಲ್ಲಿ ನೀಲಿಯಂಗಣ ದಲ್ಲಿ। ಮೂಡು ನೀ ಚುಕ್ಕಿಯಾಗಿ॥1॥ ಬಾನವಿಸ್ತಾರದಲ್ಲಿ ಹುಣ್ಣಿಮೆಯ ರಾತ್ರಿಯಲ್ಲಿ। ನಾ ಬರುವೆ ರಜನಿಯಾಗಿ॥2॥ ಸೃಷ್ಟಿಯ ಸೊಬಗಿನಲಿ ಸೌಂದರ್ಯ ರಾಶಿಯಲಿ। ಮೂಡು ನೀ ಕವಿತೆಯಾಗಿ। ನನ್ನನ್ನೇ ನಾ ಮರೆತು ನಿನ್ನನೇ ನಾ ಕುರಿತು। ಬರೆಯುವೆನು ಕವಿಯಾಗಿ॥3॥

**ಹಾಡು ಹಳೆಯದಾದರೇನು** **ರಾಗ: ಶಿವರಂಜನಿ**

ಹಾಡು ಹಳೆಯದಾದರೇನು ಭಾವ ನವನವೀನ॥ ಎದೆಯ ಭಾವ ಹೊಮ್ಮುವುದಕೆ ಭಾಷೆ ಒಂದು ಸಾಧನಾ॥ಪ॥ ಹಳೆಯ ಹಾಡ ಹಾಡು ಮತ್ತೆ ಅದನೆ ಕೇಳಿ ತಣಿಯುವೆ ಹಳೆಯ ಹಾಡಿನಿಂದ ಹೊಸತು ಜೀವನವನೆ ಕಟ್ಟುವೆ॥1॥ ಹಾಡನೊಲಿದು ಕೇಳುವನಿತು ಸಹೃದಯತೆ ಎನಗಿದೆ। ಅನಿತೆ ಸಾಕು ಹಾಡು ನೀನು ಅದನೆ ಕೇಳಿ ಸುಖಿಸುವೆ॥2॥ ಹಮ್ಮು ಬಿಮ್ಮು ಒಂದು ಇಲ್ಲ ಹಾಡು ಹೃದಯ ತೆರೆದಿದೆ। ಹಾಡಿನಲ್ಲಿ ಲೀನವಾಗಲೆನ್ನ ಮನವು ಕಾದಿದೆ॥3॥

**ಹಾಲು ಜೇನು ಹರಿಯಲಿ** **ರಾಗ: ಹಂಸಧ್ವನಿ**

ಹಾಲು ಜೇನು ಹರಿಯಲಿ ಬಡತನವು ಅಳಿಯಲಿ। ಮನದ ಕಸವು ರಸವಾಗಲಿ। ಮಮತೆ ಮೈತ್ರಿ ಉದಿಸಲಿ। ಅದೇ ತುಂಬು ಜೀವನ॥1॥ ವಿಶ್ವ ನೌಕೆ ಸಾಗಲಿ। ಜನರು ತಿಳಿವ ಕಾಣಲಿ। ಜ್ಞಾನರವಿ ಉದಯಿಸಲಿ। ಹೃದಯ ದೀಪ್ತಿ ಬೆಳಗಲಿ। ಅದೇ ತುಂಬು ಜೀವನ॥2॥ ನಮ್ಮ ಮನವು ಐಕ್ಯವಾಗಿ। ಚೆಲುವು ಒಲವು ಮಿಲನವಾಗಿ। ನಮ್ಮ ಆತ್ಮ ಪಲ್ಲವಿಸಿ। ಶಾಂತಿ ಕ್ರಾಂತಿ ಆಗಬೇಕು। ಅದೇ ತುಂಬು ಜೀವನ॥3॥ ಭಕ್ತಿ ಭಾವ ನೆಲೆಸಬೇಕು ಅಲ್ಲಿ ದೇವ ಮೂಡಬೇಕು ಮನವು ಶುದ್ಧಿಯಾಗಬೇಕು ಆತ್ಮ ಜ್ಯೋತಿ ಬೆಳಗಬೇಕು। ಅದೇ ತುಂಬು ಜೀವನ॥4॥

**ಹೂವು ಚೆಲುವೆಲ್ಲ ನಂದೆಂದಿತು** **ರಾಗ: ಆಭೇರಿ**

ಹೂವು ಚೆಲುವೆಲ್ಲ ನಂದೆಂದಿತು। ಹೆಣ್ಣು ಹೂವ ಮುಡಿದು ಚೆಲುವೇ ತಾನೆಂದಿತು॥ಪ॥ ಕೋಗಿಲೆಯು ಗಾನದಲ್ಲಿ ನಾನೇ ದೊರೆಯೆಂದಿತು। ಕೊಳಲಿನ ದನಿ ವೀಣೆಯ ಖನಿ। ಕೊರಳಲಿ ಇದೆಯೆಂತು। ಹೆಣ್ಣು ವೀಣೆ ಹಿಡಿದಾ ಶಾರದೆಯೆ ಹೆಣ್ಣೆಂದಿತು॥1॥ ನವಿಲೊಂದು ನಾಟ್ಯದಲ್ಲಿ ತಾನೇ ಮೊದಲೆಂದಿತು। ಕೆದರುತೆ ಗರಿ ಕುಣಿಯುವ ಪರಿ ಕಣ್ಣಿಗೆ ಸೊಂಪೆಂತು। ಹೆಣ್ಣು ನಾಟ್ಯದರಸಿ ಪಾರ್ವತಿಯೆ ಹೆಣ್ಣೆಂದಿತು॥2॥ ಮುಗಿಲೊಂದು ಬಾನಿನಲ್ಲಿ ತಾನೆ ಮಿಗಿಲೆಂದಿತು। ನೀಡುವೆ ಮಳೆ ತೊಳೆಯುವೆ ಕೊಳೆ। ಸಮನಾರೆನಗೆಂತು ಹೆಣ್ಣು ಪಾಪ ತೊಳೆವಾಸುರಗಂಗೆ ಹೆಣ್ಣೆಂದಿತು॥3॥

## ದಾಂಪತ್ಯ ಗೀತೆ

**ಆ ದಿನದ ನೆನಪೊಂದು** **ರಾಗ: ನೀಲಾಂಬರಿ**

ಆ ದಿನದ ನೆನಪೊಂದು ಮನದ ಭಿತ್ತಿಯ। ಮೇಲೆ ಅಚ್ಚ ಹಸುರಾಗಿ ಉಳಿದಿಹುದು ಎಂದೆಂದು॥ ಎಳೆತನದ ಕಂಗಳಲಿ ಸುಖ ಸಂಪದದ। ಹೊಂಗನಸ ಕಾಣುತ್ತ ದಿನನೂಕಿ ನಡೆದಿದ್ದೆನಂದು॥ಪ॥ ಬಾಳವಾಹಿನಿಯಲ್ಲಿ ಸಿಲುಕಿ ಆಶೆ ನಿರಾಶೆಗಳ। ಮಧ್ಯದಲಿ ತೇಲುತ್ತ ಮುಳುಗುತ್ತ ಸಾಗಿದ್ದೆನಂದು॥ಯೌವನವು ಮದವೇರಿ ಕಣ್ಣೆಲ್ಲ ಕುರುಡಾಗಿ।

ಬಾಳವಾಹಿನಿಯೆ ಹುಚ್ಚು ಹೊಳೆಯೆನಿಸಿ। ನಾ ದಾರಿ ಕಾಣದೆ ಕೊಚ್ಚಿ ಹೋಗುವ ಮುನ್ನ। ಕಾಣದ ಕೈಯೊಂದು ಕೈಪಿಡಿದು ಉಳಿಸಿತ್ತು ಎನ್ನ।।1।। ಬಂದವರು ಯಾರೆಂದು ಕಣ್ಣೆತ್ತಿ ನೋಡಿದೆನು। ಸುರಲೋಕ ಸೌಂದರ್ಯ ಖನಿಯೊಂದು। ಸಾಕಾರರೂಪದಿ ನಿಂತು ತುಟಿಯಂಚ ಕಿರುನಗೆಯ। ಸ್ವಾಗತವಿತ್ತು। ಕೃಪಾನೇತ್ರ ಸೂತ್ರ ಬಂಧನದಿ ಬಂಧಿಸಿತ್ತು ಎನ್ನ।।2।। ಕರಸ್ಪರ್ಶದಾನಂದ ಭಾರದಲ್ಲಿ ಮೈನಿಮಿರಿ। ಪುಳಕಿತಾನಂದ। ಸಂಭ್ರಮಕೆ ಬಾಳಲತೆ। ಚಿಗುರೊಡೆದು ಕನಸೊಂದು ಹೆಣೆದಿತ್ತು। ಮನಸಾಗಸದ ಅಂಚಿನಲಿ ಕಾಮನ ಬಿಲ್ಲೊಂದು ಮೂಡಿತ್ತು।। ಆಗಸದ ತುಂಬೆಲ್ಲ ಸಂತಸದ ಮಿಂಚರಡಿ ಬಾಳೊಂದು ಬೆಳಕಂತೆ ಕಂಡಿತ್ತು ಅಲ್ಲಿ।।3।। ಬಾಳು ಸಾರ್ಥಕವೆಂದು ಒಳಧ್ವನಿಯು ನುಡಿದಿರಲು ಕಣ್ತುಂಬಿ ಬಂದಿತ್ತು। ಎದ್ದು ನಾಲ್ಕಡಿ ಇಟ್ಟು ಸಿರಿ ಪಾದದ ಬಳಿ। ಬಿದ್ದ ಕಣ್ಣೀರ ಪುಷ್ಪಮಾಲೆಯ ತೊಡಿಸಿ। ಮನಸಾರ ಮಣಿದದಕೆ ಅರ್ಪಿಸಿಕೊಂಡಿದ್ದೆ ಎನ್ನ।4।।। ಸಾನುರಾಗದಿ ಬಗ್ಗಿ ಬಾಡಿ ಬಿದ್ದಿದ್ದ ಎನ್ನ ಬಾಳೆಂಬ ಲತೆಯನ್ನು। ಎತ್ತಿ ತಮ್ಮೆದೆಯ ಬಟ್ಟಲೊಳಿಟ್ಟು ಜತನದಲಿ ಕಾಪಾಡಿ ಪ್ರೇಮಾನುರಾಗದ ನೀರೆರೆದು ಬೆಳಸಿ ಉಳಿಸಿದಿರಿ ನೀವಂದು ಎನ್ನ।।5।। ಬಾಳಲತೆ ಪ್ರೇಮದಾಸರೆ ಪಡೆದು ಹೃದಯ ದೇಗುಲದ ಸುತ್ತರಡಿ ಪಲ್ಲವಿಸಿ ಇನಿಯನ ಹೃತ್ಕಮಲ ಪೀಠದಲಿ ಸಮಪಾಲು ಜೀವನವೇ ಪಾವನಗೊಂಡು ಸಂತೃಪ್ತ ಭಾರದಲಿ ನೆಲಸಿದ್ದೆನಲ್ಲಿ।।6।। ತನ್ನತನ ಕಳೆದಿತ್ತು ನೀನು ನಾನು ಬೇರೆಂಬ ಭಾವನೆಯೇ ಅಳಿಸಿ ಹೋಗಿತ್ತು। ತನುವೆರಡು ಆತ್ಮ ಒಂದೆನಿಸಿ ಮನ, ಪ್ರಾಣ, ಉಸಿರೆಲ್ಲ ಒಂದಾಗಿ ಬೆಸುಗೆಯನು ಪಡೆದು ಹಾಲು ಜೇನಲಿ ಸೇರಿ ಮಧುಪರ್ಕವಾದಂತೆ ಒಂದಾಗಿ ಹೋಗಿ ಬಾಳು।।7।। ಹಾಲೊಳಿರುವ ಅದರ ಬಿಳುಪನ್ನು ಹೊನ್ನಿನ ಕಾಂತಿಯನು। ಕುಸುಮದ ಪರಿಮಳವ, ಚಂದ್ರನ ಚಂದ್ರಿಕೆಯ ಬೇರ್ಪಡಿಸಲಳ ಉಂಟೆ। ಲೋಕದಲಿ ಅಂತೆಮ್ಮ ಬಾಳು ಜೊತೆಗೂಡಿ ಒಂದಾಗಿ ಹೋಗಿತ್ತು ಅಂದು।।8।। ಆವ ಜನ್ಮದ ಪುಣ್ಯಬಲವು ನೀವು ದೊರೆತು ಹೃದಯ ದೇಗುಲದಲ್ಲಿ ಸಮಪಾಲನಿತ್ತು ಜೀವನವ ಪಾವನವ ಮಾಡಿದಿರಿ, ಜನ್ಮ ಜನ್ಮಕೂ ಈ ಕೃಪೆಯ ಋಣಭಾರ ನನ್ನದಾಗಲಿ ಎಂದು ಬೇಡಿದನೆ ಅವರನ್ನು।।9।। ಓ ಯನ್ನ ಮನದನ್ನೆ ನೀ ಬಂದೆ ಈ ಧರೆಗೆ ಅವನ ಆಣತಿಯಂತೆ ನೀ ದೊರೆತು ಅವನ ಕೃಪೆಯಿಂದೆನಗೆ। ಬರಿದಾದ ಎದೆಸೇರಿ ಪಲ್ಲವಿಸಿ ಪ್ರೇಮಾನುರಾಗದ ಮಳೆಗರೆದು ತಂಪು ಕಂಪುಗಳ ಇತ್ತು ಫಲವಿತ್ತು ತಣಿಸಿದೆ ಬಾಳನ್ನು ಋಣಿ ನಾನು।।10।। ನೀ ಉಂಟಾದರೆ ಇರಲುಂಟು ಈ ಲೋಕದಲ್ಲಿ ನರಕವಾದರು ಅದುವೆ ಸ್ವರ್ಗ। ನೀ ಇಲ್ಲವಾದರೆ ಇರಲಾಗದು ಅದು ಈ ಲೋಕವನೆ ಚೆಲುವಿನಾಗರಗೈದೆ ನೀ ಎನಗೆ। ಓ ಎನ್ನ ಪ್ರೇಮಬಿಂದು।।11।। ನನ್ನ ತನ ನಿನ್ನತನ ಉಳಿದಿಲ್ಲವೆಂದಾಬಳಿಕ ಯಾರಿಗೆ ಋಣಿ? ಋಣಿ ನಾವು ಆತನಿಗೆ - ಆ ದೇವ ದೇವನಿಗೆ।।12।।

**ಇಂದಾದರು ಮುಂದಾದರು** **ರಾಗ: ಹಂಸಾನಂದಿ**

ಇಂದಾದರು ಮುಂದಾದರು ಎಂದಾದರು ಇರಲಿ। ಮನೆ-ಮನೆಯಲಿ ನಗೆ ಅರಳಲಿ ।।ಸೌಭಾಗ್ಯವೆ ಬರಲಿ।।2ಸಾರಿ।।ಪ।। ಹಳೆ ಬಾಳಿನ ಕೊಳೆ ಹೋಗಲಿ ಹಸನಾಗಲಿ ಬಾಳು। ಮೈ ಮನಸು ಹೊಸದಾಗಲಿ ಕಹಿದುಃಖದ ಧೂಳು। ಮನ ಮೂಡಲಿ ಭೂರಂಗದಿ ಉಷೆ ಬರಲಿ ಕುಣಿದು। ಕಣ್ಣಂಚಿನ ಸಿರಿ ಅಂಚಿನ ।। ಎರಡಾರತಿ ಹಿಡಿದು।।2ಸಾರಿ।।1।। ಮಾಯಾಂಗನೆ ಮರೆಯಾಗಲಿ ಅಮರಾಂಗನೆ ಬರಲಿ। ಸುಖ ಸ್ಪರ್ಶದಿ ಮೈ ಮರೆಸಿ ಮಧುರಸವ ತರಲಿ। ಕೈಕಂಕಣ ಮೈ ಅರಿಸಿನ ಸಿರಿ ಕುಂಕುಮ ಹಣೆಗೆ।ಮಾಂಗಲ್ಯದ ಕರಿಮಣಿಸರ ।। ಸೊಬಗೀಯಲಿ ಉಷೆಗೆ।।2ಸಾರಿ।।2।। ಕರಿಕೊರಳಲಿ ಘಮಘಮಿಸಲಿ ಹೂಮಾಲೆಯ ಸುರುಳಿ। ಜೇನಿರುಳಿನ ಸಂಗೀತಕೆ ಸವಿಗೊರಳಿನ ಮುರಳಿ। ಎರಡೆದೆಗಳ ಹಿರಿಯಾಸೆಗೆ ಕವಿಹಾಡುವ ಪಕ್ಷಿ। ಶಿವ ಮಂಗಳ ಸಂಮಿಲನಕೆ ।।ತಾಯ್ನಾಡಿನ ಸಾಕ್ಷಿ।।2ಸಾರಿ।।3।। ಬಾನ್ಮಂದಿರನ ರವಿಚೆಲುವಿನ ನಕ್ಷತ್ರದ ಸೀಸೆ। ಜಯ ಭಾರತದೀ ಮೈ ದೋರುವ ಆಸೆ। ಮೈ ಕೈಗಳ ಆಲಿಂಗನ ತುಟಿ ತುಟಿಗಳ ಕೂಟ। ಕಣ್ಮನಗಳ ಝುಂಪಿನಲಿ ।।ಅಧರಾಮೃತದೂಟ।।2ಸಾರಿ।।4।।

**ಒಂದಿರುಳ ಕನಸಿನಲಿ** **ರಾಗ: ಮೋಹನ**

ಒಂದಿರುಳ ಕನಸಿನಲಿ ನನ್ನವಳ ಕೇಳಿದೆನು ಚೆಂದ ನಿನಗಾವುದೆಂದು। ನಮ್ಮೂರು ಹೊನ್ನೂರು ನಿಮ್ಮೂರು ನವಿಲೂರು

ಚಿಂದ ನಿನಗಾವುದೆಂದು।।ಪ।। ನಮ್ಮೂರು ಚಿಂದವೋ ನಿಮ್ಮೂರು ಚಿಂದವೋ ಎಂದೆನ್ನ ಕೇಳಲೇಕೆ? ನಮ್ಮೂರ ಮಂಚದಲಿ ನಿಮ್ಮೂರ ಕನಸಿದನು ವಿಸ್ತರಿಸಿ ಹೇಳಬೇಕೆ? ನಮ್ಮೂರು ಚಿಂದವೋ ನಿಮ್ಮೂರು ಚಿಂದವೋ ಎಂದೆನ್ನ ಕೇಳಲೇಕೆ? ಎನ್ನರಸ ಸುಮ್ಮನಿರಿ ಎಂದಳಾಕೆ।।1।। ತೌರೂರು ದಾರಿಯಲಿ ತೆಂಗುಗಳು ತಲೆದೂಗಿ ಬಾಳೆಗಳು ತೋಳಬೀಸಿ। ಮಲ್ಲಿಗೆಯ ಮೊಗ್ಗುಗಳು ಮುಳ್ಳು ಬೇಲಿಯ ಬಳಸಿ ಬಳುಕುತಿವೆ ಕಂಪಸೂಸಿ। ನಗುನಗುತ ನಮ್ಮೂರ ಹೆಣ್ಣುಗಳು ಬರುತಿರಲು ನಿಮ್ಮೂರ ಸಂತೆಗಾಗಿ। ನವಿಲೂರಿಗಿಂತಲೂ ಹೊನ್ನೂರೆ ಸುಖವೆಂದು ನಿಲ್ಲಿಸಿತ್ತು ಪ್ರೇಮಕೂಗಿ। ನಮ್ಮೂರು ಚಿಂದವೋ ನಿಮ್ಮೂರು ಚಿಂದವೋ ಎಂದೆನ್ನ ಕೇಳಲೇಕೆ। ಎನ್ನರಸ ಸುಮ್ಮನಿರಿ ಎಂದಳಾಕೆ।।2।। ನಿಮ್ಮೂರ ಬಂಡಿಯಲಿ ನಮ್ಮೂರ ಬಿಟ್ಟಾಗ ಓಡುವುದು ದಾರಿ ಬೇಗ। ಪುಟ್ಟ ಕಂದನ ಕೇಕೆ ತೊಟ್ಟಿಲನು ತುಂಬಿತ್ತು ನಿಮ್ಮೂರ ಸೇರಿದಾಗ। ಊರ ಬೇಲಿಗೆ ಬಂದು ನೀವು ನಮ್ಮನು ಕಂಡು ಕುಶಲವನು ಕೇಳಿದಾಗ। ತುಟಿಯಲೇನೋ ಮಿಂಚಿ ಕಣ್ಣಲೇನೋ ಬಂದು ಕೆನ್ನೆ ಕೆಂಪಾದುದಾಗ। ನಮ್ಮೂರು ಚಿಂದವೊ, ನಿಮ್ಮೂರು ಚಿಂದವೋ ಎಂದೆನ್ನ ಕೇಳಲೇಕೆ? ಎನ್ನರಸ ಸುಮ್ಮನಿರಿ ಎಂದಳಾಕೆ।।3।।

### ಕರ್ಪೂರದ ಗೊಂಬೆ

ಕರ್ಪೂರದ ಗೊಂಬೆ ನಾನು। ಮಿಂಚಂತೆ ಬಳಿಬಂದೆ ನೀನು। ನಿನ್ನ ಪ್ರೇಮ ಜ್ವಾಲೆ ಸೋಕಿ ನನ್ನ ಮೇಲೆ। ಕರಗಿ ಕರಗಿ ನೀರಾದೆ ನಾನು।।ಪ।। ಹೂವಲಿ ಬೆರೆತ ಗಂಧದ ರೀತಿ। ಶೃತಿಯಲಿ ಕಲೆತ ನಾನಿದ ರೀತಿ। ದೇಹದಿ ಪ್ರಾಣವು ಕಲೆತಿಹ ರೀತಿ। ನಿನ್ನಲೇ ಬೆರೆತೆ ನನ್ನನ್ನೇ ಮರೆತೆ ಆ ಆ ಆ....।।1।। ದೇವನ ಸೇರಿದ ಹೂವದು ಧನ್ಯ। ಪೂಜೆಯ ಮಾಡಿದ ಕೈಗಳೇ ಧನ್ಯ। ಒಲವನು ಅರಿತ ಹೃದಯವೇ ಧನ್ಯ। ನಿನ್ನ ನಾ ಪಡೆದು ಧನ್ಯೆ.... ನಾ ನಿಜದಿ....।।2।।

### ಕುಂತ್ರೆ ನಿಂತ್ರೆ ಅವನ್ದೇ ಧ್ಯಾನ

ಕುಂತ್ರೆ ನಿಂತ್ರೆ ಅವನ್ದೇ ಧ್ಯಾನ ಜೀವಕ್ಕಿಲ್ರಿ ಸಮಾಧಾನ। ಅವನಿಗೆಷ್ಟ್ರಿ ಬಿಗುಮಾನ ಅವ್ನೇ ನನ್ನ ಗೆಣೆಕಾರ....।।ಪ।। ಇಂದ್ರಲೋಕ್ದಾಗ್ ಇಲ್ಲಕಣ್ರಿ ಚಂದ್ರಲೋಕ್ದಾಗ್ ಇಲ್ಲಕಣ್ರಿ ಮೂರು ಲೋಕ್ದಾಗ್ ಇಲ್ಲಕಣ್ರಿ ಅವನೇ ನನ್ನ ಗೆಣೆಕಾರ ಗುಣದಾಗೇನು ಕಮ್ಮಿಯಿಲ್ರಿ। ನಡತೆಲೇನು ಕೊರತೆಯಿಲ್ರಿ। ಮಾತ್ನಲ್ಲವರ ಗೆಲ್ಲೋವ್ರಿಲ್ರಿ। ಅವನೆ ನನ್ನ ಗೆಣೆಕಾರ।।1।। ರೂಪ್ನಾಗ್ ಅವ್ನು ಚಂದ್ರ ಕಣ್ರಿ, ರೂಪ್ದಲ್ಲವನು ಇಂದ್ರ ಕಣ್ರಿ, ಕೇರಿಗೆಲ್ಲ ಒಬ್ನೆ ಕಣ್ರಿ, ಅವ್ನೆ ನನ್ನ ಗೆಣೆಕಾರ।। ಜಾತ್ರೇಲ್ ಅವ್ನ ನೋಡ್ದೆ ಕಣ್ರಿ। ಛತ್ರಿ ಮಡ್ಗಿ ಬಂದ ಕಣ್ರಿ, ಪಕ್ದಾಗ್ ಬಂದು ನಿಂತ ಕಣ್ರಿ। ಅವ್ನೇ ನನ್ನ ಗೆಣೆಕಾರ।।2।। ಮೊಲ್ಲೆ ಹೂವ ತಂದ ಕಣ್ರಿ। ಹೂವ ತುರುಬಾಗಿಟ್ಟ ಕಣ್ರಿ। ಮೈ ಎಲ್ಲ ಜುಂ ಜುಂ ಅಂತ್ರಿ। ಅವ್ನೇ ನನ್ನ ಗೆಣೆಕಾರ।। ಚಾವ್ಡಿ ಮುಂದೆ ಬಂದ ಕಣ್ರಿ। ತಾಳಿ ಚಿನ್ನ ತಂದ ಕಣ್ರಿ। ಅವನ್ಗೂ ನನ್ಗೂ ಮದ್ವೆ ಕಣ್ರಿ। ಅವ್ನೆ ನನ್ನ ಯಜಮಾನ।।3।।

### ತೌರ ಸುಖದೊಳಗೆನ್ನ — ರಾಗ: ರೀತಿಗೌಳ

ತೌರ ಸುಖದೊಳಗೆನ್ನ ಮರೆತಿಹಳು ಎನ್ನದಿರಿ। ನಿಮ್ಮ ಪ್ರೇಮವ ನೀವೆ ಒರೆಯನಿಟ್ಟು। ನಿಮ್ಮ ನೆನಪೇ ನನ್ನ ಹಿಂಡುವುದು ಹಗಲಿನಲಿ। ಇರುಳಿನಲಿ ಕಾಡುವುದು ನಿಮ್ಮ ಕನಸು।।ಪ।। ಬೃಂದಾವನದ ಹಣೆಗೆ ಕುಂಕುಮವನಿಡುವಾಗ। ಕಾಣುವದು ಶ್ರೀ ತುಳಸಿ ಕೃಷ್ಣತುಳಸಿ। ನೀಲಾಂಬರದ ನಡುವೆ ಚಂದಿರನು ಬಂದಾಗ। ರೋಹಿಣಿಯು ಬೆಳಗುವಳು ಸನ್ನಿಧಿಯಲಿ।।1।। ತಾಯಡುಗೆ ರುಚಿಯುಂಡು ನಾನಿಲ್ಲಿ ಕುಳಿತಿಲ್ಲ। ಇನ್ನು ತಂಗಿಯ ಮದುವೆ ತಿಂಗಳಿಹುದು। ತೌರ ಪಂಜರದೊಳಗೆ ಸೆರೆಯಾದ ಗಿಳಿಯಲ್ಲ। ಐದು ತಿಂಗಳ ಕಂದ ನಗುತಲಿಹುದು।।2।। ಚಿತ್ರದುರ್ಗದ ರೈಲು ನಿತ್ಯವೂ ಓಡೋಡಿ ಮೈಸೂರ ಸೇರುವುದು ನಾನುಬಲ್ಲೆ। ನಾಳೆ ಮಂಗಳವಾರ ಮಾರನೆದಿನ ನವಮಿ। ಆಮೇಲೆ ನಿಲ್ಲುವೆನೆ ನಾನು ಇಲ್ಲಿ ಮರೆತಿಹಳು ಎನ್ನದಿರಿ।।3।। ಕಣ್ಮರೆಯ ತೋಟದಲೀ। ಅಚ್ಚ ಮಲ್ಲಿಗೆಯರಳು ಬಿರಿಯುತಿಹುದು। ಬಂದು ಬಿಡುವೆನೆ ಬೇಗ ಮುನಿಯದಿರಿ ಕೊರಗದಿರಿ। ಚುಚ್ಚದಿರಿ ಮೊನೆಯಾದ ಮಾತನೆಸೆದು।।4।।

**ನನ್ನ ಕೈ ಹಿಡಿದಾಕೆ** **ರಾಗ: ಶುಭಪಂತುವರಾಳಿ**

ನನ್ನ ಕೈ ಹಿಡಿದಾಕೆ ಅಳುನುಂಗಿ ನಗುವೊಮ್ಮೆ ನಾನೂನೂ ನಕ್ಕೇನಾ। ಇಲ್ಲದಿರಕ ನಿನ್ನ ಅಳುವ ಹುಚ್ಚು ಹಳ್ಳದಾ ಕಳ್ಳ ಹುದಲಾಗ ಸಿಕ್ಕೇನಾ।।ಪ।। ಜಗದಾಗ ಯಾವ್ಯಾವ ನೆರಳು ಬೆಳಕಿನಾಗೆ ಹಗಲಿರುಳು ಇದ್ದೇವಾ। ಎದ್ದೇನು ಬಿದ್ದೇನು ಎತ್ತಲು ಬಿಸಿಲೇನು।।2ಸಾರಿ।। ನಕ್ಕಾವ ಗೆದ್ದಾವ।।1।। ಬಡತನ ಒಡೆತನ ಕಡೆತನಕುಳಿದಾವೇನಾ। ಎದೆಹಿಗ್ಗು ತಡೆಮುಟ್ಟು ಬೆಳ್ಳಿನಾ ಕಡಲಾಗ ಅದ ಮುಳುಗಿಸಬೇಕು।।2ಸಾರಿ।।ಕಡೆಗೋಲು ಹಿಡಿಹುಟ್ಟು।। ।।2।। ನಸುನಗುತ ಬಂದೇವಾ ನಸುನಗುತ ಬಾಳೋಣ ತುಸು ನಗುತ ತೆರಳೋಣ। ಒಡನೂರು ವರುಷಾವಾ ಹರುಷಾದಿ ಕಳೆಯೋಣ।।2ಸಾರಿ।। ಯಾಕಾರ ತೆರಳೋಣ।।3।।

**ನಾ ನಿನಗೆ ನೀ ನನಗೆ** **ರಾಗ: ಯಮನ್‌ಕಲ್ಯಾಣಿ**

ನಾ ನಿನಗೆ ನೀ ನನಗೆ ಜೇನಾಗುವಾ ಜೇನಾಗುವಾ। ರಸದೇವ ಗಂಗೆಯಲಿ ಮೀನಾಗುವಾ।।ಪ।। ಹೂವಾಗುವಾ ಹಣ್ಣಾಗುವಾ। ರತಿರೂಪ ಭಗವತಿಗೆ ಮುಡಿಪಾಗುವಾ।। ಶಿವ ನನ್ನ ಸುಖಕೆ ಸುಖಿ। ಶಿವೆ ನಿನ್ನ ಸುಖಕೆ ಸುಖಿ। ಶಿವ ಶಿವೆಯರಾ ಸುಖವಾ। ಸವಿವಖಿಲ ಲೋಕ ಸುಖಿ। ಬಾ ಬಾರ ಬಾರ ಸಖಿ ಜೇನಾಗುವಾ।।2ಸಾರಿ।। ರಸದೇವ ಗಂಗೆಯಲಿ ಮೀನಾಗುವ ।।2ಸಾರಿ।।1।। ಬಿಂಬ ಚುಂಬನ ರಸದ ಅಗ್ನಿ ಆನಂದದಲಿ ಕರೆಗೆ ಕೈಲಾಸ ವಕ್ಷದಾಲಿಂಗನದೆ ಇಕ್ಷು ಪೀಡನಕುಣ್ಮೆ ಕ್ಷೀರೋಧಿಹಾಸ, ಚಂದ್ರಮಂಟಪದಲ್ಲಿ ಇಂದ್ರಇಂದ್ರಿಯರುದಿಸೆ ಭೋಗ ಸಂತ್ರಾಸ ಗಂಗೆ ಯಮುನೆಯ ತೊರೆಯ ತುಂಗಭದ್ರೆಗೆ ಮೂಡೆ, ತೀರ್ಥನಿಃಶ್ವಾಸ ಬಾಬಾರ ಬಾರ ಸಖಿ ಜೇನಾಗುವಾ ರಸದೇವ ಗಂಗೆಯಲಿ ಮೀನಾಗುವಾ।।2।।

**ನಾನು ಬಡವಿ ಆತ ಬಡವ** **ರಾಗ: ಧರ್ಮವತಿ**

ನಾಡು ಬಡವಿ ಆತ ಬಡವ ಒಲವೆ ನಮ್ಮ ಬದುಕು ಬಳಸಿಕೊಂಡೆವದನೆ ನಾವು ಅದಕು ಇದಕು ಎದಕು।।ಪ।। ಹತ್ತಿರಿರಲಿ ದೂರವಿರಲಿ ಅವನೆ ರಂಗಸಾಲೆ। ಕಣ್ಣು ಕಟ್ಟುವಂಥ ಮೂರ್ತಿ ಕಿವಿಗೆ ಮೆಚ್ಚಿನೋಲೆ।।1।। ಚಳಿಗೆ ಬಿಸಿಲಿಗೊಂದೆ ಹದನ ಅವನ ಮೈಯ್ಯ ಮುಟ್ಟೆ। ಅದೇ ಗಳಿಗೆ ಮೈಯ್ಯ ತುಂಬ ನನಗೆ ನವಿರು ಬಟ್ಟೆ।।2।। ಆತ ಕೊಟ್ಟ ವಸ್ತು ಒಡವೆ ನನಗೆ ಅವಗೆ ಗೊತ್ತು। ತೋಳುಗಳಿಗೆ ತೋಳಬಂದಿ ಕೆನ್ನೆ ತುಂಬ ಮುತ್ತು।।3।। ಕುಂದುಕೊರತೆ ತೋರಲಿಲ್ಲ ಬೇಕು ಹೆಚ್ಚಿಗೇನು? ಹೊಟ್ಟೆಗಿತ್ತ ಜೀವಫಲವ ತುಟಿಗೆ ಹಾಲುಜೇನು।।4।।

**ನೀ ಬರುವ ದಾರಿಯಲಿ** **ರಾಗ:ಮೋಹನ**

ನೀ ಬರುವ ದಾರಿಯಲಿ ಹಗಲು ತಂಪಾಗಿ ಬೇಲಿಗಳ ಸಾಲಿನಲಿ ಹಸಿರು ಕೆಂಪಾಗಿ।।ಪ।। ಪಯಣ ಮುಗಿಯುವ ತನಕ। ಎಳೆ ಬಿಸಿಲು ಮನಿತನಕ। ಸಾಲು ಮರಗಳ ಮೇಲೆ ಸೊಬಗ ಸುರಿದಿರಲಿ।।1।। ನೀ ಬರುವ ದಾರಿಯಲಿ ಹಕ್ಕಿಗಳು ಹಾಡಿ। ಬೆಳ್ದಿಂಗಳಿಂಪಿನಲಿ ತಾರೆಗಳ ಮೂಡಿ। ಕನಸು ಹಬ್ಬಲಿ ನಿನ್ನ ಕಣ್ಣ ಬಳಿ ಚಿನ್ನ। ಹತ್ತಾರು ಗಳಿಕೆಯಲ್ಲಿ ಹಾದಿ ಸಾಗಿರಲಿ।।2।। ನೀ ಬರುವ ದಾರಿಯಲಿ ಬನದಲರು ಸುಳಿದು। ಸಂತಸದ ಇರುಳಿನಲಿ ಆದುದನು ನುಡಿದು। ಮುಂದೆ ಕಾದಿಹ ನೂರು ಹರುಷಗಳು ಕಣ್ತೆರೆದು। ಪಯಣವೋ ನಿಲುಗಡೆಯೋ ನೀ ನರಿಯದಂತಿರಲಿ।।3।।

**ನೀ ಬಂದು ನಿಂತಾಗ....**

ನೀ ಬಂದು ನಿಂತಾಗ.. ನಿಂತು ನೀ ನಕ್ಕಾಗ। ನಕ್ಕು ನೀ ಸೆಳೆದಾಗ... ಸೋತೆ ನಾನಾಗ।।ಪ।। ವಾಸಂತಿ ನಲಿದಾಗ... ಹಸಿರುಟ್ಟು ನಗುವಾಗ। ವನದೇವಿ ಅಡಿಮೇಲೆ... ಅಡಿಯಿಟ್ಟು ಬರುವಾಗ। ಮುಗಿಲೊಂದು ಕರೆದಾಗ.. ನವಿಲೊಂದು ಮೆರೆದಾಗ। ಒಡಲಲ್ಲಿ ಹೊಸದೊಂದು ನವಜೀವ ಬಂದಾಗ। ಕೈಕೈ ಸೋಕಾಗ.... ಮನವೆರಡು ಬೆರೆತಾಗ। ಮಿಡಿದಂಥ ಹೊಸರಾಗ। ಅದುವೇ ಅನುರಾಗ ಬಾರಾ....।।1।। ಜೇನಂಥ ಮಾತಲ್ಲಿ.... ಕುಡಿಗಣ್ಣ ಸಂಚಲ್ಲಿ। ನಗುವೆಂಬ ಹೂ

ಚೆಲ್ಲಿ.... ನಿಂತೇ ಮನದಲ್ಲಿ। ಎದುರಾದೆ ಹಗಲಲ್ಲಿ... ಮರೆಯಾದೆ ಇರುಳಲ್ಲಿ। ನೀ ತಂದ ನೋವಿಗೆ... ಕೊನೆಯೆಲ್ಲಿ ಮೊದಲೆಲ್ಲಿ। ಬಲುದೂರ ನೀ ಹೋಗೆ.... ನಾ ತಾಳೆ ಈ ಬೇಗೆ। ಬಾ ಬಾರೆ ಚೆಲುವೆ... ಬಾರೇ ಒಲವೇ।।2।। ಬಾಳೆಂಬ ಪಥದಲ್ಲಿ .... ಒಲವೆಂಬ ರಥದಲ್ಲಿ। ಕನಸೆಲ್ಲ ನನಸಾಗಿ... ನನಸೆಲ್ಲ ಸೊಗಸಾಗಿ। ಯುಗವೊಂದು ದಿನವಾಗಿ... ದಿನವೊಂದು ಕ್ಷಣವಾಗಿ। ನಮ್ಮಾಸೆ ಹೂವಾಗಿ... ಇಂಪಾದ ಹಾಡಾಗಿ। ಕಹಿಯಲ್ಲಿ ಸಿಹಿಯಲ್ಲಿ.... ಮಳೆಯಲ್ಲಿ ಬಿಸಿಲಲ್ಲಿ। ಎಂದೆಂದೂ ಜೊತೆಯಾಗಿ.. ನಡೆವ ಒಂದಾಗಿ... ಬಾರಾ....।।3।।

### ನೀರಿನಲ್ಲಿ ಅಲೆಯ ಉಂಗುರ

ನೀರಿನಲ್ಲಿ ಅಲೆಯ ಉಂಗುರ। ಭೂಮಿಮೇಲೆ ಹೂವಿನುಂಗುರ। ಮನಸೆಳೆದಾ ನಲ್ಲ... ಕೊಟ್ಟನಲ್ಲ। ಕೆನ್ನೆ ಮೇಲೆ ಪ್ರೇಮದುಂಗುರ....।।ಪ।। ಅಂದಿಗೆಯು ಕಾಲಿನುಂಗುರ। ಅದರ ದನಿ ಎಷ್ಟು ಸುಂದರ। ತರುವು ಲತೆಯೂ ಸೇರಿದ ಕಥೆಯು। ತನುವ ಬಳಸಿ ತೋಳಿನುಂಗುರ....।।1।। ಮಣ್ಣಿನಲ್ಲಿ ಕಂಡ ಉಂಗುರ। ಹೆಣ್ಣು ನಾಚಿ ಗೀರಿದುಂಗುರ। ಬೆರಳಿನಿಂದ ತೀಡಿದುಂಗುರ। ಕಣ್ಣ ಸೆಳೆವ ಕುರುಳು ಉಂಗುರ।।2।। ಆಗೆ ನಿನ್ನ ಕೈಯ ಸಂಚರ। ಎನ್ನ ಹೃದಯವೊಂದು ಡಂಗುರ। ನಾನೂ ನುಡಿಯೇ ಕಿವಿಯಳಿಂಚರ। ಹಣೆಯ ಮೇಲೆ ಬೆವರಿನುಂಗುರ....।।3।।

### ಪಗಡೆಯಾಡೋಣ ಬಾಬಾ — ರಾಗ: ಶ್ರೀ

ಪಗಡೆಯಾಡೋಣ ಬಾಬಾ ಪ್ರಾಣಕಾಂತ।।ಪ।। ಪಟ್ಟೆ ಮಂಚದ ಮೇಲೆ। ಪಟ್ಟವಾಳಿಯನ್ಹಾಸಿ ಚಿತ್ತದಲವ ನಿಮ್ಮ ಅರ್ಥಿಯಿಂದಾಡೋಣ।।1।। ತೂಗುಮಂಚದಮೇಲೆ। ದಾಳ್ಗಳನಾಡೋಣ। ದಾಳ್ಗಳನಾಡೋಣ ಕಾಯ್ಗಳ ನಡೆಸೋಣ।।2।। ಒಂದಾಟ ಗೆದ್ದರೆ ಒಂದು ಸಾವಿರ ಹಣ ಚಿತ್ತದಲವ ನಿಮ್ಮ ಅರ್ಥಿಯಿಂದಾಡೋಣ।।3।। ಬಿದ್ದಿತೆನಗೆ ಗರಾ ಗೆದ್ದೆನು ನಾನೂ ಸದ್ದು ಮಾಡದೆ ನಿಮ್ಮ ಮುದ್ರೆಯುಂಗುರ ಕೊಡಿ।।4।।

### ಬರುತಾಳೆ3 ನಾಳೆ ಕೈ ಹಿಡಿದ — ರಾಗ: ಹಿಂದೋಳ

ಬರುತಾಳೆ ಬರುತಾಳೆ ಬರುತಾಳೆ ನಾಳೆ। ಕೈ ಹಿಡಿದ ಮನದನ್ನೆ ಚೆನ್ನೆ। ಬರುತಾಳೆ।।ಪ।। ಹೋದುಸಿರು ಹಿಮ್ಮರಳಿ ಬರುವಂತೆ ಬರುತಾಳೆ। ಒಣಗಲಿಹ ಪೈರಿಗೆ ಮಳೆಯಂತೆ ಬರುತಾಳೆ। ಬೆಂದೆದೆಗೆ ಶಾಂತಿಯನು ಜೊನ್ನವನು ತರುತಾಳೆ। ಒಡಲಕಡಲಿಗೆ ತಿಂಗಳುಲಿವಂತೆ ಬರುತಾಳೆ।।1।। ತೋಟದ ಹೂಗಳಿಗೆ ಬರುವಂತೆ ಕಾಂತಿ ಮನೆಯ ಶೂನ್ಯಕೆ ಬರುವಂತೆ ಶಾಂತಿ। ಕವಿಯ ಬಾಳಿರುಳಿಗೆ ಮುಂಬೆಳಕು ಬರುವಂತೆ। ಶಿವನ ಮೊಗ್ಗೆಯ ಮಲರರಳುವಂತೆ। ಬರುವಳೂ ಕಾಂತೆ।।2।।

### ಬರೆದೆ ನೀನು ನಿನ್ನ ಹೆಸರ

ಬರೆದೆ ನೀನು ನಿನ್ನ ಹೆಸರ। ನನ್ನ ಬಾಳ ಪುಟದಲಿ...। ಬಂದು ನಿಂತೆ.. ಹೇಗೋ ಏನೋ। ನನ್ನ ಮನದ ಗುಡಿಯಲೀ।।ಪ।। ಮಿಡಿದೆ ನೀನು ಪ್ರಣಯನಾದ। ಹೃದಯ ವೀಣೆ ಅದರಲೀ...। ಬೆರೆತು ಹೋದೆ... ಮರೆತು ನಿಂದೆ। ಅದರ ಮಧುರ ಸ್ವರದಲಿ।।1।। ಕಂಗಳಲ್ಲೇ ಕವನ ಬರೆದು। ಕಳಿಸಿದೆ ನೀ... ಇಲ್ಲಿಗೆ। ಅಂಗಳದೆ ಅರಳಿತಾಗ। ನನ್ನ ಒಲವ ಮಲ್ಲಿಗೆ।।2।। ನಿನ್ನ ನಗೆಯ ಬಲೆಯ ಬೀಸಿ। ಹಿಡಿದೆ ನನ್ನ ಜಾಲದೆ। ಬಂಧಿಸಿದೆ ನನ್ನನಿಂದು...। ನಿನ್ನ ಪ್ರೇಮ ಪಾಶದೇ...।।3।।

### ರಾಯರು ಬಂದರು ಮಾವನ — ರಾಗ: ಕಲಾವತಿ

ರಾಯರು ಬಂದರು ಮಾವನ ಮನೆಗೆ ರಾತ್ರಿಯಾಗಿತ್ತು। ಹುಣ್ಣಿಮೆ ಹರಿಸಿದ ಬಾನಿನ ನಡುವೆ ಚಂದಿರ ಬಂದಿತ್ತು। ತುಂಬಿದ ಚಂದಿರ ಬಂದಿತ್ತು।।ಪ।। ಮಾವನ ಮನೆಯಲಿ ಮಲ್ಲಿಗೆ ಹೂಗಳ ಪರಿಮಳ ತುಂಬಿತ್ತು। ಬಾಗಿಲ ಬಳಿ ಕಾಲಿಗೆ ಬಿಸಿನೀರಿನ ತಂಬಿಗೆ ಬಂದಿತ್ತು। ಒಳಗಡೆ ದೀಪದ ಬೆಳಕಿತ್ತು।।1।। ಘಮಘಮಿಸುವ ಮೃಷ್ಟಾನ್ನದ ಭೋಜನ ರಾಯರ

ಕಾದಿತ್ತು। ಬೆಳ್ಳಿಯ ಬಟ್ಟಲ ಗಸಗಸೆಪಾಯಸ ರಾಯರ ಕರೆದಿತ್ತು। ಭೂಮಿಗೆ ಸ್ವರ್ಗವೆ ಇಳಿದಿತ್ತು॥2॥ ಚಪ್ಪರಗಾಲಿನ ಮಂಚದ ಮೇಗಡೆ ಮೆತ್ತನೆ ಹಾಸಿತ್ತು। ಅಪ್ಪಟ ರೇಸಿಮೆ ದಿಂಬಿನ ಅಂಚಿಗೆ ಚಿತ್ರದ ಹೂವಿತ್ತು। ಪದುಮಳು ಹಾಕಿದ ಹೂವಿತ್ತು॥3॥ ಚಿಗುರೆಲೆ ಬಣ್ಣದ ಅಡಿಕೆಯ ತಂದಳು ನಾದಿನಿ ನಗುನಗುತ। ಬಿಸಿಬಿಸಿ ಹಾಲಿನ ಬಟ್ಟಲ ತಂದರು ಅಕ್ಕರೆಯಲಿ ಮಾವ ಮಡದಿಯ ಸದ್ದೇ ಇರಲಿಲ್ಲ॥4॥ ಮಡದಿಯ ತಂಗಿಯ ಕರೆದಿಂತೆಂದರು ಅಕ್ಕನ ಕರೆಯಮ್ಮ। ಮೆಲುದನಿಯಲಿ ನಾದಿನಿ ಇಂತೆಂದಳು ಪದುಮಳು ಒಳಗಿಲ್ಲ ನಕ್ಕಳು ರಾಯರು ನಗಲಿಲ್ಲ॥5॥ ಏರುತ ಇಳಿಯುತ ಬಂದರು ರಾಯರು ದೂರದ ಊರಿಂದ। ಕಣ್ಣನು ಕಡಿದರು ನಿದ್ದೆಯು ಬಾರದು ಪದುಮಳು ಒಳಗಿಲ್ಲ। ಪದುಮಳ ಬಳೆಗಳ ಧ್ವನಿಯಿಲ್ಲ॥6॥ ಬೆಳಗಾಯಿತು ಸರಿ ಹೊರಡುವೆ ನೆಂದರು ರಾಯರು ಮುನಿಸಿನಲಿ। ಒಳಮನೆಯಲಿ ನೀರಾಯಿತು ಎಂದಳು ನಾದಿನಿ ರಾಗದಲಿ। ಯಾರಿಗೆ? ಎನ್ನಲು ಹರುಷದಲಿ। ಪದುಮಳು ಬಂದಳು ಹೂವನು ಮುಡಿಯುತ ರಾಯರ ಕೋಣೆಯಲಿ॥7॥

**ಸಂಜೆಗೆನ್ನ ಪಯಣವೆಂದು** **ರಾಗ: ಬೇಗಡೆ**

ಸಂಜೆಗೆನ್ನ ಪಯಣವೆಂದು ತಿಳಿದಳೆನ್ನ ಸುಂದರಿ। ನನ್ನ ಮುಂದೆ ಬಂದು ನಿಂತು ತಡೆದಳೆನ್ನ ವಿನಯದಿ॥ಪ॥ ಕೆಂಪು ತುಟಿಗಳಿಂದ ಹರಸಿ ನುಡಿಯಲಿಲ್ಲ ನಿಜವನು। ತೆರೆದ ಕಣ್ಣುಗಳುದಕ ಹರಿಸಿ ತೊಳೆದಳೆನ್ನ ಮನವನು॥1॥ ಕಣ್ಣ ಹನಿಯು ಮಣಿಯ ತೆರೆದಿ ಕಣ್ಣೆನೊಡವೆಯಾಯಿತು। ತುಟಿಯಿಂ ಬಂದ ಮಾತು ತಿರುಗಿ ಬಂದ ಕಡೆಗೆ ಹೋಯಿತು॥2॥ ನಲ್ಲೆ ಮುಡಿದ ಮಲ್ಲೆ ಅರಳು ಇಲ್ಲೆ ನಿಲ್ಲಿರೆಂದಿತು। ಓರೆಗಣ್ಣೆನೊಂದು ಹರಳು ಹೋಗಬೇಡಿರೆಂದಿತು॥3॥

**ಹತ್ತು ವರುಷದ ಹಿಂದೆ** **ರಾಗ: ಮೋಹನ**

ಹತ್ತು ವರುಷದ ಹಿಂದೆ ಮುತ್ತೂರು ತೇರಿನಲಿ ಅತ್ತಿತ್ತ ಸುಳಿದವರು ನೀವಲ್ಲವೇ? ಹತ್ತಿರದ ಹೆಣ್ಣೆಂದು ಮತ್ತೆ ಮುತ್ತೂರಿನಲಿ ಒಪ್ಪಿ ಕೈ ಹಿಡಿದವರು ನೀವಲ್ಲವೆ?॥ಪ॥ ಬೆಟ್ಟಗಳ ಬೆನ್ನಿನಲಿ ಬೆಟ್ಟ ಗಳದಾರಿಯಲಿ। ಕಟ್ಟಿಕೊಂಡಲೆದವರು ನೀವಲ್ಲವೆ? ದಿಬ್ಬದಲಿ ಹಿಂದಾಗಿ ಕಣಿವೆಯಲಿ ಮುಂದಾಗಿ ನಗುನಗುತ ನಡೆದವರು ನೀವಲ್ಲವೆ?॥1॥ ಬಾಗಿಲಿಗೆ ಬಂದವರು ಬೇಗ ಬಾ ಎಂದವರು ಬಂದುದೇಕೆಂದವರು ನೀವಲ್ಲವೆ? ನೋಡು ಬಾ ಎಂದವರು ಬೇಡ ಹೋಗೆಂದವರು ಎಂದಿಗೂ ಬಿಡದವರು ನೀವಲ್ಲವೆ? ॥2॥ಸೆರಗೆಳೆದು ನಿಲ್ಲಿಸಿದ ಜಡೆಯೆಳೆದು ನೋಯಿಸಿದ ಬಯಲು ಸೀಮೆಯ ಜಾಣ ನೀವಲ್ಲವೆ? ಮೊದಲಿರುಳು ಹೊಂಗನಸ ಮುನ್ನೀರ ದಾಟಿಸಿದ ಬೆಳಕು ಬೆಡಗಿನ ಹಡಗು ನೀವಲ್ಲವೆ? ॥3॥ ತೊತ್ತೆಂದು ಜರೆದವರು ಮುತ್ತೆಂದು ಕರೆದವರು ಎತ್ತರದ ಮನೆಯವರು ನೀವಲ್ಲವೆ? ನೀನೆ ಸಾಕೆಂದವರು ನೀನೆ ಬೇಕೆಂದವರು ಚಿತ್ತದಲಿ ನಿಂತವರು ನೀವಲ್ಲವೆ? ಕೈಗೆ ಬಳೆ ಏರದೆಯೆ ಅಯ್ಯೋ ನೋವೆಂದಾಗ ಮಹಡಿಯಿಂದಿಳಿದವರು ನೀವಲ್ಲವೆ?॥4॥ ಬಳೆಗಾರ ಶೆಟ್ಟಿಯನು ಗದ್ದರಿಕೊಂಡವರು ಬೆತ್ತವನು ತಂದವರು ನೀವಲ್ಲವೆ? ಹೊನ್ನ ಹೊಳೆ ನೀನೆಂದು ಮುತ್ತು ಮಳೆನಾನೆಂದು ಹಾಡುತ್ತ ಕುಣಿದವರು ನೀವಲ್ಲವೆ? ॥5॥ ಮಲೆನಾಡ ಹೆಣ್ಣೆಂದು ಒಲವಿತ್ತ ಹಣ್ಣೆಂದು ಏನೇನೋ ಬರೆದವರು ನೀವಲ್ಲವೆ? ಚಂದಿರನ ಮಗಳೆಂದು ಚಂದ್ರಮುಖಿ ನೀನೆಂದು ಹೊಸ ಹೆಸರನಿಟ್ಟವರು ನೀವಲ್ಲವೆ?॥6॥ ಮಲ್ಲಿಗೆಯ ದಂಡೆಯನು ತುರುಬಿನಲಿ ಹಿಡಿದವರು ತುಟಿಗೆ ತುಟಿ ತಂದವರು ನೀವಲ್ಲವೆ? ಬಡತನವೊ ಸಿರಿತನವೊ, ಯಾರಿರಲಿ ಎಲ್ಲಿರಲಿ? ದೊರೆಯಾಗಿ ಮೆರೆದವರು ನೀವಲ್ಲವೆ?॥7॥ ಗಂಡನಿಗೆ ಒಪ್ಪಾಗಿ ಕಂದನಿಗೆ ದಿಕ್ಕಾಗಿ ಪಯಣದಲಿ ಜೊತೆಯಾಗಿ ನಾನಿಲ್ಲವೆ?॥8॥

**ಹೊಸಿಲ ಬಳಿ ಬಂದೊಡನೆ** **ರಾಗ: ಕಲಾವತಿ**

ಹೊಸಿಲ ಬಳಿ ಬಂದೊಡನೆ ಬಾಗಿಲನು ತೆರೆವಾಕೆ। ಹೆಸರೇನು ಎನುವಾಕೆ ಮನೆಯೊಳಿಲ್ಲ। ಬಿಸಿಲಿನಲಿ ನೆಳಲಿನಲಿ

ಪಕ್ಕದಲಿ ಸುಳಿವಾಕೆ ಹಸಿರು ಕುಪ್ಪುಸದಾಕೆ ಮನೆಯೊಳಿಲ್ಲ॥1॥ ರಾಯರೇ ಎಂದೆನುತ ರಾತ್ರಿಯಲಿ ವೀಣೆಯನು। ಪಕ್ಕದಲಿ ಕುಳಿತು ನುಡಿಸುವಾಕೆ। ರಾಗದಲಿ ಚಂದಿರನ ತಾರೆಗಳ ಹೋಲ್ವಾಕೆ। ರಾಶಿ ಹೂಗಳ ಹೆಣೆದು ಮುಡಿಯುವಾಕೆ ಮನೆಯೊಳಿಲ್ಲ॥2॥ ಅಕ್ಕರೆಯ ದನಿಯಾಕೆ ಸಕ್ಕರೆಯ ನುಡಿಯಾಕೆ। ಸಿಕ್ಕಿದರೆ ಬಿಡದಾಕೆ ಮನೆಯೊಳಿಲ್ಲ। ಚಿಕ್ಕ ಮನೆಯೊಳಗೆನ್ನ ಪಕ್ಕದಲಿ ನಗುವಾಕೆ। ಉಕ್ಕು ಒಲ್ಮೆಯ ಮಡದಿ ಮನೆಯೊಳಿಲ್ಲ॥3॥

**ಹೆಂಡತಿಯೊಬ್ಬಳು ಮನೆಯೊಳಗಿದ್ದರೆ** **ರಾಗ: ಕಲಾವತಿ**

ಹೆಂಡತಿಯೊಬ್ಬಳು ಮನೆಯೊಳಗಿದ್ದರೆ ನನಗದೆ ಕೋಟಿ ರೂಪಾಯಿ। ಹೆಂಡತಿಯೊಬ್ಬಳು ಹತ್ತಿರವಿದ್ದರೆ ನಾನೂ ಒಬ್ಬ ಸಿಪಾಯಿ॥ ಹೆಂಡತಿಯೊಬ್ಬಳು ಮನೆಯೊಳಗಿದ್ದರೆ ಹುಣ್ಣಿಮೆ ಹೋಳಿಗೆ ದೀಪ। ಹೆಂಡತಿ ತವರಿಗೆ ಹೊರಡುವೆನೆಂದರೆ ನನಗಿಲ್ಲದ ಕೋಪ। ಕೈಹಿಡಿದವಳು ಕೈ ಬಿಡದವಳು ಮಾಡಿದ ಅಡಿಗೆಯು ಚೆಂದ। ನಾಗರಕುಚ್ಚಿನ ನಿಡುಜಡೆಯವಳು ಈಕೆ ಬಂದುದು ಎಲ್ಲಿಂದ॥1॥ ಕಬ್ಬಿಗನೂರಿಗೆ ದಾರಿಗಳಿದ್ದರೆ ಕನಸೇ ಇರಬೇಕು। ಅಲ್ಲಿಯ ದೊರೆತನ ಸಿಗುವಂತಿದ್ದರೆ ನನಗೇ ಸಿಗಬೇಕು। ತಾರೆಯ ಬೆಳಕಿನ ತುಂಬಿದ ಸಭೆಯಲಿ ಸುಂದರಿ ಮೆರೆದಾಳು। ನನ್ನೊಡನವಳೂ ಸಿಂಹಾಸನದಲಿ ಮೆಲ್ಲನೆ ನಕ್ಕಾಳು॥2॥ ಚಂದಿರನೂರಿನ ಅರಮನೆಯಿಂದ ಬಂದವರೀಗೆಲ್ಲಿ? ಬೆಳ್ಳಿಯ ಕೋಟೆಯ ಬಾಗಿಲಿನಿಂದ ಬಂದವರೀಗೆಲ್ಲಿ? ಹೆಂಡತಿಯೊಂದಿಗೆ ಬಡತನ ದೊರೆತನ ಏನೂ ಭಯವಿಲ್ಲ। ಹೆಂಡತಿಯೊಲುಮೆಯ ಭಾಗ್ಯವನರಿಯದ ಗಂಡಿಗೆ ಜಯವಿಲ್ಲ॥3॥

## ವಿರಹಗೀತೆ

**ಆಟಿ ಬಂತು ಆಟಿ ವಿರಹಿಗಳಿಗೆ**

ಆಟಿ ಬಂತು ಆಟಿ ವಿರಹಿಗಳಿಗೆ ಈಟಿ ತಂತು॥ಪ॥ ಕಣ್ ತೆರೆಯೆ ಜೀವಜಂತು ಬಿಗಿಹಿಡಿದು ಬಾಳತಂತು ಗುಡುಗಿ ಮುಗಿಲೆದೆಯ ನಾಟಿ ಬಂತು ಮಿಂಚು ತಂತಿಯನು ಮೀಟಿಬಂತು॥1॥ ॥1॥ ಭೋರೆಂದು ಸುರಿಸಿ ಬಂತು ನೆಲಮುಗಿಲ ಸರಿಸಿ ಬಂತು ಬೆಂದೆದೆಯನುರಿಸಿ ಬಂತು ಆಸೆಗಳನೊರಸಿ ಬಂತೋ ಬಂತು॥2॥

**ಇಚ್ಚಕವು ಎನ್ನಲ್ಲಿ। ಮುಚ್ಚಕವು** **ರಾಗ: ಮೋಹನ**

ಇಚ್ಚಕವು ಎನ್ನಲ್ಲಿ। ಮುಚ್ಚಕವು ಅವಳಲ್ಲಿ। ಇಷ್ಟು ವಂಚಕನೆಂದು। ಈಗ ತಿಳಿಯಿತೂ। ಬೇಡಿಕೊಂಬುದರಿಲ್ಲಿ। ಬೆದರಿಕೆಯು ಎನ್ನಲ್ಲೀ ಮಾಡೀಮಾಡುವುದಿಲ್ಲಿ। ಮೋಹ ಅವಳಲ್ಲೀ॥1॥ ಶುಕ್ರವಾರಗಳಲ್ಲಿ ಮಿಕ್ಕವಾರಗಳಲ್ಲೀ। ಸುರಿತ ಸಂಭ್ರಮವಲ್ಲಿ। ಬಿರಿಸುಯಿಲ್ಲಿ। ಕೋಲಾಹಲಗಳಲ್ಲಿ। ಕೋಪಮಾಡುವಲ್ಲಿ। ಮೇಲಾಟ ಅವಳಲ್ಲಿ॥ ವಾದವಿಲ್ಲೀ॥2॥ ನಿನ್ನ ಮಾತುಗಳು ನಂಬುವರೆ। ನೀರಜಾಕ್ಷ ಎನ್ನ ಮುಟ್ಟದೆ ಕೈತೆಗೀ। ವಿಠಲನಾಭಾ। ಸಾಕುಸಾಕೆನ್ನೊಳೀ ಮಾತು। ಇಲ್ಲಿ ಬಿಡು ಪ್ರಾಣಕಾಂತಾ॥3॥

**ಊರಿಗೆ ಹೋಗಿ ವಾರ ತಿರುಗಿತವ್ವ** **ರಾಗ: ಮೋಹನ**

ಊರಿಗೆ ಹೋಗಿ ವಾರ ತಿರುಗಿತವ್ವ। ಇನ್ನೂ ಬರಲಿಲ್ಲಾ ಎನ್ನಾವಾ..... ಇನ್ನೂ ಬರಲಿಲ್ಲಾ॥ಪ॥ ಮೂರು ವ್ಯಾಳೀ ದಾರಿ ನೋಡಿ। ನೋಡಿ ನೋಡಿ ಕೊರಗುತ್ತೈತಿ ಕಳ್ಳ। ಮರಮರ ಮರಗುತ್ತೈತಿ ಮಳ್ಳಾ। ನವಿಲ್ಗಣ್ಣ ಮೈಯ್ಯ ನೀಲಿ ಚುಕ್ಕಿ ಸೀರಿ। ಕೆದಕಿ ಕೇಳುತೈತಿ। ಯಾಕವ್ವಾ ನನ್ನ ನೀ ಮರೆತೆ? ಯಾರಿಗಾಗಿ ಹೊಸಸೀರಿ ಉಡಲವ್ವ। ನನ್ನ.... ಮನದ ರೀತಿ ಸೀರಿಗೇನ ಗೊತ್ತು ಗೆಳತಿ॥1॥ ನೆರೆಮನೆಮಳ್ಳಿ ಆಕಿದೇನಾ ಹೇಳಲಿ....। ಬಡಿವಾರ ಮಾಡಿಕೊಂಡು ಗಂಡಗೆ ರೊಟ್ಟಿ ಬುತ್ತಿ ಕಟ್ಟಿಕೊಂಡು। ಹೊಲಕ್ಕೆ ಹೋಗುವಾಗ ಕುಲುಕುಲು ನಗುತಾಳೆ। ನನ್ನಮೈ ಕೆಂಡಆಗತಾವ। ಆಕೆಯ ನಗಿಕಂಡು॥2॥ ಗಂಡಸರ ನೀತಿ ಏನ ನಂಬತೀ ಅದು ಪಾತರಗಿತ್ತಿ। ಹೂಕಂಡು ಹುಚ್ಚಾ ಆಗತೈತಿ। ಯಾವ ಹೊಸಹೂ ಎಳೆದು ಬಿಟ್ಟಿತೇನೋ। ಗುಂಗ ಹಿಡಿಸತೈತಿ ಆತಗ ನಂದ್ಯಾತರ ಚಿಂತಿ॥3॥

### ಏನಿದಚ್ಚರಿ ಪ್ರಿಯೆ

ಏನಿದಚ್ಚರಿ ಪ್ರಿಯೆ। ಏಣಾಂಕ ವದನೆಯ। ನೀನಗಲಿರುವುದು ಉಚಿತ ವೇನಯ್ಯಾ।।ಪ।। ಮಾನುನಿಮಣಿಯನ್ನು ಪ್ರಾಣಾಪದಕ ವೆಂದು। ಆನಂದ ಪಡೆವೋ। ಅಭಿಮಾನವೆಲ್ಲಿಹುದಯ್ಯಾ।।ಅ.ಪ।। ನಾಯಕಿಯಳ ಬಿಟ್ಟು ನಾಳಿಗೆರಡು ತಿಂಗಳಾಯಿತಿಂತೀ ಪರಿಗಣಿಪಲು। ತೋಯಜಾಕ್ಷಿಯ ಚಿತ್ತ। ತೊಳಲಿಸುವುದು। ಬಲು ನ್ಯಾಯವೇ। ನಿನಗೆ ಇದು ಶ್ರೇಯವೇ। ಕಾಡುವುದಿನ್ನು ಪ್ರೀಯವೇ। ಕಾಮಿನಿಯು ಕಂಪಿಸಿ। ಕಾಯಜನ ಶರಗಾಯಕಂಜುವಳು। ನಿನ್ನನೂ ಬಯಸಿ। ಆಯತಾಂಬಕಿ ಬಾಯ ಬಿಡುತಿಹಳು। ಪರಿಪರಿಯ ಮಾಯೋಪಾಯಗಳ ಯೋಚನೆ ಮಾಡುವಳು। ಮಾನಿನಿಯ ಮೆಚ್ಚಿನ ಪ್ರಾಯಮದವನು ಮೀಸಲಾಗಿ ತ್ವದೀಯ. ಪದಕ್ಕೊಪಿಸಿ। ಮಮಸಖಿ। ಚಿರಾಯುವಾಗಿರಲೆಂದು ಹರಸುವಳು। ನೋಯಿಸುವೊದೊಳಿತಲ್ಲ ಸುಗುಣ।।1।। ಇರುಳೋಳು ಚರಿಪ ಚಂದಿರಗೆ ಕುಮುದಗಳ್। ಸಾಸಿರವೆಂಬೋ ಶಾಸ್ತ್ರವನರುಹಿದಳೋ। ಅರಗಳಿಗ್ಯಾದರೂ ಮೊರೆ ಕೇಳಿದನಂದಲ್ಪರಿದಾಳು। ಅನ್ನೋದಕಗಳ ತೊರೆದಾಳು। ಚಿನ್ನದಾ ಭರಣ ಜರಿದಾಳು। ಅರಮನೆಯೊಳಬ್ಬರ ಕರೆದು ಕಾಮಿನಿ। ಮಾತನಾಡಿಹಳೂ। ವಿರಹಾಗ್ನಿ ತಾಪಕೆ। ತರತರಿ। ಮೈಬಣ್ಣಗುಂದಿಹಳು। ಒಳಗೊಳಗೆ ಸವಿಯುತ ಸೊರಗಿ ಸುಮ್ಮಗೆ। ಇಳೊಯೊಳಿರುತಿಹಳೂ। ಸಂತೈಸು। ಸಾಕಿನ್ನು ಕರೆತರಲು ಒಳಿತಲ್ಲ। ನಿನ್ನನ್ನು ಕರೆಯಲಟ್ಟಿದಳಾ ಸುಗುಣೆ। ಸುಂದರಿಯರನು ನೋಯಿಸುವುದೊಳಿತಲ್ಲ।।2।। ಬೇಗನೆ ತೆರಳುವುದು ಕಾರುಣ್ಯ। ಶರಧೀ। ಒಡೆಯನ ಮನಕೆ ಬೇಸರಳಾದ ಬಾಮಿನಿ। ಪೊಡವಿಯಲಿದ್ದೇನು ಫಲವೆಂದಳು। ಕಡುಯೌವನವೀಗ ಅಡವಿ ಪಾಲಾಯಿತೆಂದು। ನುಡಿದಾಳು ನಿನ್ನ ಗುಣ ತಡೆದಾಳು। ಬಯಸಿ ಎದೆ ಬಡಿದಾಳು। ಹಿಂಗಿರುವಳಡಿಗಡಿಗೆ ನಡೆ ನುಡಿಗೆ। ತಪ್ಪಿಡ್ಡಿವರೆಲ್ಲಾ। ಕಡುಬಡ ನಡುವಿನ ಹುಡುಗಿ ದೊರಕುವುದ್ದಿಡಿ ಮಾತಲ್ಲ। ಮಡದಿಯರ ವ್ರತ ಕೆಡಿಸಿ। ಗೆಳೆತನವ ಬಿಡುವುದೊಳಿತಲ್ಲ। ಕೇಳಿಂದಿರೇಶಾ। ಹಡದವರು ಬೆಂಬಿಡದೆ ಪೇಳಿದ ಫಲಗಳನ್ನೆಲ್ಲಾ ನುಡಿಯ ಕಟ್ಟಿದನೆಂದು। ಪರಿಪರಿಯಲಿ ಮಿಡುಕುವಳು ಕೈಹಿಡಿದು ಸಲಹೋ।।3।।

### ಕಾದಿಹಳು ರಾಧೆ ಶ್ಯಾಮ

ಕಾದಿಹಳು ರಾಧೆ ಶ್ಯಾಮ ಬರುವನೆಂದು। ಸೆರಗ ಮರೆಯೊಳು ಮರೆಮಾಚಿ ನಿಂದು।।ಪ।। ಬಾಲ ಶಶಿಯು ಪೂರ್ಣಗೊಳ್ಳುವ ಮುನ್ನ। ತಡಮಾಡದೆ ಬರುವನೆಂದು ಹೋದವನು। ದಿನಗಳುರುಳಿ ಮಾಸಗಳು ಕಳೆದೂ। ಋತುಗಳು ಒಂದಾದ ಮೇಲೊಂದು ಬಂದರೂ। ಬರುವ ಮರೆತನೇಕೆ ನೀಂದಿಹನೆಲ್ಲೋ। ಹೊಸ ಸಖಿಯರ ಕೂಡಿ ಬಿಟ್ಟಿಹನೋ ಎಂದು।।1।। ಮೈಮರೆತು ಆಗಾಗ ಪವನ ದನಿಯ ಕೇಳಿ। ಓಡಿ ಹೋಗುವಳು ಕೊಳಲು ಎಂದು ನಂಬಿ। ಮರದ ಮರೆಯೊಳಗೆ ಅವಿತು ನಿಂತು। ಕಣ್ಣುಮುಚ್ಚಾಲೆ ಆಡುತಿಹನೆಂದು। ಕಳ್ಳ ಹೆಜ್ಜೆಯನಿಕ್ಕಿ ಹೋಗುವಳು ಮುಂದೆ। ಕೈಯಲ್ಲಿಹ ಕುಸುಮ ಮಾಲೆಯೊಂದಿಗೆ।।2।। ಗೋಮಾತೆ ದೂರದಲಿ ನಿಂತಿಹುದ ಕಂಡು। ಅಲ್ಲೆಲ್ಲೋ ಮಾಧವ ಅವಿತಿರಬಹುದೆಂದು। ಬೇಗ ಓಡುವಳು ಎಡವಿ ಬೀಳುವಳು ಹುಡುಕಾಡಿ ಸಾಕಾಗಿ ಕೊನೆಗೆ ನಿಲ್ಲುವಳು। ಹಂಬಲಿಸುತಿಹಳು ಸಾಕಾಗಿ ಸೋತು। ಎಲ್ಲಡಗಿರುವೆಯೋ ನೀ ಮೋಹನ ಎಂದು।।3।। ಕೈಯಲ್ಲಿಹ ಕುಸುಮ ಒಣಗುತಿದೆ ನೋಡು। ಮನೋಹರ ನಿನ್ನ ಹುಡುಕಾಟ ಸಾಕು ಮಾಡು। ನವ ಶೃಂಗಾರದಿ ಒಂದಿಲ್ಲವೆಂದರಿತೋ। ನಿನ್ನ ಕರೆಯ ಕೇಳಿ ತಡಮಾಡಿದನೆಂತೋ। ಮುನಿಸಿ ನನ್ನಿಂದ ದೂರವಿರುವೆಯೇಕಿಂದು ಗೋಳಿಡುತಿಹಳು ರಾಧೆ ಶ್ರೀದರ್ಶನ ಕೊಡೆಂದು।।4।।

### ನಿನ್ನ ಕಂಗಳ ಕೊಳದಿ — ರಾಗ: ಹಿಂದೋಳ

ನಿನ್ನ ಕಂಗಳ ಕೊಳದಿ ಬೆಳದಿಂಗಳಿಳಿದಂತೆ। ನನ್ನೆದೆಯ ಕಡಲೇಕೆ ಬೀಗುತಿಹುದು? ಸೂಜಿಗಲ್ಲಾಗಿರುವೆ ಸೆಳೆದು ನಿನ್ನಯ ಕಡೆಗೆ। ಗರಿಗೆದರಿ ಕನಸುಗಳು ಕಾಡುತಿಹವು।।1।। ಎದೆಗೆ ತಾಪದ ಉಸಿರು ತೀಡಿದರು ಅಲರು ನಿನ್ನ ಹುಣ್ಣಿಮೆ

ನಗೆಯು ಛೇಡಿಸಿಹುದು। ಬಳಿಗೆ ಬಾರದೆ ನಿಂತೆ ಹೃದಯ ತುಂಬಿದೆ ಚಿಂತೆ। ಜೀವ ನಿನ್ನಾಸರೆಗೆ ಕಾಯುತಿಹುದು॥2॥ ನೀನೊಂದು ದಡದಲ್ಲಿ ನಾನೊಂದು ದಡದಲ್ಲಿ। ನಡುವೆ ಮೈ ಚಾಚಿರುವ ವಿರಹದಲೆಗಳು। ಯಾವ ಗಾಳಿಯು ತೇಲಿ ಎಂದು ಬರುವುದೋ ಕಾಣೆ(2ಸಾರಿ)। ನೀನಿರುವ ಬಳಿಯಲ್ಲಿ ನನ್ನ ಒಡಲು॥3॥

**ನೀನಿಲ್ಲದಿರುವಾಗ ನಲ್ಲ ಒಬ್ಬಂಟಿ** **ರಾಗ: ಪುನ್ನಾಗವರಾಳಿ**

ನೀನಿಲ್ಲದಿರುವಾಗ ನಲ್ಲ ಒಬ್ಬಂಟಿ ನಾನು ಮನೆಯಲ್ಲಿ। ಮೂಡುವುದು ಚಿತ್ರ ಮನದಲ್ಲಿ॥ಪ॥ ಭೋರ್ಗರೆದು ಮೊರೆಯುವುದು ಕಡಲು। ನೊರೆಗರೆದು ಸುರಿವ ಅಲೆಗಳು। ಮೇರೆ ಅರಿಯದ ಪ್ರೀತಿ ನಿನ್ನಲ್ಲಿ ನನಗೆ। ಅದಕ್ಕೆಂದೆ ಕಡಲೆನ್ನ ಮನ ತುಂಬಿದೆ॥1॥ ಏರು ಪರ್ವತ ಸಾಲು ಸಾಲು। ಹಿಮ ಕವಿದ ನುಣುಪು ಶಿಖರಗಳು। ಎಷ್ಟು ಎತ್ತರವೆನ್ನ ಪ್ರೀತಿ ನಿನ್ನಲ್ಲಿ। ಅದಕ್ಕೆಂದು ಪರ್ವತದ ಚಿತ್ರ ಮನದಲ್ಲಿ॥2॥ ನನ್ನ ಪ್ರೀತಿಗೆ ಅಲೆಯ ಆತಂಕ। ನೀಡಿರುವ ಸಾಗರವೆ ನಿನಗೆ ವಂದನೆ॥ ನನ್ನ ಪ್ರೀತಿಗೆ ನಿನ್ನ ಶಿಖರಸೌಮ್ಯತೆ ಕೊಟ್ಟು। ಪರ್ವತವೆ ನಿನ್ನ ಮರೆವೆನೆ॥3॥

**ಪರಿಕಾರವೇ ಸೊಗಸೋ** **ರಾಗ: ಹಿಂದೋಳ**

ಪರಿಕಾರವೇ ಸೊಗಸೋ ಸರಿಗೆ ಸೀರೆ ಸೊಗಸೋ ಪರಮ ಸುಂದರನಿನ್ನ। ಭಾವ ತಿಳಿಸೋ॥ಪ॥ ವೆಂಕಿ ಇಟ್ಟರೆ ಸೊಗಸೊ। ಇಡದೆ ಬಿಟ್ಟರೆ ಸೊಗಸೊ। ನಿನಗೆ ಯಾವುದು ಸೊಗಸೋ। ನೋಡಿ ತಿಳಿಸೋ॥1॥ ಚಂದ್ರಮುರವೇವಾಸಿ। ವಜ್ರಮುರವೇ ವಾಸಿ। ಕೇಳಿದ್ದಕ್ಕುತ್ತರಾ ಹೇಳು ಬೇಗಾ। ಪುನಗು ವಾಸನೆ ಹೆಚ್ಚೋ। ಜವ್ವಾಜಿಯೆ ಹೆಚ್ಚೊ। ಪುರುಷೋತ್ತಮನೆ ನೀನರಿತು ಈಗಾ॥2॥ ತೂಗುಮಂಚವೆ ಶ್ರೇಷ್ಠವೊ ನಾಗಶಯನಾ। ಚಪ್ಪರಮಂಚವೇ ಶ್ರೇಷ್ಠವೋ ಜಲಧಿಶಯನಾ॥3॥ ಸೊಗಸದಾವುದು ಪೇಳೀಗ। ನೀರಜಾಕ್ಷ ಕಾಯೊ ಕರುಣದೊಳೆನ್ನ ಸುಗುಣಧೀರಾ॥4॥

**ಪ್ರೀತಿಯ ಕರೆ ಕೇಳಿ** **ರಾಗ: ಮಾಯಾಮಾಳವಗೌಳ**

ಪ್ರೀತಿಯ ಕರೆ ಕೇಳಿ ಆತ್ಮನ ಮೊರೆಕೇಳಿ ನೀ ಬಂದು ನಿಂದಿಲ್ಲಿ ದೀಪ ಹಚ್ಚಾ। ನಲ್ಲ ನೀ ಬಂದಂದು ಕಣ್ಣಾರೆ ಕಂಡಂದು। ಮನೆಯೆಲ್ಲ ಹೊಳೆವಂತೆ ದೀಪ ಹಚ್ಚಾ॥ಪ॥ ಕರಿಗೆಜ್ಜೆ ಕುಣಿದಿತ್ತು ಕಣ್ಣೀರು ಮಿಡಿದಿತ್ತು। ಇರುಳಾಕೆ ಬಂದಳು ದೀಪ ಹಚ್ಚ। ಬಾನಿನಂಗಳದಲ್ಲಿ ಚುಕ್ಕೆ ಹೊಳೆದೆಸೆವಂತೆ। ನನ್ನ ಮನದಂಗಳದೀ ದೀಪ ಹಚ್ಚ॥1॥ ಹಳೆಬಾಳು ಸತ್ತಿತ್ತು ಕೊಳೆ ಬಾಳು ಕೆಟ್ಟಿತ್ತು। ಹೊಸ ಬಾಳು ಹುಟ್ಟಿತ್ತು ದೀಪ ಹಚ್ಚಾ। ಪ್ರೀತಿಯಾ ರತಿಗೆ ಬೆಳಕಿನಾರತಿ ಬೆಳಗಲು। ಬಂದಾರತೀ ದೀಪ ಹಚ್ಚ॥2॥ ವಿಶ್ವ ಮೋಹಿತ ಚರಣಾ....(2ಸಾರಿ) ವಿವಿಧ ವಿಶ್ವಾಭರಣ। ಆನಂದದಾ ಕಿರಣಾ ದೀಪ ಹಚ್ಚ॥ ನೀನೆಂಬ ಜ್ಯೋತಿಗೆ ನಾನೆಂಬ ಪತಂಗ। ಸೋತು ಉರಿ ಏಳಲೀ ದೀಪ ಹಚ್ಚ। ನನ್ನಂತರಂಗದೀ ನಂದದೇ ಈ ದೀಪ। ನಂದಾದೀಪವಾಗಿರಲಿ ದೀಪ ಹಚ್ಚ॥3॥

**ಬರ ಹೇಳಿ ಕಳುಹಿದಳು** **ರಾಗ:ಹಿಂದೋಳ**

ಬರಹೇಳಿ ಕಳುಹಿದಳು। ಸತ್ಯ ಭಾಮಾಮಣಿಯು ಕರೆದುತಾರೆಂದಳೂ। ಕಮಲ ಜಾಕ್ಷಿ॥ಪ॥ ಅನ್ನಪಾನವ ಬಿಟ್ಟು। ಐದಾರು ದಿನವಾಯ್ತು। ನಿಮ್ಮ ಮೇಲ್ ಮೋಹದಿಂ ನಿದ್ರೆ ಇಲ್ಲ। ನಿಮ್ಮ ಉಂಗುರವಿಟ್ಟು ನಡುವಿಗೆ ಒಡ್ಯಾಣ ನಿಮ್ಮ ಮೇಲ್ ವಿಸ್ತರಿಸಿ। ನಾಯೇನು ಪೇಳ್ವೇ। ವೀಣೆಗಾರನು ನುಡಿಸಲೂ ವಿಜಯನೆಂತಾ। ಪವನುಡಿಸಲೂ। ಗಿಳಿಹಂಸಪಕ್ಷೀ। ಗಿಳಿಯೇರಿ ಬಾರೆಲೋ ಶ್ರೀಕೃಷ್ಣ ನಮ್ಮ ಮನೆಗೆ॥1॥

**ಸಂಜೆ ಬೇಗ ಶ್ಯಾಮ ಬರಲೆಂದು**

ಸಂಜೆ ಬೇಗ ಶ್ಯಾಮ ಬರಲೆಂದು। ರಾಧೆ ಹಂಬಲಿಸುತಿಹಳು। ಸಿಂಗರಿಸಿ ನವ ವಧುವಿನಂತೆ। ಕಾಯುತಿಹಳು ಕಾತುರದಿ॥1॥ ಮಿನುಗುವ ಕಣ್ಣಾಲಿಯಲಿ। ಅವನ ದಾರಿಗೆ ಬೆಳಕ ಚೆಲ್ಲಿ। ಎಡವದೆ ಬೇಗ ಬರಲೆಂದು। ಎವೆಯಿಕ್ಕದೆ

ನೋಡುತಿಹಳು॥2॥ ಉಸಿರಲಿ ಬಯಕೆಗಳ ತುಂಬಿ। ನಲಿಯುತು ಒಲುಮೆಯ ಸೂಸಿ। ಹಾತೊರೆದು ನೋಡುತಿಹಳು। ಗೀತ ಶ್ರೀ ಬೇಗ ಬರುವುದನು॥3॥

**ಹೆರಳು ಶೃಂಗಾರವೋ** **ರಾಗ: ಮಾಯಾಮಾಳಗೌಳ**

ಹೆರಳು ಶೃಂಗಾರವೋ। ತುರುಬು ಶೃಂಗಾರವೋ। ಹೆಚ್ಚು ಯಾವದು ಬೇಗ ಹೇಳು ಈಗಾ॥1॥ ಮುಕುರವೂ ಚೆಂದವೋ। ಮೂಗುತಿಯು ಚೆಂದವೋ। ಮುಖನೋಡಿ ಪೇಳೆಲೋ। ಮೋಹನಾಂಗ ಪಟ್ಟೇಸೀರೆ ಸೊಗಸೊ। ಪತ್ತಲವೆ ಸೋಗಸೊ ಇಷ್ಟವಾದುದು ನಿನಗೆವುಟ್ಟುಕೊಂಬೇ॥2॥ ತಿಲಕ ಇಟ್ಟರೆ ಮುದ್ದೋ। ಕುಂಕುಮವಿಟ್ಟರೆ ಮುದ್ದೋ। ತಿಳಿದು ನೀ ನುಡಿಯಲೋ। ನಳಿನನಾಭ॥3॥ ಎನಗೊಪ್ಪುದ್ಯಾವುದೋ ಯದುಕುಲೇಶಾ। ನಿನಗೆ ಏನಾದುದು ಪೇಳೀ ಗಸುಂದರಾಂಗ॥4॥ ನಿನ್ನ ಮನಸ್ಸಿಗೆ ತಕ್ಕ ಹಾಗೆ ನಡೆದುಕೊಂಬೆ ಇಂದುವದನಾ॥5॥

## ಸ್ತ್ರೀ (ಅ)

**ಆಕಾಶದ ನೀಲಿಯಲಿ** **ರಾಗ: ಶುದ್ಧಧನ್ಯಾಸಿ**

ಆಕಾಶದ ನೀಲಿಯಲಿ ಚಂದ್ರತಾರೆ ತೊಟ್ಟಿಲಲಿ ಬೆಳಕಾನಿತ್ತು ತೂಗಿದಾಕೆ(2ಸಾರಿ)। ನಿನಗೆ ಬೇರೆ ಹೆಸರು ಬೇಕೆ(2ಸಾರಿ)। ಸ್ತ್ರೀ ಎಂದರೆ ಅಷ್ಟೇ ಸಾಕೆ?(2ಸಾರಿ)॥1॥ ಹಸಿರನುಟ್ಟ ಬೆಟ್ಟಗಳಲ್ಲಿ ಮೊಲೆ ಹಾಲಿನ ಹೊಳೆಯ ಹರಿಸಿ। ಬಯಲ ಹತ್ತಿರ ನಗಿಸಿದಾಕೆ(2ಸಾ)। ನಿನಗೆ ಬೇರೆ ಹೆಸರು ಬೇಕೆ(2ಸಾ)। ಸ್ತ್ರೀ ಎಂದರೆ ಅಷ್ಟೇ ಸಾಕೇ(2ಸಾ)॥2॥ ಮನೆ ಮನೆಯಲಿ ದೀಪ ಉರಿಸಿ। ಹೊತ್ತು ಹೊತ್ತಿಗೆ ಅನ್ನ ಉಣಿಸಿ। ತಂದೆ ಮಗುವ ತಟ್ಟಿದಾಕಿ(2ಸಾ)। ನಿನಗೆ ಬೇರೆ ಹೆಸರು ಬೇಕೆ(2ಸಾರಿ)। ಸ್ತ್ರೀ ಎಂದರೆ ಅಷ್ಟೇ ಸಾಕೇ?॥3॥ ಮರಗಿಡ ಹೂ ಮುಂಗುರುಳನ್ನು ತಂಗಾಳಿಯ ಬೆವರು ಸವರಿ ಹಕ್ಕಿ ಗಿಲಕಿ ಹಿಡಿಸಿದಾಕೆ॥ ನಿನಗೆ ಬೇರೆ ಹೆಸರು ಬೇಕೆ ಸ್ತ್ರೀ ಎಂದರಷ್ಟೆ ಸಾಕೆ? ॥4॥

**ಆದದ್ದೆಲ್ಲ ಒಳಿತೇ ಆಯಿತು** **ರಾಗ: ಪಂತುವರಾಳಿ-ಆದಿತಾಳ**

ಆದದ್ದೆಲ್ಲ ಒಳಿತೇ ಆಯಿತು॥ಪ॥ ನಮ್ಮ ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು॥ಅ॥ ದಂಡಿಗೆ ಬೆತ್ತ ಹಿಡಿಯುವುದಕ್ಕೆ। ಮಂಡೆ ಬಾಗಿ ನಾಚುತಲಿದ್ದೆ॥ ಹೆಂಡತಿ ಸಂತತಿ ಸಾವಿರವಾಗಲಿ। ದಂಡಿಗೆ ಬೆತ್ತ ಹಿಡಿಸಿದಳಯ್ಯ॥1॥ ಗೋಪಾಳ ಬುಟ್ಟಿ ಹಿಡಿಯುವುದಕ್ಕೆ। ಭೂಪತಿಯೆಂದು ಗರ್ವಿಸುತಿದ್ದೆ॥ ಆ ಪತ್ನೀಕುಲ ಸಾವಿರವಾಗಲಿ। ಗೋಪಾಳ ಬುಟ್ಟಿ ಹಿಡಿಸಿದಳಯ್ಯ॥2॥ ತುಳಸೀ ಮಾಲೆ ಹಾಕುವುದಕ್ಕೆ। ಅರಸನೆಂದು ತಿರುಗುತಲಿದ್ದೆ॥ ಸರಸಿಜಾಕ್ಷ ಪುರಂದರವಿಠಲನು। ತುಳಸೀಮಾಲೆ ಹಾಕಿಸಿದನು॥3॥

**ಇಳಿದು ಬಾ ತಾಯಿ (ಗಂಗಾವತರಣ)**

ಇಳಿದು ಬಾ ತಾಯಿ ಇಳಿದು ಬಾ॥2 ಸಾರಿ॥ ಹರನ ಜಡೆಯಿಂದ। ಹರಿಯ ಅಡಿಯಿಂದ। ಋಷಿಯ ತೊಡೆಯಿಂದ ನುಸುಳಿ ಬಾ। ದೇವದೇವರನು ತಣಿಸಿ ಬಾ। ದಿಗ್ ದಿಗಂತದಲಿ ಹಣಿಸಿ ಬಾ। ಚರಾಚರಗಳಿಗೆ ಉಣಿಸಿ ಬಾ॥1॥ ನಿನಗೆ ಪೊಡಮಡುವೆ। ನಿನ್ನನುಡುತೊಡುವೆ। ಏಕೆ ಎಡೆ ತಡಿವೇ ಸುರಿದು ಬಾ। ಸ್ವರ್ಗತೊರೆದು ಬಾ। ಬಯಲ ಜರೆದು ಬಾ। ನೆಲದಿ ಹರಿದು ಬಾ। ಬಾರೆ ಬಾ ತಾಯೇ ಇಳಿದು ಬಾ॥2॥ ನನ್ನ ತಲೆಯೊಳಗೆ। ನನ್ನ ಬೆಂಬಳಿಗೆ। ನನ್ನ ಒಳಕೆಳಗೆ। ನುಗ್ಗಿ ಬಾ। ಕಣ್ಣ ಕಣ ತೊಳಿಸಿ। ಉಸಿರ ಎಳೆ ಎಳಸಿ। ನುಡಿದ ಸಸಿ ಮೊಳೆಸಿ। ಹಿಗ್ಗಿ ಬಾ। ಎದೆಯ ನೆಲೆಯಲ್ಲಿ ನೆಲಿಸಿ ಬಾ। ಜೀವ ಜಲದಲ್ಲಿ ಚಲಿಸಿ ಬಾ। ಮೂಲ ಹೊಲದಲ್ಲಿ ನೆಲೆಸಿ ಬಾ॥3॥ ಕಂಚು ಮಿಂಚಾಗಿ ತೆರಳಿ ಬಾ। ನೀರುನೀರಾಗಿ ಉರುಳಿ ಬಾ। ಮತ್ತೆ ಹೊಡೆ ಮರಳಿ ಹೊರಳಿ ಬಾ। ದಯೆಯಿರದ ದೀನ। ಹರೆಯಳಿದ ಹೀನ। ನೀರಿರದ ಮೀನ। ಕರೆಕರೆವೆ ಬಾ॥4॥ ಕರು ಕಂಡ ಕರುಳೆ। ಮನ ಉಂಡ ಮರುಳೆ। ಉದ್ದಂಡ ಅರುಳೆ। ಸುಳಿಸುಳಿದು

ಬಾ। ಶಿವ ಶುಭ್ರ ಕರುಣೆ। ಅತಿ ಕಿಂಚಿದರುಣೆ ವಾತ್ಸಲ್ಯವರುಣೆ। ಇಳಿ ಇಳಿದು ಬಾ।।5।। ಕೊಳೆಯ ತೊಳೆಯುವರು ಇಲ್ಲ ಬಾ। ಬೇರೆ ಶಕ್ತಿಗಳ ಹೊಲ್ಲ ಬಾ। ಹೀಗೆ ಮಾಡದಿರು ಅಲ್ಲ ಬಾ ನಾಡಿನಾಡಿಯನು ತುತ್ತ ಬಾ। ನಮ್ಮ ನಾಡನ್ನೆ ಸುತ್ತ ಬಾ। ಸತ್ತ ಜನರನ್ನು ಎತ್ತ ಬಾ।।6।। ಸುರಸ್ವಪ್ನದಿದ್ದ ಪ್ರತಿಬಿಂಬ ಬಿದ್ದ। ಉದ್ಬುದ್ಧ ಶುದ್ಧ ನೀರೇ। ಎಚ್ಚೆತ್ತು ಎದ್ದ ಆಕಾಶದುದ್ದ। ಧರೆಗಿಳಿಯಲಿದ್ದ ಧೀರೇ। ಸಿರಿಪಾರಿಜಾತ ವರ ಪಾರಿಜಾತ। ತಾರಾಕುಸುಮದಿಂದೆ।।7।। ವೃಂದಾರವಂದ್ಯೆ ಮಂದಾರ ಗಂಧೆ। ನೀನೇ ತಾಯಿ ತಂದೆ। ರಸ ಪೂರ ಜನ್ಯೆ ನೀನಲ್ಲ ಅನ್ಯೆ। ಸಚ್ಚಿದಾನಂದ ಕನ್ಯೆ।।8।। ಬಂದಾರೆ ಬಾರೆ। ಒಂದಾರೆ ಸಾರೆ। ಕಣ್‌ಧಾರೆ ತಡೆವರೇನೆ। ಅವತಾರವೆಂದೇ। ಎಂದಾರೇ ತಾಯಿ ಈ ಅಧಃಪಾತವನ್ನೇ।।9।। ಹರಕೆ ಸಂದಂತೆ। ಮಮತೆ ಮಿಂದಂತೆ। ತುಂಬಿಬಂದಂತೆ। ದುಮ್ ದುಮ್ ಎಂದಂತೆ। ದುಮುಕಿ ಬಾ। ನಿನ್ನ ಕಂದನ್ನ ಹುಡುಕಿ ಬಾ। ಹುಡುಕಿ ಬಾ ತಾಯಿ। ಒಡುಕಿ ಬಾ।।10।। ಹರಣ ಹೊಸದಾಗೆ ಹೊಳೆದು ಬಾ। ಬಾಳುಬೆಳಕಾಗೆ ಬೆಳೆದು ಬಾ। ಕೈತೊಳೆದು ಬಾ। ಮೈ ತಳೆದು ಬಾ। ಇಳೆಗಿಳಿದು ಬಾ ತಾಯಿ ।।11।। ಶಂಭು ಶಿವ ಹರನ ಚಿತ್ತೆ ಬಾ। ದತ್ತ ನರಹರಿಯ ಮುತ್ತೆ ಬಾ।। ಅಂಬಿಕಾತನಯನತ್ತೆ ಬಾ ಇಳಿದು ಬಾ ತಾಯಿ ಇಳಿದು ಬಾ ।।12।।

## ಎಲ್ಲೋ ಹುಟ್ಟಿ ಎಲ್ಲೋ ಬೆಳೆದು (ನದಿ-ಕಾವೇರಿ)

ಎಲ್ಲೋ ಹುಟ್ಟಿ ಎಲ್ಲೋ ಬೆಳೆದು ಎಲ್ಲೋ ಸೇರುವಾ ಕನ್ಯೆ। ಜೀವಿತದಾ ಧನ್ಯತೆಯಾ ಕಂಡುಕೊಳ್ಳುವಾ ಮಾನ್ಯೆ। ಕಾವೇರಿಯ ಹುಟ್ಟು ಕೊಡಗನಾಡ ಬ್ರಹ್ಮಗಿರಿ। ಪೌರಾಣಿಕ ಇತಿಹಾಸದಿ ಪುಟವಿಟ್ಟ ನವಿಲುಗರಿ।। ಕೊಡಗನಾಡ ಪ್ರಕೃತಿಯಾ ಸುಂದರ ಸೋಪಾನದಲ್ಲಿ। ಬ್ರಹ್ಮಗಿರಿಯ ಕುಂಡಿಕೆಯ ಅತಿ ಚೆಲುವಿನ ತಾಣದಲ್ಲಿ। ಹುಟ್ಟಿ ಹರಿದ ಕಾವೇರಿ ಮರೆಯಾದಳು ಎಲ್ಲೋ ಅಲ್ಲಿ। ಅವಳ ಹರಿವ ನಡೆವ ಜಾಡ ಕಾವೇರಿಯ ದಾರಿಯು। ದಕ್ಷಿಣದ ಪ್ರಯಾಗವದು ಕ್ಷೇತ್ರ ಭಾಗಮಂಡಲ। ಕನ್ಯಕ ಸುಜ್ಯೋತಿಯರು ಸೇರಿ ಹರಿಯೆ ಮಂಗಳ। ರಘುವಂಶದ ಹರಿಶ್ಚಂದ್ರ ಯಾಗ ಮಾಡಿದಾ ಸ್ಥಳವು। ಶಿವಾಲಯದಿ ಕಂಗೊಳಿಪ ಕಾವೇರಿಯ ಹರವು।। ಸಾಗಿ ಸಾಗಿ ಧುಮುಕಿ ಹರಿದು ಬಂದಳದೋ ಕಾವೇರಿ। ಹಲವು ಬಗೆಯ ಹಕ್ಕಿಗಳಿಗೆ ಧಾಮ ಸ್ವರ್ಗದೈಸಿರಿ। ಪಶ್ಚಿಮಕೆ ತಿರುಗಿ ಸಾಗಿ ಪಟ್ಟಣಕೇ ಧಾವಿಸಿ। ಆದಿ ರಂಗನ ಪಾದಪದ್ಮ ತೊಳೆದಳದೋ ಸೇವಿಸಿ। ಕರಿಘಟ್ಟದ ತಪ್ಪಲಲ್ಲಿ ಶ್ರೀಲೋಕಪಾವನಿ। ಸಂಗಮಿಸಿ ನಡೆದರದೋ ತಿರುಮಹಾಕೂಡಲಿಗೆ। ಕಾವೇರಿಯು ಕಪಿಲೆಯು ಸ್ಪಟಿಕ ಸರೋವರವೂ। ಸೇರಿ ಕೈ ಹಿಡಿದುದೇ ತ್ರಿವೇಣಿ ಸಂಗಮವು।। ಆಡಿ ಹಾಡಿ ಹರಿದು ನಲಿದು ಬೆಳೆದವಳದೋ ಕಾವೇರಿ। ಯೌವನದಾ ಕಾವೇರಿ ಜವ್ವನಿಕೆಯ ಸೊಕ್ಕೇರಿ। ಹಾರಿ ಹಾರಿ ಧುಮುಕಿ ಧುಮುಕಿ ಶಿವನಾಸಮುದ್ರದಲ್ಲಿ। ಮಿಂಚಾದಳು ಕಣ್ಣಾದಳು ಕನ್ನಡಿಗರ ಮನದಲ್ಲಿ ಗಗನಚುಕ್ಕಿ ಭರಚುಕ್ಕಿ ಏನು ಹೆಸರು ಇವಳಿಗೆ।। ಮಧ್ಯರಂಗನನ್ನು ಇವಳು ಬಿಡಲಾರಳು ಅರೆಗಳಿಗೆ। ಸಾಗಿಬಂದು ಸಂಗಮದಿ ಅರ್ಕಾವತಿ ಒಡಗೂಡಿ। ಇವಳ ಅಂದ ಚೆಂದ ಕಂಡುಬಂದುದಿಲ್ಲಿ ನೂರ್ಮಡಿ।। ಮೇಕೆದಾಟುಎಂಬಲ್ಲಿ ಕಂಡಿರಾ ಇವಳ ಲಾಸ್ಯ। ಅಲ್ಲಲ್ಲಿ ಪ್ರಶಾಂತ ನಡುನಡುವೆ ಆರ್ಭಟ। ಸಿರಿ ಪ್ರಕೃತಿಯ ಶಿಲಾಗಾರ ಜಲಕಡೆದ ಕಮ್ಮಟ। ಬಂಡೆಕಲ್ಲಿನಲ್ಲಿ ಕೊರೆದ ಕರ್ನಾಟಕ ಬಾವುಟ।। ಹೊರಟಳದೋ ಕಾವೇರಿ ನೆರೆರಾಜ್ಯದ ಭೂಮಿಗೆ। ನವವಧುವು ಹೊರಟಂತೆ ಅತ್ತೆಮಾವನ ಮನೆಗೆ। ಗೌಣ ಗಂಭೀರವೆಲ್ಲಾಸ್ವಲ್ಪ ದೂರ ಅಷ್ಟೇ ಮೆಲ್ಲ। ಹಾರಿ ಜಿಗಿದು ಬಂದಳದೋ ತುಂಬಿ ಹೊಗೇನಕಲ್ಲ।। ಅಂತ್ಯರಂಗ ಶ್ರೀರಂಗಳು ದಿವ್ಯ ದೇಶಗಳಲ್ಲೊಂದು। ಕಾವೇರಿಯು ಬಿಡಲಾರಳು ರಂಗನಾಥನಾ ಎಂದೂ। ಮಣವಾಳರು ಆಚಾರ್ಯರು ಆಳ್ವಾರರು ಸ್ತುತಿಸಿದಾ। ಸಪ್ತಪ್ರಕಾರದಲ್ಲಿ ಶಯನೋತ್ಸವ ಸ್ವಾಮಿಯಾ।। ಧರ್ಮಾಪುರ ಛಾಯಾವನಂ ಎಲ್ಲಸುತ್ತಿ ಬಂದಳು। ಕರ್ಮಸವೆಸಲೆಂದು ಬಂದ ಜನುಮನದಿ ನಿಂದಳು। ಪ್ರತಿಯೊಂದಕು ಮಿತಿಯುಂಟು। ಮಿತಿಯಿಲ್ಲವೆ ಅವಳಿಗೆ। ಸುತ್ತಿ ಸುತ್ತಿ ದಣಿದು ನಿಂದು ಪೂಂಪುಹಾರ್ ಗೆ ಬಂದಳು।। ದಕ್ಷಿಣದಾ ಗಂಗೆಯೂ ಪೊನ್ನಿಯೂ ಅವಳಾದಳು। ತುರುಕರುವಿಗೂ ಜಲಚರಕೂ ಆಧಾರವೆ ತಾನಾದಳು। ತೆಂಕಣದ ಅಂಗಳಕೆ ರಂಗೋಲಿಯನೆಳೆದಂತೆ। ಹೊನ್ನಮಳೆ ಕರೆಯುತಲಿ ಪೈರು ಪಚ್ಚೆಯನಿತ್ತು। ಕರ್ಮಯೋಗಿಗಳಿಗೆ ದೈವ ನೀಡುವಂತೆ ಆಶ್ರಯ। ಶರಧಿ ನೀಡಿದಾಶ್ರಯ ಕಾವೇರಿಯು ಶರಣಾದಳು। ಕರುನಾಡಿನಾ ಮಾನ್ಯೆ ಕರ್ಮಜೀವಿ ಧನ್ಯೆ।।

**ಒಂದು ದಿನ ಕೌಶಿಕನು** **ರಾಗ:ಆನಂದಭೈರವಿ**

ಒಂದು ದಿನ ಕೌಶಿಕನು ಮಹದೇವಿಯಯನ್ನು ಕಂಡ। ಕಂಡವನು ಅವಳನ್ನು ಮೆಚ್ಚಿಕೊಂಡ.....। ಎಂಥ ಚೆಲುವಿನ ಹೆಣ್ಣು ಎಂಥ ಚೆಲುವಿನ ಕಣ್ಣು। ನಾಗವೇಣಿಯು ಇವಳು ರಸಭರಿತ ಹಣ್ಣು।।1।। ದೇವಲೋಕದ ರತಿಯು ಭುವಿಗಿಳಿದು ಬಂದವಳೆ ಸುರರ ಅಪ್ಸರೆ ಬಂದು ತನಗಾಗಿ ನಿಂದಳೆ....?। ಯಾರಾದರೇನಂತೆ ತಾನೊಲಿದ ಮೇಲೆ। ರಾಜನಲ್ಲದೆ ತಾನು ಈ ಭುವಿಯ ಮೇಲೆ।। 2।। ನನ್ನೊಲುಮೆಯ ಹೆಣ್ಣೆ ನಿನಗೊಲಿದೆ ನಾನು। ನನ್ನ ಕೈ ಹಿಡಿದೆನ್ನ ಉದ್ಧರಿಸು ನೀನು। ಧನಕನಕ ಐಶ್ವರ್ಯ ಸಕಲವನು ಕೊಡುವೆ। ನಾನು ನಿನ್ನಯ ದಾಸ ಈ ಜೀವ ಕೊಡುವೆ।।3।। ಶಿವಭಕ್ತೆ ಮಹದೇವಿ ಶಿವನನ್ನು ನಂಬಿ। ತನ್ನ ಮನದಲ್ಲೆಲ್ಲ ಶಿವನನ್ನು ತುಂಬಿ। ಶಿವ ಶಿವಾ ಎನ್ನುತಲಿ ಬೆಳೆದವಳು ಅವಳು। ಶಿವನ ಸೇರುವ ದಿನದ ಕಾದವಳು ಅವಳು।।4।। ನಾ ಶಿವನ ಮೆಚ್ಚಿರುವೆ ನಾನವನ ಸೊತ್ತು। ಎಂದೆಂದು ನಾನಿನಗೆ ಸಿಗದ ತುತ್ತು। ಜಗದಲಿ ಹೆಣ್ಣಿಗೆ ಕೊರತೆಯೇ ದೊರೆಯೇ? ಆದರಲ್ಲು ನಿನ್ನಂಥ ದೊರೆಯು ಕರೆಯೆ....।।5।। ಕಲ್ಲು ಶಿವನನ್ನೇಕೆ ಮೆಚ್ಚಿರುವೆ ಹುಚ್ಚಿ? ಅವನು ಬರುವೆನೆ ಹೇಳು ನಿನ್ನ ನೆಚ್ಚಿ?। ಸುಂದರಿಯು ನೀನೆಂದು ಹೇಳುತಿರುವೆ। ಬೂದಿ ಬಡುಕನ ಜೊತೆಗೆ ಹೇಗೆ ಇರುವೆ?।।6।। ಕರುಣಾಕರ ಶಿವನು ಕಲ್ಲಲ್ಲ ತಿಳಿಯೋ। ಕರೆದರಲ್ಲಿ ಬರುವವನು ಶಿವನು ತಿಳಿಯೋ। ರಾಗ ಭೋಗಗಳಲ್ಲಿ ನಂಬಿಕೆಯು ನನಗಿಲ್ಲ। ಶಿವಗಾಗಿ ಕಾಯುವೆನು ನನ್ನ ಬದುಕೆಲ್ಲ।।7।। ವೈರಾಗ್ಯದಲಿ ಪೂರ್ಣ ಲೀನವಾದಳು ಅಕ್ಕ। ತಾನುಟ್ಟ ಬಟ್ಟೆಯನು ಬಿಚ್ಚಿದಳು ಅಕ್ಕ। ಮನೆಯ ಬಿಟ್ಟಳು ಅಕ್ಕ ಮದವ ಬಿಟ್ಟಳು ಅಕ್ಕ। ಎಲ್ಲವನು ಬಿಟ್ಟಳು ಮಹದೇವಿ ಅಕ್ಕ।।8।। ಹುಟ್ಟುತ ತೊಟ್ಟುಬರಲಿಲ್ಲ ಬಟ್ಟೆ। ಸಾಯುತ್ತ ತೊಟ್ಟು ಹೋಗುವರೆ ಬಟ್ಟೆ?। ಹುಟ್ಟು ಸಾವಿನ ನುಡುವೆ ನಡೆವ ನಾಟಕದಲ್ಲಿ। ತರತರದ ವೇಷಗಳ ತೊಡುವರಿಲ್ಲಿ।।9।। ಶಿವಧ್ಯಾನದಲ್ಲಿ ಅಕ್ಕ ತನ್ನನ್ನು ಮರೆತಳು। ನಿಷ್ಠೆಯಲಿ ಶಿವನನ್ನು ಪೂಜಿಸಿದಳು। ನಿರ್ವಾಣದಲಿ ಅಕ್ಕ ಚಳಿಮಳೆಯ ಲೆಕ್ಕಿಸದೆ। ಸಹನೆಯಲಿ ಶಿವಗಾಗಿ ತಾ ಕಾದಳು।।10।। ವೈರಾಗ್ಯದಲಿ ಅಕ್ಕ ಶಿವನನ್ನು ಮೀರಿದಳು। ಭಕ್ತಿಯಲಿ ಶಿವನನ್ನು ತಾ ಗೆದ್ದಳು। ಶಿವಸಾನಿಧ್ಯವನ್ನು ಸೇರಿ ಅಕ್ಕನ ಬದುಕು। ಲೋಕದಲಿ ಶಿವಭಕ್ತೆ ಕಂಡ ಬೆಳಕು।।11।।

**ಕಣ್ಣಿನ್ ಮಣಿ2 ನಿಜಂ ಕೇಳಮ್ಮ (ತಮಿಳು)** **ರಾಗ:ಸಿಂಧುಭೈರವಿ**

ಕಣ್ಣಿನ್ ಮಣಿ ಕಣ್ಣಿನ್ ಮಣಿ ನಿಜಂ ಕೇಳಮ್ಮ। ಗಂಗೈನದಿ ವೈಗೈನದಿ ಪೆಣ್ ತಾನಮ್ಮ। ಮಲೈನದಿ ಎನ್ಬದು ಮುಳ್ಳಿಲ್ ಕಲ್ಲಿಲ್ ಮೋದಿವರುಂ। ಪೆಣ್‌ನದಿ ಎನ್ಬದು ತುನ್ಬಂ ತುಯರುಂ ತಾಂಡಿವರುಂ। ವಲಪಕ್ಕಂ ಒರುಕರೈ ಇಡಪಕ್ಕಂ ಒರುಕರೈ। ನದಿಗಳಿಲ್ ನಡುವಿಲ್ ಓಡಿವರುಂ। ತ್ಯಾಗತ್ತಿಲ್ ಒರುಕರೈ ಸೀತೆಯಿಲ್ ಒರುಕರೈ। ಪೆಣ್‌ನದಿ ನಡುವಿಲ್ ಪಾಂಡಿವರುಂ। ನದಿಯಿನ್ ಪಯಣಂಉಯರ್‌ವುಳ್ಳ ವರೆಯಿಲ್। ಪೆಣ್ಣಿನ್ ಪಯಣಂ ಉಯಿರುಳ್ಳ ವರೆಯಿಲ್। ನದಿಯಿನ್ ತುಣೈತಾನ್ ವಯಲ್‌ಗಳಿಲ್ ಪಸಿಮೈ। ಪೆಣ್ಣಿನ್ ಕೊಡೈದಾನ್ ವಾಳ್ವಿನ್ ಇನಿಮೈ। ನದಿಕರೈ ತಾಂಡಿವಿಟ್ಟ ಕಾಡುಂ ಕರೈ ಕೊಳ್ಳಾದು। ಪೆಣ್ಣುಂ ಪಡಿ ತಾಂಡಿವಿಟ್ಟ ನಾಡುಂ ವೀಡುಂ ತಾಂಗಾದು। ನದಿಗಳುಂ ಪೆಣ್‌ಗಳುಂ ಇಯರ್‌ಕೆಯಿಲ್ ಸಮಂತಾನೆ।।

**ಕಣ್ಮಣಿಯೇ2 ನಿಜಕೇಳಮ್ಮ (ಹಿಂದಿನ ಕೃತಿಯ ಕನ್ನಡ ಭಾವಾನುವಾದ)** **ರಾಗ: ಸಿಂಧುಭೈರವಿ**

ಕಣ್ಮಣಿಯೇ ಕಣ್ಮಣಿಯೇ। ನಿಜ ಕೇಳಮ್ಮ ಗಂಗೆ ನದಿ ತುಂಗೆನದಿ ಹೆಣ್ಣಲ್ಲವೇ। ನದಗಳೆಂಬುದು ಮುಳ್ಳು ಕಲ್ಲಲಿ ದಾಟುವುದು। ಹೆಣ್ ನದಿ ಎಂಬುದು ಕಷ್ಟ ಸುಖಗಳ ದಾಟುವುದು। ಬಲದಲ್ಲಿ ಒಂದು ದಡ ಎಡದಲ್ಲಿ ಒಂದು ದಡ ನದಿಗಳು ಮಧ್ಯದಲಿ ಓಡುವುದು। ತ್ಯಾಗಕ್ಕೆ ಒಂದು ದಡ ಸಹನೆಗೆ ಒಂದುದಡ ಹೆಣ್‌ನದಿ ಮಧ್ಯದಿ ಹಾಡುವುದು। ನದಿಯ ಪಯಣ ಚೈತನ್ಯವಿರುವವರೆಗೆ। ಹೆಣ್ಣಿನ ಪಯಣ ಜೀವವಿರುವವರೆಗೆ। ನದಿಯ ಜೊತೆಯೇ ಬಯಲಿಗೆ ಹಸಿರು। ಹೆಣ್ಣಿನ ಸಂಗವೇ ಜೀವನ ಕೊಡುಗೆ। ನದಿದಡ ದಾಟಿದರೆ ಕಾಡು ದಡವು ತಡೆಯದು। ಹೆಣ್ಣು ಹೊಸಿಲು ದಾಟಿದರೆ ನಾಡು ಮನೆಯು ತಡೆಯದು। ನದಿಗಳು ಹೆಣ್ಣಳು ಪ್ರಕೃತಿಯಲ್ಲಿ ಸಮತಾನೆ?।।

## ಕನ್ನಡ ನಾಡಿನ ವೀರ ರಮಣಿಯಾ (ಚರಿತ್ರೆ)

ಕನ್ನಡ ನಾಡಿನ ವೀರ ರಮಣಿಯಾ। ಗಂಡು ಭೂಮಿಯ ವೀರನಾರಿಯ। ಚರಿತೆಯ ನಾನು ಹಾಡುವೆ।।ಪ।। ಚಿತ್ರದುರ್ಗದ ಕಲ್ಲಿನ ಕೋಟೆ। ಸಿಡಿಲಿಗೂ ಬೆಚ್ಚದ ಉಕ್ಕಿನ ಕೋಟೆ। ಮದಿಸಿದ ಕರಿಯ ಮದವಡಗಿಸಿದ। ಮದಕರಿನಾಯಕರಾಳಿದ ಕೋಟೆ। ಪುಣ್ಯ ಭೂಮಿಯು ಈ ಬೀಡು ಸಿದ್ಧರು ಹರಸಿದ ಸಿರಿನಾಡು।।1।। ವೀರ ಮದಕರಿ ಆಳುತಲಿರಲು। ಹೈದರಾಲಿಯು ಯುದ್ಧಕೆ ಬರಲು। ಕೋಟೆ ಜನಗಳ ರಕ್ಷಿಸುತಿರಲು। ಸತತ ಧಾಳಿಯು ವ್ಯರ್ಥವಾಗಲು। ವೈರಿಚಿಂತೆಯಲಿ ಬಸವಳಿದ। ದಾರಿಕಾಣದೆ ಮಂಕಾದ।।2।। ಗೂಢಚಾರರು ಅಲೆದು ಬಂದರು। ಹೈದರಾಲಿಗೆ ವಿಷಯ ತಂದರು। ಚಿತ್ರದುರ್ಗದ ಕೋಟೆಯಲ್ಲಿ ವಾಯುವ್ಯ ದಿಕ್ಕಿಗೆ ನೋಡು ಎಂದರು। ಕಳ್ಳ ಗಿಂಡಿಯ ತೋರಿದರು। ಲಗ್ಗೆ ಹತ್ತಲು ಹೇಳಿದರು।।3।। ಸುತ್ತಮುತ್ತಲು ಕಪ್ಪು ಕತ್ತಲೆಯೆ ಮುತ್ತಿರಲು। ವೀರ ಕಾವಲುಗಾರ ಭೋಜನಕೆ ನಡೆದಿರಲು ಸಿಹಿನೀರ ತರಲೆಂದು ಅವನ ಸತಿಯು ಬಂದಿರಲು। ಕಳ್ಳಗಿಂಡಿಯ ಹಿಂದೆ ಪಿಸುಮಾತ ಕೇಳಿದಳು। ಆಲಿಸಿದಳು। ಇಣುಕಿದಳು। ವೈರಿ ಪಡೆ ಕೋಟೆಯತ್ತ ಬರುವುದನ್ನು ಕಂಡಳು।। ಕೈಗೆ ಸಿಕ್ಕಿದ ಒನಕೆ ಹಿಡಿದಳು। ವೀರ ಗಚ್ಚೆಯ ಹಾಕಿನಿಂದಳು। ದುರ್ಗಿಯನ್ನು ಮನದಲ್ಲೆ ನೆನೆದಳು। ಕಾಳಿಯಂತೆ ಬಲಿಗಾಗಿ ಕಾದಳು। ಯಾರವಳು ? ಯಾರವಳು ? ವೀರ ವನಿತೆ ಆ ಓಬವ್ವ ದುರ್ಗವು ಮರೆಯದ ಓಬವ್ವ।।4।। ತೆವಳುತ ಒಳಗೆ ಬರುತಿರೆ ವೈರಿ। ಒನಕೆಯ ಬೀಸಿ ಕೊಂದಳುನಾರಿ। ಸತ್ತವನನ್ನು ಎಳೆದು ಹಾಕುತ। ಮತ್ತೆ ನಿಂತಳು ಹಲ್ಲು ಮಸೆಯುತ। ವೈರಿರುಂಡ ಚೆಂಡಾಡಿದಳು। ರಕುತದ ಕೋಡಿ ಹರಿಸಿದಳು।।5।। ಸತಿಯ ಹುಡುಕುತ ಕಾವಲಿನವನು ಗುಪ್ತದ್ವಾರದ ಬಳಿಗೆ ಬಂದನು। ಮಾತುಹೊರಡದೆ ಬೆಚ್ಚಿನಿಂತನು। ಹೆಣದ ರಾಶಿಯ ಬಳಿಗೆ ಬಂದನು। ರಣಚಂಡಿ ಅವತಾರವನು ಕೋಟೆ ಸಲಹಿದ ತಾಯಿಯನು।।6।। ರಣಕಹಳೆಯನು ಊದುತಲಿರಲು। ಸಾಗರದಂತೆ ಸೈನ್ಯ ನುಗ್ಗಲು। ವೈರಿಪಡೆಯು ನಿಶ್ಶೇಷವಾಗಲು। ಕಾಳಗದಲಿ ಜಯವನು ತರಲು-ಅಮರಳಾದಳು ಓಬವ್ವ ಚಿತ್ರದುರ್ಗದ ಓಬವ್ವ।।7।।

## ಕಾವೇರಿ ಕಪಿಲಾ ಸಹೋದರಿ — ರಾಗ: ಶ್ರೀ

ಕಾವೇರಿ ಕಪಿಲಾ ಸಹೋದರಿ ಕಾವೇರಿ। ಶರಧಿ ಸಮಾನೆ ಶರಣವಿತಾನೆ ನಿರತಸುಮ್ಮಾನೆ ಪೊರೆ ಎನ್ನ ನೀನೆ।।ಪ।। ಜಲನಿಧಿಗಾಮಿನಿ ಸುಲಲಿತವಾಹಿನಿ ಜಲಜನಾಭ ಮೋಹಿನಿ ಸಲಹೋ ಜನನಿ।।1।। ದಕ್ಷಿಣ ಗಂಗೆ ಪಕ್ಷಿವಾಹನಸಂಗೆ ಅಕ್ಷಿಜಿತ ಸಾರಂಗೆ ರಕ್ಷಿಸು ಭವಗಂಗೆ।।2।। ದಹಿಸುತೆ ಪಾಪವ ಮಹೋಜನ ಜಾಲವ ನಿರುತದಿ ಸಲಹುವ ಮಹಿಮಾಮನ।।3।।

## ಕಿತ್ತೂರ ದೊರೆಸಾನಿ — ರಾಗ: ಶುದ್ಧಧನ್ಯಾಸಿ

ಕಿತ್ತೂರ ದೊರೆಸಾನಿ ಕಾಕತಿಯ ದೇಸಾಯ್ತಿ। ಮಲ್ಲಸರ್ಜ ದೊರೆಯ ಎದೆಯೊಡತಿ। (ಕೋಲುಕೋಲಾ ಕೋಲನ್ನಕೋಲಾ) ।।ಪ।। ಭರತ ಭೂಮಿಯ ಒಳಗ ಕನ್ನಡದ ನೆಲದೊಳಗ। ಸ್ವಾತಂತ್ರ್ಯದ ಕಿಡಿ ಹೊತ್ತಿತ ಮೊದಲ ಕಿತ್ತೂರೊಳಗ। ಅತ್ತಿ ಹಣ್ಣಿನ ಒಳಗ ಹುಳಬಾಳ ಇರುವಾಂಗ। ಕುಲ ಘಾತಕರಿದ್ದರಲ್ಲಿ ಊರಕಿತ್ತೂರಾಗ।।1।। ಶಿವಲಿಂಗ ರುದ್ರಸರ್ಜ ಸತ್ತಾನೆಂಬುವ ಸುದ್ದಿ। ಸದ್ದಿಲ್ಲದೆ ಹತ್ತಿತ್ತೂ ಥ್ಯಾಕರೆ ಸಾಹೇಬಾಗೆ। ಕುಲಘಾತಕ ಕುನ್ನೂರು ಮಲ್ಲಪ್ಪಶೆಟ್ಟಿ ಆ ವ್ಯಕ್ತಿ ಖೊಟ್ಟಿ। ಕುಣಿಕುಣಿದು ಹೇಳ್ಯಾನ ಸಂಚೀನ ಗುಟ್ಟಾ ಥ್ಯಾಕರಿಗೆ।।2।। ಥ್ಯಾಕರೆ ಸಾಹೇಬ ಬರೆದ ಪತ್ತರ ಕಿತ್ತೂರಿಗೆ। ಕುಡಿಶ್ಯಾಳಾರಾಣಿ ಹತ್ತಿರದ ಸುದ್ದಿ ತಿಳಿದು ದರಬಾರ। ಕಿತ್ತೂರು ನಮ್ಮದು ನೀವ್ ನಮ್ಮ ಸ್ವಾಧೀನ।। ಎಂಬುವ ನುಡಿಕೇಳಿ ಆದಳೋ ರಾಣಿ ಕೆರಳಿದ ಸಿಂಹಿಣಿ।।3।। ನಾಡೆಲ್ಲಾ ಹೊತ್ತೆದ್ದಿತು ಕಾಡ್ಗಿಚ್ಚಿನ್ಹಾಂಗ। ನಾಡಭಿಮಾನ ಹೆಡೆಯೆತ್ತಿತ್ತು ಹಾವಿನ್ಹಾಂಗ। ಗಂಡುಗಚ್ಚೆಯ ಹಾಕಿ ಏರ್‍ಯಾಳ ಕುದುರಿ ಕೈಯಾಗೆ ಕತ್ತಿ। ಚಂಡಿ ಚಾಮುಂಡಿ ಮಹಿಷಾಸುರ ಮರ್ದಿನಿ ಅವತಾರ।।4।। ಕಾಳ ಮೇಘಗಳು ಆರ್ಭಟಿಸಿ ಅರಚಿದ್ಹಾಂಗ। ಗುಂಡಿನ ಮಳೆ ಸುರಿಯಿತು

ಗುಡುಗುಸಿಡಿಲಿನ್ಹಾಂಗ। ಕಿತ್ತೂರು ಕೇಸರಿಯ ಕತ್ತಿಯ ಹೊಡೆತಕ್ಕೆ। ಥ್ಯಾಕರೆಯ ಕುತ್ತಿಗೆ ಕಿತ್ತು ಹೋತ ಬೇರು ಸಹಿತ॥5॥ ಥ್ಯಾಕರೆಸತ್ತ ಸುದ್ದಿ ಕೇಳಿ, ಅಂಗ್ರೇಜರ ಎದೆ ಬಡಿತ। ನಿಂತು ಹೋತ ದಿಂಞ ಮೂಡ ಕಾರ್ಗತ್ತಲ॥6॥

**ಕಿತ್ತೂರು ರಾಣಿಯು ಚೆನ್ನಮ್ಮಾ** **ರಾಗ: ಲಾವಣಿ**

ಕಿತ್ತೂರು ರಾಣಿಯು ಚೆನ್ನಮ್ಮಾ। ಕರುನಾಡಿನ ಸಿಂಹಿಣಿ ನೀನಮ್ಮಾ। ಕನ್ನಡನಾಡಿನ ರಕ್ಷಣೆಗಾಗಿ। ದೇಹವ ನೀಗಿದೆ ನೀನಮ್ಮಾ॥ಪ॥ ಅಂಜದೆ ಅಳುಕದೆ ವೈರಿಗೆ ಬಾಗದೆ। ಸ್ವಾತಂತ್ರ್ಯ ಕಹಳೆಯ ಮೊಳಗಿಸಿದೆ। ಧೂರ್ತ ಆಂಗ್ಲರ ದರ್ಪವ ಮುರಿದು। ಸೈನ್ಯವ ದಿಕ್ಕೆಟ್ಟೋಡಿಸಿದೆ॥1॥ ಕತ್ತಿಯ ಬೀಸುತ ವೈರಿಯ ತರಿಯುತ। ನೆತ್ತರ ಕಾಲುವೆ ಹರಿಯಿಸಿದೆ। ಉತ್ತಮ ಶೌರ್ಯ ಪರಾಕ್ರಮ ತೋರಿದೆ। ಕಿತ್ತೂರಿಗೆ ನೀ ಬೆಳಕಾದೆ॥2॥ ತೊಟ್ಟಿಲ ತೂಗುವ ಕರಗಳಿಂದಲೇ। ರಾಜ್ಯದ ಸೂತ್ರವ ನೀ ಹಿಡಿದೆ। ಬಳೆಗಳ ತೊಡುವ ಕರಗಳಿಂದಲೇ। ವೈರಿಯ ಶಿರವನು ನೀ ಕಡಿದೆ॥3॥ ನಿನ್ನಯ ಗಂಡೆದೆ ಶೌರ್ಯ ಪರಾಕ್ರಮ ಭಾರತನಾಡಿಗೆ ಆದರ್ಶ। ಸಾವಿರ ಕೋಟಿ ಧೀರೆಯರುದಿಸಲಿ ಕನ್ನಡನಾಡಿಗೆ ಬಲು ಹರುಷ॥4॥

**ಕೂಸಿಗೊಂದು ಕೂಸು** **ಶ್ರೀಮತಿ ಕೆ. ರಾಜಲಕ್ಷ್ಮಿ**

ಕೂಸಿಗೊಂದು ಕೂಸು ಯಾಕಪ್ಪ ಬೇಕು? ಬಾಲ್ಯದಾಗೆ ಬಹಳ ಬೇಸತ್ತಳ್ ಬಾಲೆ। ಆಡಲಿಕ್ಕೆ ಬಿಡರು, ಓಡಲಿಕ್ಕೆ ಬಿಡರು। ಯಾರಿಗೆ ಬೇಕಪ್ಪ, ಈ ಕಟ್ಟು ಪಾಡು?॥1॥ ಮೈ ತುಂಬಿ ಬರಲು ಮನಸಿಗೆ ಮುಸಿ ಮುಸಿ। ಮಾತೃತ್ವ ಎಂಬೋದು ಮಾತಿನ ಮುತ್ತಲ್ಲ। ಎತ್ತಲಿಕ್ಕೆ ಬರದು, ಸಾಕೋದು ಸಂಕಟ। ಈಹೊರೆ ಈಗಲೆ ಯಾರಿಗೆ ಬೇಕಿತ್ತು?॥2॥ ಹೆಣ್ಣು ಹೆರಿಗೆಯ ಯಂತ್ರವು ಅಲ್ಲ। ಹೊತ್ತು ಹೆತ್ತಾಗಲೆ ಗೊತ್ತು ಅದರ ಕುತ್ತು। ಎರಡು ಮಕ್ಕಳಿಗೆ ಅಂತರ ಇರಬೇಕು। ಪ್ರೀತಿ ವಾತ್ಸಲ್ಯ ಸಿಗಲೇ ಬೇಕು॥3॥ ನಿಮಗೊಂದು ಕಿವಿಮಾತು ಹೇಳುವೆ ಆಲಿಸಿ। ಎರಡು ಮಕ್ಕಳನಂತರ ವಿರಾಮ। ತಾಯಿ ಮಕ್ಕಳಿಗೆಲ್ಲ ಆರಾಮ। ಬರುವುದು ನೋಡಿ ಸಂತಸದ ಆಯಾಮ॥4॥

**ಕೃಷ್ಣ ಗೋವಿಂದ (ಹಿಂದಿ)** **ರಾಗ: ಅಭೇರಿ**

ಕೃಷ್ಣ ಗೋವಿಂದ ಗೋವಿಂದ ಗಾತೇ ರಹೋ। ನಾಮ್‌ಧನ್ ಕಾ ಖಜಾನಾ ಬಢಾತೇ ರಹೋ॥ಪ॥ ಲೋಗ್ ಕಹತೇ ಹೈ ಭಗವಾನ್ ಆತೇ ನಹೀ। ದ್ರೌಪದೀ ಕೀ ತರಹ್ ತುಮ್ ಬುಲಾತೇ ನಹೀ॥1॥ ಲೋಗ್ ಕಹತೇ ಹೈ ಭಗವಾನ್ ಖಾತೇ ನಹೀ। ಶಬರೀ ಕೀ ತರಹ್ ತುಮ್ ಖಿಲಾತೇ ನಹೀ॥2॥ ಲೋಗ್ ಕಹತೆ ಹೈ ಭಗವಾನ್ ಸುನ್‌ತೇ ನಹೀ। ಮಾಯಿ ಮೀರಾ ಕೆ ಜೈಸೆ ತುಮ್ ಗಾತೆ ನಹೀ॥3॥ ಲೋಗ್ ಕಹತೇ ಹೈ ಭಗವಾನ್ ನಾಚ್‌ತೇ ನಹೀ। ಗೋಪಿಯೋಂ ಕೇ ಜೈಸೆ ತುಮ್ ನಚಾತೇ ನಹೀ॥4॥ ಲೋಗ್ ಕಹತೇ ಹೈ ಭಗವಾನ್ ಸೋತೇ ನಹೀ। ಯಶೋಧ ಕೇ ಜೈಸೆ ತುಮ್ ಸುಲಾತೆ ನಹೀ॥5॥ ಕಾಮ್ ಕರ್‌ತೇ ರಹೋ ನಾಮ್ ಜಪತೇ ರಹೋ। ಯಾದ್ ಆಯೇಗಿ ಉಸ್‌ಕೋ ಕಭೀ ನಾ ಕಭೀ॥6॥

**ಗಂಗೆ ಭಾಗೀರಥಿ ಯಮುನೆ ಸರಸ್ವತಿ** **ರಾಗ: ಕುರಂಜಿ**

ಗಂಗೆ ಭಾಗೀರಥಿ ಯಮುನೆ ಸರಸ್ವತಿ ಸಂಗಮಕೆತ್ತುವೆ ಆರುತಿ। ಮಂಗಳ ಮೂರುತಿ ಶೃಂಗಾರದ ಸತಿ। ಮಂಗಳ ಜಯ ಮಂಗಳಾರತಿ॥ಪ॥ ಮನವೆಂಬುವ ಮಂಟಪವಲಂಕರಿಸಿ। ತನುವೆಂಬುವ ತವಕದಲಿರಿಸಿ। ಜನನ ಮರಣವೆಂಬೋ ಬಣ್ಣವ ಬೆರೆಸಿ। ಜನ್ಮವೆತ್ತದ ಜಲಗಳ ಬೆರಸಿ॥1॥ ನಾನು ನನ್ನದು ಎಂಬೋ ಕಳೆಗಳ ಕೊಚ್ಚಿ। ಜ್ಞಾನಾಂಬರ ಮರೆ ಮುಚ್ಚಿ। ಅಜ್ಞಾನದ ಆಭರಣವ ಬಿಚ್ಚಿ। ಸುಜ್ಞಾನದ ಜ್ಯೋತಿಗಳಿರಿಸಿ॥2॥ ಅರಿಶಡ್ವರ್ಗಗಳಕ್ಷತೆ ಕಲೆಸಿ। ಆನಂದದ ಸೊಡಲು ಗಳಿರಿಸಿ। ಅಷ್ಟಮದಗಳೆಂಬೋ ಆಜ್ಯವ ಕಲೆಸಿಘಟ್ಟನೆ ಮುಕ್ತಾಂಗನೆ ಬೆರೆಸಿ॥3॥

**ಚಮಕ್ ಉಠೀ ಸನ್ ಸತ್ತಾವನ್ (ಝಾಂಸ್ಸೀ ಕೀ ರಾಣಿ)**

**ಚಮಕ್ ಉಠೀ ಸನ್ ಸತ್ತಾವನ್ ಮೇ। ವಹ್ ತಲ್‌ವಾರ್ ಪುರಾನೀ ಥೀ। ಬುಂದೇಲೆ ಹರ್‌ಬೋಲೋಂ**

ಕೇ ಮುಹ್। ಹಮ್‌ನೇ ಸುನೀ ಕಹಾನೀ ಥೀ। ಖೂಬ್ ಲಡೀ ಮರ್ದಾನೀ ವಹ್‌ತೋ। ಝಾಂನ್ಸೀ ವಾಲೀ ರಾಣೀ ಥೀ।।1।। ಆವೋ ದೇಖೇ ಜಂಗ್ ಚಲೇ ಹಮ್। ಝಾಂನ್ಸೀ ಕೇ ಮೈದಾನೋಂ ಮೇ। ಜಹಾ ಖಡೀ ಹೈ ಲಕ್ಷ್ಮೀಬಾಯಿ। ಮರ್ದ್ ಬನೀ ಮರ್ದಾನೋಂ ಮೇ। ಲೆಫ್ಟಿನೆಂಟ್ ವಾಂಕರ್ ಆ ಪಹೂಂಚಾ। ಆಗೇ ಬಢಾ ಜವಾನೋಂ ಮೇ। ರಾಣೀ ನೇ ತಲ್‌ವಾರ್ ಖೀಂಚ ಲೀ। ಹುವಾ ಯುದ್ಧ ಅಸಮಾನೋಂ ಮೇಂ।।2।। ಜಖ್ಮೀ ಹೋಕರ್ ವಾಂಕರ್ ಭಾಗಾ। ಉಸೇ ಅಜಬ್ ಹೈರಾನೀ ಥೀ। ಬುಂದೇಲೇ ಹರ್‌ಬೋಲೋಂಕೆ ಮುಂಹ್। ಹಮ್ ನೇ ಸುನೀ ಕಹಾನೀ ಥೀ। ಖೂಬ್ ಲಡೀ ಮರ್ದಾನೀ ವಹ್ ತೋ। ಝಾಂನ್ಸೀ ವಾಲೀ ರಾಣೀ ಥೀ।।3।। ರಾಣೀ ಬಢೀ ಕಾಲ್‌ಪೀ ಆಯೀ। ಕರ್ ಸೌ ಮೀಲ್ ನಿರಂತರ್ ಪಾರ್। ಘೋಡಾ ಥಕ್ ಕರ್ ಗಿರಾ ಭೂಮಿ ಪರ್। ಗಯಾ ಸ್ವರ್ಗ್ ತತ್ಕಾಲ್ ಸಿಧಾರ್। ಯಮುನಾ ತಟ್ ಪರ್ ಅಂಗ್ರೇಜೋಂ ನೇ। ಫಿರ್ ಖಾಯೀ ರಾಣೀ ಸೇ ಹಾರ್। ವಿಜಯೀ ರಾಣೀ ಆಗೇ ಚಲ್ ದೀ। ಕಿಯಾ ಗ್ವಾಲಿಯರ್ ಪರ್ ಅಧಿಕಾರ್।।4।। ಸ್ಮಿಥ್ ಹಾರಾ ಹ್ಯೂರೋಜ್ ಆ ಗಯಾ। ಹಾಯ್! ಘಿರೀ ಅಬ್ ರಾಣೀ ಥೀ। ಬುಂದೇಲೇ ಹರ್‌ಬೋಲೋಂ ಕೇ ಮುಹ್। ಹಮ್‌ನೇ ಸುನೀ ಕಹಾನೀ ಥೀ। ಖೂಬ್ ಲಡೀ ಮರ್ದಾನೀ ವಹ್ ತೋ। ಝಾಂನ್ಸೀ ವಾಲೀ ರಾಣೀ ಥೀ।।5।। ತೋ ಭೀ ರಾಣೀ ಮಾರ್‌ಕಾಟ್ ಕರ್। ಚಲ್‌ತೀ ಬನೀ ಸೈನ್ಯ್ ಕೇ ಪಾರ್। ಕಿಂತು ಸಾಮನೇ ನಾಲಾ ಆಯಾ। ಥಾ ವಹ್ ಸಂಕಟ ವಿಷಮ್ ಅಪಾರ್। ಘೋಡಾ ಅಡಾ ನಯಾ ಘೋಡಾ ಥಾ। ಇತನೇ ಮೇ ಆ ಗಯೇ ಸವಾರ್। ರಾಣೀ ಏಕ್ ಶತ್ರು ಬಹುತೇರೇ। ಹೋನೇ ಲಗೇ ವಾರ್ ಪರ್ ವಾರ್।।6।। ಘಾಯಲ್ ಹೋಕರ್ ಗಿರೀ ಸಿಂಹಿಣೀ। ಉಸೇ ವೀರ್‌ಗತಿ ಪಾನೀ ಥೀ। ಬುಂದೇಲೇ ಹರ್‌ಬೋಲೋಂ ಕೇ ಮುಹ್। ಹಮ್‌ನೇ ಸುನೀ ಕಹಾನೀ ಥೀ। ಖೂಬ್ ಲಡೀ ಮರ್ದಾನೀ ವಹ್ ತೋ। ಝಾಂನ್ಸೀ ವಾಲೀ ರಾಣೀ ಥೀ।।7 ।।

### ಚಂದ್ರಮುಖೀ ಪ್ರಾಣ ಸಖೀ

ಚಂದ್ರಮುಖೀ ಪ್ರಾಣ ಸಖೀ, ಚತುರೆಯೇ ನೀ ಕೇಳೆ। ಮಾನವ ಕೋಟಿಯ ಸಲಹುವ ಶಕ್ತಿಯಾವುದು ನೀ ಹೇಳೆ।।ಪ।। ಮನೆಯನು ಮಡದಿಯು ಬೆಳಗುವಳು। ಮಾರ್ಗವ ತೋರುವಳು। ಮನುಜನ ಬಾಳಿನ ಕಷ್ಟದೆ ಸುಖದೆ ಜೊತೆಯಲಿ ನಡೆಯುವಳೂ।।1।। ಮಾತೆಯು ಮಗುವಾ ನವ ಮಾಸಗಳು। ಮುದದಲಿ ಧರಿಸುವಳು। ಕರುಳಿನ ಕುಡಿಗೆ ಅಮೃತ ನೀಡಿ ಮಮತೆಯ ತೋರುವಳು। ಚಂದ್ರಮುಖೀ ಪ್ರಾಣಸಖೀ ಚತುರೆಯೇ ನೀ ಕೇಳೇ।।2।। ಮಾನವ ಕೋಟಿಯ ಸಲಹುವ ಶಕ್ತಿ। ಮಹಿಳೆಯು ತಾ ತಿಳಿಯೆ ನಿಜದಲಿ। ಮಹಿಳೆಯು ತಾ ತಿಳಿಯೆ ಎಂದಿಗು। ಮಹಿಳೆಯು ತಾ ತಿಳಿಯೆ।।3।।

### ಜವಹರಲಾಲರ ಏಕಮಾತ್ರ

ರಾಗ:ಸಾರಂಗ

ಜವಹರಲಾಲರ ಏಕಮಾತ್ರ ಕುವರಿ। ಇಂದಿರಾ ಪ್ರಿಯದರ್ಶಿನಿಯು ಮಾದರಿ। ಕಮಲಾ ನೆಹರುರ ಪ್ರೀತಿಯ ಪುತ್ಥಳಿ। ಆದರು ಮಹಿಳಾ ಪ್ರಥಮ ಪ್ರಧಾನಿ।।1।। ಮೋತಿಲಾಲ ಸ್ವರೂಪರಾಣಿಯರ ವಂಶದ ಕುಡಿ। ಬೆಳಗಿತು ಅತಿ ಶೀಘ್ರದಲಿ। ಫಿರೋಜ್ ಗಾಂಧಿಯ ಪ್ರೇಮದ ಮಡದಿ। ಪಡೆದಳು ಈರ್ವರು ಕುವರರನು।।2।। ರಾಜಕೀಯದ ಪ್ರಜ್ಞೆಯನರಿತಳು ತಂದೆಯ ಮಾರ್ಗದರ್ಶನದಿ। ಭಾರತರತ್ನ ವಿಭೂಷಿಣಿಯಾದಳು। ದೃಢಚಿತ್ತದ ಆ ಧುರೀಣೆಯು।।3।। ಕಾವಲುಗಾರರ ಸಂಚಿಗೆಬಲಿಯಾಗಿ ಅಮರಳಾದಳು ಜನಮನದಿ ಭಾರತ ಮಾತೆಯ ಪ್ರೀತಿಯ ಪುತ್ರಿಯ ನೆನಪೆ ನಮಗೆ ಶುಭ ಸಂದೇಶ।। ಪ್ರಜೆಗಳು ನಿರತವು ಸ್ಮರಿಸುತಲಿರುವ। ರಾಷ್ಟ್ರವಿಭೂತಿಯೆ ಇಂದಿರಾ ಗಾಂಧಿ।।4।।

**ತಾಪಸಿ ಕಪಿಲಾ ಸಹೋದರಿ** **ರಾಗ: ರೇವತಿ**

ತಾಪಸಿ ಕಪಿಲಾ ಸಹೋದರಿ ರೇಣುಕ ಕೃತಯುಗದಲ್ಲಿ ಮೃತ್ಯು ಸತಿಮಣಿ। ರೇಣುಕ ಕ್ಷಿತಿಪತಿ ಕುಲತಿಲಕ ಪ್ರೀತಿಯೊಳಿಂತು। ಲಾಲಿಸು ಜಾತನ ಮಾತಾಪಿತ॥1॥ಪೇಳುವೇಂ ಪರಿಷ್ಕೃತ ತ್ರೇತಾಯುಗದಲ್ಲಿ। ಸೀತೆಯ ಮೃತ್ಯುವು। ಕೋಪಿಸಿದಾಲಿಪುದು ಪ್ರೀತಿಯೊಳಿಂತು। ಲಾಲಿಸು ಜಾತನ ಮಾತಾಪಿತ॥2॥ ದ್ವಾಪರ ಯುಗದಲಿ ದ್ರೌಪದಿ ಮೃತ್ಯುವು। ಕೋಪಿಸದಾಲಿಪುದು ಲಾಲಿಸು ಆಲೋಚಿಸರು ಲಾಲಿಸು ಜಾತನ ಮಾತಾಪಿತ॥3॥ಕಲಿಯುಗದಲಿ ಪ್ರತಿ ನಿಲಯದಿ ಮೃತ್ಯುವು। ನೆಲೆಸಿರುವಳು ಲಲನೆ ಆಲೋಚಿಸರು ಲಾಲಿಸುಜಾತನ ಮಾತಾಪಿತ॥4॥

**ದರ್ಶಿನಿ ಪ್ರಿಯದರ್ಶಿನಿ** **ರಾಗ: ಕಲ್ಯಾಣಿ,**

ದರ್ಶಿನಿ ಪ್ರಿಯದರ್ಶಿನಿ। ಇಂದಿರಾ ಪ್ರಿಯದರ್ಶಿನಿ ಇಂದಿರಾ ಪ್ರಿಯದರ್ಶಿನಿ॥ ವಿಶ್ವದಲ್ಲಿ ಖ್ಯಾತಿವೆತ್ತ ಮನೆಯಲ್ಲಿ ನೀನು ಹುಟ್ಟಿ। ದೇಶ ಸೇವೆ ಧ್ಯೇಯದಲ್ಲಿ ಅಮರಳಾದೆ ದರ್ಶಿನಿ॥1॥ ಮನುಕುಲದ ಧರ್ಮವನ್ನು ತಾಯಿತನದ ಹಿರಿಮೆಯನ್ನು। ಎತ್ತಿ ಹಿಡಿಯಲೆಂದೇ ನೀನು ಅಮರಳಾದೆ ದರ್ಶಿನಿ॥ ನೀತಿಗೆಟ್ಟ ಜನರಿಗೆಲ್ಲ ಶಿಸ್ತು ಕಲಿಸಲೆಂದು ನೀನು। ದಿಟ್ಟತನದಿ ಹೋರಾಡಿ ಅಮರಳಾದೆ ದರ್ಶಿನಿ॥2॥ ದೇಶದೊಳಿತಿಗಾಗಿ ನೀನು ಎಲ್ಲವನ್ನು ತ್ಯಾಗಮಾಡಿ। ರಕ್ತ ಸುರಿಸಿ ಪ್ರಾಣ ಕೊಟ್ಟು ಅಮರಳಾದೆ ದರ್ಶಿನಿ॥ ನಿನ್ನ ಹೆಸರಿನಿಂದ ಇಂದು ಧೈರ್ಯದಿಂದ ಮುಂದೆ ನಡೆದು। ಶ್ರೀ ಕೀರ್ತಿ ಹಬ್ಬಿಸಲು ದುಡಿಯುತಿಹೆವು ದರ್ಶಿನಿ ಪ್ರಿಯದರ್ಶಿನಿ॥3॥

**ನಾನೊಂದು ಜೀವನದಿ** **ರಾಗ: ಚಕ್ರವಾಕ**

ನಾನೊಂದು ಜೀವನದಿ। ಹೆಣ್ಣು ನನ್ನ ಹೆಸರು। ನನ್ನ ಮಮತೆಯ ಮಡಿಲಲ್ಲಿ। ಬಾಳು ಅಚ್ಚ ಹಸಿರು॥ಪ॥ ಪ್ರೀತಿಯೆ ನನಗೆ ಅಣೆಕಟ್ಟು। ಪ್ರೀತಿಯೆ ನನಗೆ ಕಾಲುವೆ। ಒಲಿದರೆ ನಾನು ವಿದ್ಯುತ್ತು। ಬಾಳ ಬೆಳಕಾಗುವೆ॥1॥ ಮಲಿನಗೊಳಿಸದಿರಿ ನನ್ನನ್ನು। ಸ್ವಾರ್ಥ ಲಾಲಸೆಯಲಿ। ಕಲುಷಿತಗೊಂಡರೆ ಜೀವಜಲ। ಜೀವನವಿನ್ನೆಲ್ಲಿ॥2॥ ಹೆಣ್ಣು ಹೆಣ್ಣೆಂದು ಕಡೆಗಣಿಸಿ। ನನ್ನನ್ನು ಕೆಣಕಿದರೆ। ಕೊಚ್ಚಿ ಹೋದೀತು ಮನೆಮಾರು। ನಾ ನೆರೆ ನುಗ್ಗಿದರೆ॥3॥

**ನಾರಿಯರಲಿ ಮಾದರಿಯೆಂದೆನಿಸಿರಮ್ಮ (ಲಾವಣಿ)** **ರಾಗ:ಶಿವರಂಜನಿ**

ನಾರಿಯರಲಿ ಮಾದರಿಯೆಂದೆನಿಸಿರಮ್ಮ। ಮೂರು ಕುಲಕೆ ಕೀರುತಿಯನು ತನ್ನಿರಮ್ಮ। ಸೇರಿದ ಪತಿ ಮಂದಿರವನುದ್ಧರಿಸಿರಮ್ಮ। ಬೇರೆ ಜನಕೆ ಸೋದರಿಯೆಂದರಿಯಿರಮ್ಮ॥ಪ॥ ಅಬಲೆಯರಿರ ಬಹುದು ದೇಹ ಶಕುತಿಯಲ್ಲಿ, ಶುಭ ಪರಂಪರೆಗಳ ಪತಿಗೆ ಕೋರಿರಮ್ಮ। ಲಭಿಸುವುದತಿ ಸುಲಭದಿ ಪರಲೋಕವಮ್ಮ, ಗೃಹಿಣಿಯೇ ಗೃಹವೆಂಬ ಮಾತನರಿಯಿರಮ್ಮ। ಗಹನದ ಸಂಸಾರ ಪಥವ ಜರಿಯಬೇಡಿರಿ॥1॥ವಹಿಸಿರಿ ಗೃಹಕೃತ್ಯಗಳನು ಆದರದಲ್ಲಿ, ಸಹಿಸಿರಿ ಸುಖದುಃಖಗಳನು ಖೇದವಿಲ್ಲದೆ ಶ್ರದ್ಧೆಯಿರಲಿ ಗೃಹಿಣಿಯ ಕಾರ್ಯದಲಿ ಸರ್ವದಾ, ಸ್ಪರ್ಧೆ ಮಾಡಬೇಡಿ ಪುರುಷಗುಚಿತ ಕಾರ್ಯದಿ, ತಿದ್ದಿರಮ್ಮ ವಿನಯದಿಂದ ಪತಿಯದೋಷವ, ಹದ್ದಿನಂತೆ ಕಾಯಿರಮ್ಮ ಪತಿಯ ಶ್ರೇಯವ, ದೈವದತ್ತವಿಹುದು ನಿಮ್ಮ ಮುಖದ ಕಾಂತಿಯು, ಸೇರಿಸಿ ಫಲವೇನು ವಿವಿಧ ಸುಣ್ಣ ಬಣ್ಣವ ಹೂವುಗಳನು ಕಲಕಲದರ ಗಂಧವಿಹುದೇ ಯಾವ ಕೃತಕ ಬೇಕಿದೇ ಸ್ವಭಾವ ಶೋಭೆಗೆ॥2॥ ಅನುಗಾಲವು ಊರಿಗೆ ಉಪಕಾರಿಯಾದರೂ, ಮನೆಗೆ ಮಾರಿಯಾಗ ಬೇಡಿರಮ್ಮ ಎಂದಿಗೂ, ವಿನಯವಿರಲಿ ನಡೆನುಡಿಯಿರಲಿ ಸರ್ವಜನರಲೂ, ಪ್ರಣಯ ಸರಸ ಬೇಡಿರಮ್ಮ। ಬಂಧು ಜನರಲೂ, ದುಡಿದು ದಣಿದು ಉಶ್ಶೆನುತಲಿ ಬರುವ ಪತಿಯಲಿ ಕಿಡಿಕಿಡಿಯಾಗಲಿ ಬೇಡಿರಿ, ತರಲು ಮರೆತರೆ ಬಡತನವಿರಬಹುದು ಸದ್ಯ ನಿಮ್ಮ ಪಾಲಿಗೆ, ಅಡಿಗಡಿಗದನಾಡಬೇಡಿ ಒಡೆಯನೆದುರಲಿ, ನೆರೆಮನೆ ವೆಂಕಮ್ಮನೊಂದು ಸೀರೆಕೊಂಡರೆ, ಗುರುಗುರು ಗುಟ್ಟತಲಿ ನೋಡಬೇಡಿ ಪತಿಯನು॥3॥ಮರುಕದಿ ಸಂತೈಸಲವರು ಮನವು ಕರಗುವುದೇ, ಸೆರೆಸೆರೆ ಕಣ್ಣೀರುಗಳನ್ನು ಸುರಿಸಬೇಡಿರಿ, ತುಳಸಿ ಪೂಜೆಯನು ಮಾಡೆ ಮರೆಯಬೇಡಿರಿ, ಕೆಲಸಗಳನು ದಿಟ್ಟತನದಿ ಮಾಡಿ ಮುಗಿಸಿರಿ, ಕಲಿಯಿರಿ ಸಂಸಾರದಲ್ಲಿ ನೆಪ್ಪನೇರವ ಹಳಿಯ ಬೇಡಿರಮ್ಮ ನೀವು

ನೆರೆಹೊರೆ ಜನರ, ಉಳಿಸಿ ಬಳಸಿರಮ್ಮ ದವಸ ಧಾನ್ಯವ, ತಿಳಿಸಬೇಡಿ ಮನೆಯ ಗೋಪ್ಯ ಪರರಿಗೆಂದಿಗೂ, ಕುಳಿತು ಕಾಲ ಕಳೆಯಬೇಡಿ ಕೆಲಸವಿದ್ದರೆ ಪ್ರಳಯ ಮಾಡಬೇಡಿ ಸಣ್ಣ ಪುಟ್ಟ ಮಾತಿಗೆ।।4।। ಸೊಟ್ಟ ಬೈತಲೆಯನು ತೆಗೆಯಲಿಷ್ಟಪಡದಿರಿ, ಅಷ್ಟವಕ್ರದುಡುಪುಗಳನ್ನು ಧರಿಸಬೇಡಿರಿ, ರಟ್ಟುಮಾಡಬೇಡಿರಮ್ಮ ರೂಪು ರಚನೆಗಳನು ಸಿಟ್ಟುಮಾಡಬೇಡಿ ಮುದಿಯ ಪಾದಕೆ ಶಿರವಬಾಗಿರಮ್ಮ। ಹರಿಯ ಕಥೆಗಳ ದಿನ, ಶ್ರವಣ ಮಾಡುವಾಗ ಹರಟೆ ನಿದ್ರೆ ಬೇಡಿರಿ, ಕಿವಿಯ ಕಚ್ಚಬೇಡಿರಮ್ಮ ಪರರ ವಾಕ್ಯಕೆ ಲವಲವಿಕೆಯ ಬೇಡಿರಮ್ಮ ಚಾಡಿ ಕ್ಷುದ್ರದಿ, ರೂಢಿಯಿಲ್ಲದಿರುವ ನಡತೆ ಬೇಡಿರೆಂದಿಗೂ, ಮೂಢರೆನಿಸಬೇಡಿ ಹಾಡು, ಹಸೆಯ ಕಲಿಯದೆ।।5।। ಪಾಡು ಪಡುವ ಪತಿಗೆ ಹರುಷ ನೀಡಿ ಗೃಹದಲಿ, ಪ್ರೌಢವಿದ್ಯೆ ಕಲಿತು ದುಡಿಯಬೇಡಿ ಪರರಿಗೆ, ಬಣ್ಣವಿಲ್ಲದಿರುವುದು ಬಂಗಾರವಲ್ಲವು, ಕಣ್ಣಿಗೆ ಹಿತವಲ್ಲದು ಶೃಂಗಾರವಲ್ಲವು, ಉಣ್ಣಲು ತಾ ದೊರೆಯದಿರಲು ಸಂಪತ್ತೆಲ್ಲವು, ಅನ್ನ ಮಾಡಲರಿಯದಿರಲು ಹೆಣ್ಣದಲ್ಲವು ದುಂದುಗಾರಿಕೆಯನು ಕಲಿಯ ಬೇಡಿರೆಂದಿಗೂ। ಮುಂದೆ ಕಾಲ ಚಕ್ರಗತಿಯ ಮನದಿ ಯೋಚಿಸಿ ಬಂದ ಮಾತುಗಳನು ಬಾಯಿ ತಡೆದು ಆಡಿರಿ, ನಂದಗೋಕುಲವನೆ ಮಾಡಿ ಗೃಹವ ನಗುತಲಿ।6।। ಬಳಕೆ ಇಲ್ಲದಿರುವ ಕಲೆಯ ಬೇಡಿರಿ, ಕಲಿಸಿರಮ್ಮ। ಕೆಲಸ ಕಾರ್ಯ ಮಕ್ಕಳುಗಳಿಗೆ ಗಳಿಸಿರಮ್ಮ ಪುಣ್ಯಕೀರ್ತಿ ತಿಳಿಯ ಮನದಲಿ, ಸುಲಭವು ಸಾಧನವು ನಿಮಗೆ ಪುಣ್ಯಲೋಕಕೆ, ಮನವನತಿ ಚಂಚಲತೆಯನು ಹೊಂದಬಿಡದಿರಿ ಅನುಮತಿ ಕೊಡಬೇಡಿ ದುಷ್ಟಜನರ ಬೋಧೆಗೆ। ಘನಮತಿಯನು ಪೊಂದಿಸತಿಯ ಮಾರ್ಗ ತೋರಿರಿ ಗುಣವತಿಯೆಂದೆನಿಸಿರಮ್ಮ ಹಿರಿಯ ಜನರಲಿ ದುಡುಕಿನ ಹೆಣ್ಣೆಂದು ಹೆಸರು ಪಡೆಯ ಬೇಡಿರಿ। ಸಿಡುಕಿನ ಮೋರೆ ತೋರಬೇಡಿ। ಜನರಿಗೆ ಒಡಕಿನ ಬಾಯವಳು ಎಂದು ಎನಿಸಬೇಡಿರಿ।।7।। ಕೆಡಕು ಕೋರಬೇಡಿ ಕೋಪದಿಂದ ಪರರಿಗೆ ಮನೆಗೆ ಬಂದ ಅತಿಥಿಗಳಲಿ ಆದರವಿರಲಿ। ಧ್ವನಿಯು ಮಧುರವಿರಲಿ ನಿಮ್ಮ ಮಾತು ಕಥೆಯಲಿ ಕೆಣಕಬೇಡಿ ಮರೆತು ಬಿಟ್ಟು ಜಗಳ ಕದನವ ಹಣಿಕಿ ನೋಡಬೇಡಿ ಪರರ ನಡೆನುಡಿಗಳನುಸಾರಥಿಯೆಂದೆನಿಸಿರಿ। ಸಂಸಾರರಥದಲಿ ವೀರರಮಣಿಯೆಂಬ ದಿವ್ಯ ಕೀರುತಿ ಬರಲಿ।ನಾರಿಯರಲಿ ಮಾದರಿಯನು ಪಡೆದು ತೋರಿದ ಭಾರತ ಭೂಮಾತೆಗೆ ಪ್ರತಿಬಿಂಬವೆನಿಸಿರಿ।।8।। ದೇಶಸೇವೆಯೆಂದು ರಾಜಕೀಯ ಬೇಡಿರಿ। ಮೋಸಹೋಗಬೇಡಿ ಆಶೆತೋರುವ ನುಡಿಗೆ। ದೇಶದೇಶ ತಿರುಗಿ ರಾಯ ಕ್ಲೇಶ ಬೇಡಿರಿ। ಭಾಷಣ ಬಹಿರಂಗದಲ್ಲಿ ಭೂಷಣವಲ್ಲವು ಸಿರಿ ರಮಣಿಗೆ। ತುಳಸಿಗಿಂತ ಪುಷ್ಪವಿಲ್ಲವೂ ಹಿರಿಯತನಕೆ ಸತ್ಯಕ್ಕಿಂತ ಮುಕ್ತಿಯಲ್ಲವೂ ಅರಸಿನೋಡೆ ತಾಯಿಗಿಂತ ನಂಟನಿಲ್ಲವು ಕರಿಮಣಿ ಸಮ ನಾರಿ ಜನಕೆ ನಗಗಳಿಲ್ಲವು।।9।।

## ಪಗ ಘುಂಘುರು (ಹಿಂದಿ) ರಾಗ: ಕಲ್ಯಾಣಿ

ಪಗ ಘುಂಘುರು ಬಾಂಧಕರ ನಾಚೀರೇ।।ಪ।। ಮೈತೋ ಅಪನೀ ನಾರಾಯಣ ಕೀ। ಹೋಗಯೀ ಆಪಹೀ ದಾಸೀರೇ।।1।। ಜಹರ ಪ್ಯಾಲಾ ರಾಣಾನೆ ಭೇಜಾ। ಪೀವತ ಮೀರಾ ಹಾಸೀರೆ।।2।। ಲೋಗ ಕಹೇ ಮೀರಾ ಹೋಗಯೀ ಭಾವರೀ। ಸಾಸಕಹೇ ಕುಲ ನಾಸೀರೇ।।3।। ಮೀರಾಕೇ ಪ್ರಭು ಗಿರಿಧರ ನಾಗರ। ವೇಗ ಮಿಲಾ ಅವಿನಾಸೀರೇ।।4।।

## ಪೆಣ್ಣಲ್ಲವೆ ನಮ್ಮನೆಲ್ಲ ರಾಗ: ಆನಂದಭೈರವಿ

ಪೆಣ್ಣಲ್ಲವೆ ನಮ್ಮನೆಲ್ಲ ಪಡೆದ ತಾಯಿ। ಪೆಣ್ಣಲ್ಲವೆ ಪೊರೆದವಳು। ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು। ಕಣ್ಣು ಕಾಣದ ಗಾವಿಲರು।।1।। ಕುವರನಾದೊಡೆ ಬಂದ ಗುಣವೇನದರಿಂದ। ಕುವರಿಯಾದೊಡೆ ಕುಂದೇನು। ಇವರೀರ್ವರೊಳೇಳ್ಗೆ ಪಡೆದವರಿಂದ। ಸವನಿಪುದಿಹಪರ ಸೌಖ್ಯ।।2।। ಪುಟ್ಟಿದ ಮನೆಯೊಳು ಪೋರಿ ಪುರುಳುಗೊಂಬ। ದಿಟ್ಟ ಗಂಡುಗಳಂತಿರಲಿ। ಕೊಟ್ಟುದರಿಂದ ತಣಿವ ಕುವರಿಗೆ ಮನ। ಮುಟ್ಟಿಕೊಡುವುದು ಕೋವಿದರು।।3।। ಎನ್ನ ಪೆತ್ತವರೀ ಮನೆಯೊಡವೆಗೆ। ಳಿನ್ನವೆಂದರಿವಿಲ್ಲದಿರ್ಪ। ಕನ್ಯೆಯನನ್ನಯರಿಗೀವನ್ನೆವರಮುರೆ। ಮನ್ನಿಸುವುದು ಮಮತೆಯೊಳು।।4।। ಅರಿತು ನಿಟ್ಟಿಸೆ ಗಂಡುಮಕ್ಕಳಿಂದತಿಶಯ। ದೆರಕದೊಳೆಸೆವ ಪೆಣ್ಗಳನು। ಪೊರನೋಟದಿಂದ ನೋಡದೆ ಪೋಲೆನಿಸದೆ।

ಮರುಕವೆರಸಿ ಮನ್ನಿಪುದು।।5।। ಸುಗುಣನಾವನು ಸುಚರಿತ್ರನಾವನು ಕಣ್ಗೆ। ಸೊಗಸುವ ಸೊಬಗನಾರೆಂದು। ಬಗೆದು ಭಾವಿಸಿ ಪೆಣ್ಣನೀವುದು ವಂಶದೊಳೊಗೆದೊಳ್ಗುವರನಿಗೊಲಿದು।।6।। ಅಲೆಗೆಯ್ಯದವ ಮತಿಯೆಸಗದ ವೈರವ। ಬಲಿಸದ ಬರಿದೆ ಪಳಿಯದ। ಕೊಲೆಬೈಗಳಿಂದ ಕೋಟಲೆಗೊಳಿಸದ ಸತ್ಕುಲಕೀವುದು ಕುವರಿಯನು।।7।। ಪಣದಾಸೆ ನಂಟುತನದ ಪತ್ತುಗೆ ನೇಹ। ದೆಣಿಕೆಗಳಿಂದೆದೆಗರಗಿ। ಗುಣ ಜವ್ವನ ಕುಲ ರೂಪಗುಂದಿದ ನಡೆ। ವೆಣಕೀಯಲಾಗದು ಪೆಣ್ಣ।।8।। ತನ್ನ ಮನೆಯಲುಂಡು ತವರು ಮನೆಯ ಸಂ। ಪನ್ನವಕ್ಕೆಂಬ ಪೆಣ್ಗಳಿಗೆ ಪೊನ್ನ ತೊಡಿಗೆ ಪೊಸದುಗುಲಂಗಳನಿತ್ತು। ಮನ್ನಿಸುವುದು ಮನವರಿತು।।9।। ಬಡವರಾವೆಮಗೆಲ್ಲಿ ಬರ್ಪುದೊಡವೆಯೆಂದು। ಕಡುದೈನ್ಯವಾಡಿ ಕಳೆಯದೆ। ಉಡದೆ ತೊಡದೆ ತಾವುಳಿದು ತನುಜೆಯರಿ। ಗುಡುತೊಡುವೊಡವೆ ಕೊಡುವುದು।।10।।

### ಬಣ್ಣದಲೇನಿದೆಯೋ ಬೆಡಗು — ರಾಗ:ಹಿಂದೋಳ

ಬಣ್ಣದಲೇನಿದೆಯೋ ಬೆಡಗು ಹೆಣ್ಣಿನ ಗುಣವೇ ಚಿನ್ನದ ಮೆರುಗು।।ಪ।। ಕಪ್ಪು ಕೀಳೆಂದು ಹಳಿಯುವದೇಕೋ। ಬಿಳುಪು ಮೇಲೆಂದು ಹೊಗಳುವುದು ಸಾಕು। ಕಪ್ಪು ಬಿಳುಪುಗಳ ಭೇದವೆ ಬೇಡ। ಒಪ್ಪುವ ಗುಣವಿದೇನೋ ನೋಡೋ ಮೂಢ।।1।। ನಿರ್ಮಲ ನಡದೆ ಗೌರವ ಘನತೆ। ತುಂಬಿದ ವನಿತೆ ಸುಂದರಿಯಂತೆ। ಹೊರಗಿನ ಬಣ್ಣವು ಹೊರಗಿನ ಥಳುಕು। ಒಳಗಿನ ಗುಣವೇ ಬಾಳಿನ ಬೆಳಕು।।2।।

### ಬಂದೆನು ಕರೆಯೇ ತ್ರಿವೇಣಿ — ರಾಗ: ಅಠಾಣ

ಬಂದೆನು ಕರೆಯೇ ತ್ರಿವೇಣಿ ದಯದಿಂದೆನ್ನ ನೋಡೆ ತ್ರಿವೇಣಿ।।ಪ।। ಪಡೆದವಳ್ ನೀನೆ ತ್ರಿವೇಣಿ ಎನ್ನ ಮನವ ನೋಡ್ದೇಳೆ ತ್ರಿವೇಣಿ। ನಡು ಗಂಗೆಯಲ್ಲಿ ಆಡಿ ಮುಳುಗುತಿರೆ ಕಡಹಾಯ್ದು ಎನ್ನನ್ನು ಕಾಯೆ ತ್ರಿವೇಣಿ।।1।। ಅಪ್ಪಣೆಯ ಕೊಡಿಸೆ ತ್ರಿವೇಣಿ ಎನ್ನ ಸ್ವಪ್ನದಲ್ದೇಳೆ ತ್ರಿವೇಣಿ। ಮುತ್ತೈದೆರಿಗೆ ಮೊರದ ಬಾಗಿಣಗಳ ಕೊಟ್ಟು ಸೇರುವೆನೆ ನ್ನಿನ್ನೊಳಗೆ ತ್ರಿವೇಣಿ।।2।। ದಾವಾಗ್ನಿ ನಗರದಿಂದ ನೀ ದಯದಿ ರಕ್ಷಿಸಿದೆಲ್ಲೆ ಬಂದು। ಆವತ್ತಿನಾರಭ್ಯ ಅನುಕೂಲವಾಗಿದೆ ಯಾವಾಗ ಕಾಂಬೆ ನಾನೆನುತ ನಾ ಬಂದೆ।।3।। ಅನುಮಾನವ್ಯಾಕೆ ತ್ರಿವೇಣಿ ಎನ್ನ ಮನವ ನೋಡ್ದೇಳೆ ತ್ರಿವೇಣಿ। ಅನುಮಾನ ತನುಮನ ಮನಸು ನಿನ್ನೊಳಗಿಟ್ಟು ಕಡೆಹಾಯ್ಸು ಎನ್ನನ್ನು ಕಾಯೆ ತ್ರಿವೇಣಿ।।4।। ಶ್ರೀಕೃಷ್ಣಗತಿಯೆ ತ್ರಿವೇಣಿ ಕೈಲಿ ಕಾಸಿಲ್ಲವಲ್ಲೆ ತ್ರಿವೇಣಿ। ವಾಸುದೇವರ ಧ್ಯಾನ ಅನುಕೂಲವಾಗಿ ಕೃಪೆಯಿಟ್ಟು ಪಾಲಿಸು ಕಾಯೆ ತ್ರಿವೇಣಿ।।5।। ಜಪತಪವಿಲ್ಲ ತ್ರಿವೇಣಿ ಮುಂದೆ ಗತಿಯೇನು ಹೇಳೆ ತ್ರಿವೇಣಿ। ಯತಿ ಸನ್ಯಾಸಿಯ ಪೂಜೆ ನಾ ಮಾಡಲಿಲ್ಲ ಲೇಸಾಗಿ ಜನಗಳ ನೋಡೆ ತ್ರಿವೇಣಿ।।6।।

### ಭಾರತ ಮುಕುಟವು ಇಂದಿರಾಗಾಂಧಿ — ರಾಗ:ಲಾವಣಿಧಾಟಿ

ಭಾರತ ಮುಕುಟುವು ಇಂದಿರಾಗಾಂಧಿ। ಏರಿತು ಪ್ರಜೆಗಳ ಒಲವಿನ ನಾಂದಿ।। ಮಾತೆಯು ನೋಡುವ ತೆರದೀ ಪ್ರಜೆಗಳ। ಪ್ರೀತಿಲಿ ಸರಿಸಮ ನೋಡಿದರು।।1।। ಜಾತಿ ಚಿತಾವಣೆ ಇಲ್ಲದೆ ಜನತೆಗೆ। ನೀತಿಯ ಬೋಧಿಸಿ ನಡೆಸಿದರು। ಆಗುತ ಮಹಿಳಾ ಪ್ರಥಮ ಪ್ರಧಾನಿ। ಸಾಗುತ ಯೋಜನೆಗೈದ ನಿಧಾನಿ।।2।। ನೀಗಿಸಿ ಕಷ್ಟವ ಜನರಭಿಮಾನಿ। ಬೇಗದಿ ಕಾರ್ಯವ ಜಯಿಸಿದರಾಣಿ। ಪಂಡಿತವರ್ಯರ ಪ್ರೇಮದ ಪುತ್ರಿ। ಖಂಡಿತವಾದಿಯು ಪರಮಪವಿತ್ರಿ।।3।। ಪುಂಡರ ನಡುಗಿಸಿದ ಚೆಂದದ ಚಾರಿತ್ರಿ। ಭಾರತ ಖಂಡದ ಧೀರಸುನೇತ್ರಿ। ನಾವೆ ದೇಶಕೆ ಶುಭಕೋರಿದ ಭಾರತರತ್ನ ಭೂಷಿಣೆಯ। ಜನತೆಯು ನೆನೆವುದು ದೃಢಚಿತ್ತದ ಆ ಭಾಮಿನಿಯ।।4।।

### ಭೂಮಿದೇವಿ ಪಾಲಿಸು ನೀ — ರಾಗ: ಪೂರ್ವಿಕಲ್ಯಾಣಿ

ಭೂಮಿದೇವಿ ಪಾಲಿಸು ನೀ ವೈದೇಹಿಯ। ವನದೇವಿ ಪಾಲಿಸು ವೈದೇಹಿಯ।।ಪ।। ಇನವಂಶದರಸರ ಮನೆಗೆ

ಮಂಗಳೆಯಾದ। ಜನಕ ಕುಲಾಂಬುಧಿ ಲಕ್ಷ್ಮಿಯ॥1॥ ದೇವಯಾಗದಿ ಭೂದೇವಿ ನೀನೇ ಪೆತ್ತ। ಪಾವನಳಾದ ಸೀತೆಯ॥2॥ ಮನದೊಳು ಪರಮ ಪಾವನಳೆಂದು ತಿಳಿಯದೆ। ಜನವ ಮೆಚ್ಚಿಸೆ ಬಿಟ್ಟ ಸೇತೆಯ॥3॥

**ಮಕ್ಕಳ ಜ್ಞಾನಕೆ ಸ್ತ್ರೀಯರು** **ರಾಗ:ಮಲಯಮಾರುತ**

ಮಕ್ಕಳ ಜ್ಞಾನಕೆ ಸ್ತ್ರೀಯರು। ಸುಖಒಕ್ಕಲಾಗಲು ನಿಜ ಸ್ತ್ರೀಯರು॥ಗುಣತಕ್ಕಂತೆ ಗಳಿಸಲು ಸ್ತ್ರೀಯರು। ಭಕುತಿಯಿಂದಲಿ ಕೈಲಾಸ ಪದವಿಯ। ಬಿಕ್ಕಟ್ಟು ಬಿಡಿಸಲು ಸ್ತ್ರೀಯರು॥1॥ ಮನೆ ಮಾರು ಬೆಳೆಯಲು ಸ್ತ್ರೀಯರು। ಘನ ಧನಕನಕವ ಅಳೆಯಲು ಸ್ತ್ರೀಯರು। ಜನರೊಳು ಉತ್ತಮರೆನಿಸಲು ಸ್ತ್ರೀಯರು। ತನುಮನ ಸೆಳೆಯಲು ಸ್ತ್ರೀಯರು॥2॥ ಕಿರಿಯರ ಸನ್ಮಾರ್ಗ ಸ್ತ್ರೀಯರು। ಮನೆ ಹಿರಿಯರ ಮಾನಕೆ ಸ್ತ್ರೀಯರು। ಧರೆಯೊಳು ಚಿರನಾಮ ಗಳಿಸಲು ಮುದದಲಿ। ಧರ್ಮದಿ ನಡೆಯಲಿ ಸ್ತ್ರೀಯರು॥3॥

**ಮಹಿಳೇ! ಜಗವಂದಿತೆಯಾಗು** **ರಾಗ:ಜುಂಜೋಟಿ**

ಮಹಿಳೇ! ಜಗವಂದಿತೆಯಾಗು ಪತಿವ್ರತದಿ। ಕುಹಕ ಗುಣಗಳನು ದೂರ ಮಾಡು ಮುದದಿ॥ಪ॥ ನಿತ್ಯ ಪತಿಯ ಸೇವೆಗೈದು ಸ್ತುತ್ಯಳೆನಿಸು ಇಹದಲಿ। ಭೃತ್ಯರನ್ನು ಮಕ್ಕಳಂತೆ ಕಂಡು ಪಾಲಿಸು ಮುದದಲಿ। ಸತ್ಯ ನುಡಿಗಳಿಗೆ ಎಡೆಗೊಡು ಮನದಿ॥1॥ ಗುರುಗಳನ್ನು ಹಿರಿಯರನ್ನು ಪೂಜ್ಯ ಭಾವದಿ ಕಾಣುತ। ಭೂರಿ ಆನಂದದಲಿ ಮನೆತನ ನನ್ನದೆಂದೇ ನಡೆಯುತ। ಪರಮ ಪತಿವ್ರತೆ ಎನಿಸುತ ಸಜ್ಜನದಿ॥2॥ ವಸ್ತು ವಡವೆಯ ಆಸೆ ಬೇಡ, ಶಿಸ್ತು ಸ್ತ್ರೀಯಳೆ ಮರೆಯಬೇಡ। ವ್ಯಸನ, ಕ್ರೋಧ, ಮಾಡಬೇಡ। ಅಸಮ ನಾರಿಯರ ಧರ್ಮ ಅರಿ ಮುದದಿ॥3॥

**ಮಂಗಳ ಬೆಳಗುವೆ** **ರಾಗ: ಬಾಗೇಶ್ರೀ**

ಮಂಗಳ ಬೆಳಗುವೆ ಭಾಗೀರಥಿಯೆ। ಅಹಜ ಹರನ ಪ್ರೇಮದ ರಾಣಿಯೇ॥ಪ॥ ಜಟೆ ಮಂಡಿತಳೆಕಟಿ ದಾಕ್ಷಿಯಳೇ। ನಿಟಿನಯನಾಯಕ। ಪ್ರೀತಿಸುವಳೇ॥1॥ ಪರಮಪವಿತ್ರಳೆ। ಸುರಮುನಿ ವಂದ್ಯಳೇ॥ ನರರ ಪಾಪವ ಪರಿಹರಿಸುವಳೆ॥2॥ ಕರಪಿಡಿದು ಕರುಣಿಸು ಮಾತೆ। ಜನತೆಯ ಪ್ರೀತೆ। ಕರಗಳ ಮುಗಿವೆನು ಜಲದೇವತೆಯೇ॥3॥

**ರತ್ನ ಕೆಚ್ಚಿದಂಥ ಮೂಗುತಿ** **ರಾಗ:ರೀತಿಗೌಳ**

ರತ್ನ ಕೆಚ್ಚಿದಂಥ ಮೂಗುತಿ। ನನ್ನ ಹೆತ್ತವರು ಕೊಟ್ಟಂಥ ಮೂಗುತಿ। ಇದು ಮುತ್ತು ಪೋಣಿಸಿದಂಥ ಮೂಗುತಿ। ಮುತ್ತೈದಿತನವ ಸೂಚಿಸುವ ಸೌಭಾಗ್ಯವ ಬಿತ್ತರಿಸುವಂಥ ಮೂಗುತಿ॥1॥ ಮಂಗಲದಾಯಕ ಮೂಗುತಿ। ಕುಲದಂಗನೆಯರ ಪ್ರಿಯ ಮೂಗುತಿ। ಮಂಗಲ ಕಾರ್ಯದಿ ಮೂಗಿನೊಳಗಿರಿಸುತೆ। ಮಂಗಳಾರತಿ ಗೈವ ಮೂಗುತಿ॥2॥ ಸತಿಗೆ ಮಂಗಳವಾದ ಮೂಗುತಿ। ಶುಭ-ಸತಿಗೆ ಶೋಭನವಾದ ಮೂಗುತಿ॥3॥

**ಸಖ್ಯ ಪಾದೋದ್ಭವೇ ದೇವಿ ಶ್ರೀರಂಗೋತ್ಸಂಗ (ಕಾವೇರಿ)** **ರಾಗ: ಧನ್ಯಾಸಿ**

ಸಖ್ಯ ಪಾದೋದ್ಭವೇ ದೇವಿ ಶ್ರೀರಂಗೋತ್ಸಂಗ ಗಾಮಿನಿ ಶ್ರೀಕಾವೇರಿ ನಮಸ್ತುಭ್ಯಂ ನಮೋ ಪಾಪಂ ವ್ಯಪೋಮ್ಯಯಂ॥1॥ ಮಾತೆಯ ಹರಿಪಾದ ಜಾತೆಯ ಪರಮ ಪುನೀತೆಯ ಭುವನವಿಖ್ಯಾತೆಯನು ಜಾತೆಯ ಮಾತೆಯ ಹರಿಪಾದಜಾತೆಯ ಪರಮಪುನೀತೆಯ ಜನಮನೋಪ್ರೀತೆಯ ಉನ್ನತಿ ಜಗನ್ಮಾತೆಯ ನೋಡುವಬನ್ನಿರೈಯ್ಯಾ॥2॥ ಕಾವೇರಿಯ ಭವಹಾರಿಯ ಲೋಕುಪಕಾರಿಯ ಮೋಕ್ಷಕಾರಿಯ ದುರಿತಾರಿಯ ನೋಡುವ ಬನ್ನಿರೈಯ್ಯಾ॥3॥ ಕಾಕಾರ ಕ್ಲೇಶನಾಶಿಯ ಮೇಣರೋ ವಾಂಛಿತಪ್ರದಂ ರೀಂಕಾರಂ ಮೋಕ್ಷದ ಪ್ರಾಪ್ತಂ ಕಾವೇರೀ ರೇವರೇವತಿ॥4॥ ನಾರಿಯ ನರರ ಸಂಹಾರಿಯ ಜನಮನೋಹಾರಿಯ ನಿಜಸಾಕಾರಿಯ ವಾರಿಯ ವರವಿಶ್ವಧಾರಿಯ ಮನ ನಿರ್ವಿಕಾರಿಯ ನೋಡುವ ಬನ್ನಿರೈಯ್ಯ॥5॥ ಮುದ್ಯಂತಿ ಮುನಿಯ ತ್ಸರ್ವೇ ಭವಾನಿ ಕೋಣಮಧ್ಯತೇ ಅಂಬತದ್ದರುಶನಾನ್ಮುಕ್ತಿ ನಜಾನೇ ಸ್ನಾನ ಜಂಫಲಾ॥6॥ ಬಂದು ಸಕಲ ಜನವೃಂದ ನೆರೆದು ಮೀಯಲಂದು

ನಾರದಮುನಿ ಪೊಗಳುತಿರೆ ಸಂದೇಹವಿಲ್ಲ ನೋಡಿದರೆ ಆ ಕ್ಷಣ ಮುಕ್ತಿ ಇಂತಿಲ್ಲದೆ ಮುಳುಗುವದ್ಯಾತಕಯ್ಯಾ॥7॥ ತ್ರಿರಾತ್ರಂ ಜಾಹ್ನವೀ ತೀರೆ ಪಂಚರಾತ್ರಯ ಯಮುನೇ ಸದ್ಯಾಪುನಾತು ಕಾವೇರಿ ಪಾಪಮಾಂ ಮರಣಾಂತಿಕಂ॥8॥ ಗಂಗೆಗೆ ಹೋಗಿ ಮಿಂದರೆ ಮೂರೈದು ದಿನಂಗಳಿಗಹುದು ಸುಕೃತವೆಂಬೋರು। ಹಿಂಗದೆ ಕಾವೇರಿಯ ನೋಡಿದಾಕ್ಷಣ ಪಾಪಂಗಳೆಲ್ಲ ಸಂಗತ ಇರಲು ಅಂಜಿಪೋಗುವು ದಯ್ಯಾ॥9॥ ದುಷ್ಟರೋಗೋಪ ಶಮನಂ ಕುಷ್ಟವ್ಯಾಧಿ ನಿವಾರಣಂ ಕಾವೇರಿ ವಂದಿತಂ ಪುಣ್ಯ ಕೈವಲ್ಯಂ ತದ್ಯ ನಿಪೇತ್॥10॥ ಕಂಡರೆ ಸಕಲ ಪಾತಕ ಪರಿಹಾರವು ಪೊಡವಂಟಿರೆ ದುರಿತ ದುಷ್ಕೃತ್ಯ ದೂರವು ಕೊಂಡಾಡಿದವರಿಗೆ ಅನಂತ ಮೋಕ್ಷವು ನೀರುಂಡರೆ ಭವರೋಗ ಹರೆವುದಯ್ಯಾ॥11॥ ಕಾವೇರಿ ತೋಯ ಮಾತ್ರುತ್ವ ವಾತೋಯತ್ರ್ ಪ್ರವರ್ತತೇ ತದ್ದೇಶ ವಾಸಿಣಾಂ ಮುಕ್ತಿ ಕಿಮಿತತ್ ತೀರವಾಸಿನಾಂ॥12॥ ಕಾವೇರಿಯ ಗಾಳಿ ಬೀಸಿದ ದೇಶದಿ ಆವಾವ ಜನರು ಸುಕೃತವಾಗ್ವರೆಯ್ಯಾ ಕಾವೇರಿಯ ತೀರವಾಸಿಗಳಿಗೆ ಮುಕ್ತಿ ಅಹುದು ಕೊನೆಮೊದಲಿಲ್ಲವಯ್ಯಾ॥13॥ ಕಾವೇರಿ ಗಿರಿಜಾತೋಯಂ ವೈಕುಂಠೋರಂಗಮಂದಿರಂ ವರವಾಸದೇವ ರಂಗೇಶಂ ಪ್ರತ್ಯಕ್ಷಂ ಪರಮ ಪದಂ॥14॥ ಯಾವ್ಯಾವ ಜನ್ಮ ಕರ್ಮಂಗಳ ಕಳೆಯಲು ಕಾವೇರಿಯಲು ಮಿಂದು ಸುಖಿಯಾಗ್ವರು ಶ್ರೀವಿಷ್ಣು ಸ್ವಾಮಿ ಪುರಂದರವಿಠಲನಂಘ್ರಿಯ ಭಾವದಿಂದಲೇ ಭಜಿಸಿ ಪಡೆವಿರಯ್ಯಾ ಮುಕ್ತಿ॥15॥

**ಸೊಬಗಿನ ಸೆರೆಮನೆಯಾಗಿಹೆ ನೀನು** **ರಾಗ: ಹಂಸಾನಂದಿ**

ಸೊಬಗಿನ ಸೆರೆಮನೆಯಾಗಿಹೆ ನೀನು ಚೆಲುವೇ ಸರಸತಿಯೇ॥ಪ॥ ಆದರೊಳು ಸಿಲುಕಿದ ಸೆರೆಯಾಳಾನು ನನ್ನೆದೆ ಆರುತಿಯೇ॥ಅ.ಪ॥ ಪದ್ಮವ ಮುಸುಕಿದ ಶೈವಳದಂತಿಹ ಸೀರೆಯ ನೆರಿಯಾಗುರೇ ಬಳ್ಳಿಯನೇಳಿಪ ನಿನ್ನ ನಡುವಿಗೆ ಕಟಿಬಂಧನವಾಗಿರುವಾಸೆ॥1॥ ತಾವರೆಯಂತಿಹ ನಿನ್ನ ಹಣೆಯಲಿ ಕುಂಕುಮವಾಗಿರಲೆನಗಾಸೆ ಸುಂದರ ವೆನಿಸಿಹ ನಿನ್ನ ಕೈಯಲಿ ವೀಣೆಯು ನಾನಾಗಿರಲಾಸೆ॥2॥ ನಿನ್ನೆಳೆಮೊಗದಲಿ ನಸುನಗೆಯಾಗಿರಲೆನಗಿಹುದೊಂದಾಸೆ ನಿನ್ನಕೈಯಲಿ ಗಾನವು ಸೂಸಿರೆ ಎನಗಿನ್ನೊಂದಾಸೆ। ನಿನ್ನೊಳು ನಾನು ನನ್ನೊಳು ನೀನು ಪ್ರೇಮದಿ ಲಯವಾಗುವುದಾಸೆ॥3॥

**ಶ್ರೀದೇವಿ, ಭೂದೇವಿ ಜಲದೇವಿಯರು** **ರಾಗ:ಭೌಳಿ**

ಶ್ರೀದೇವಿ, ಭೂದೇವಿ ಜಲದೇವಿಯರು ನಾವು। ನಕ್ಷತ್ರ ಲೋಕದಿಂದಿಳಿದು ಬಂದವರು। ಉಷೆಯ ಹಸೆಮಣೆ ಏರಿ ಒಸುಗೆಯನು ತರುವಾಗ॥1॥ ಕಸವರದ ಕಾಂತಿಯನು ಸೂಸುವವರು॥ ನೇಸರಿನ ಕಿರಣಗಳ ಕೇಸರಂಗಳ ಹಿಡಿದು। ನೀಹಾರಿಕಾ ಬನದಿ ಉಯ್ಯಾಲೆಯಾಡುವರು। ಚಂದಿರನ ಮಂದಿರದ ಚಕ್ಕಂದವಾಡುವರು। ಮಿಂಚು ಗೊಂಚಲು ಮುಡಿದು ಹಾಡುವವರು॥2॥ ಸಪ್ತರ್ಷಿ ಮಂಡಲವ ಶುದ್ಧಿಗೈದವರಾವು। ಯಜ್ಞಾಗ್ನಿಗೂ ತೇಜ ವಿತ್ತವರು ನಾವು। ನಕ್ಷತ್ರವಾಗಲಿಹ ಧ್ರುವದೇವನಿಗೆ ಇಂದು। ಅಕ್ಷಾಕ್ಷ ಸಂಪುಟವ ತೆರೆವವರು ನಾವು॥3॥

## ತಾಯಿ (ಅ)

**ಅತ್ತಿತ್ತ ನೋಡದಿರು ಅತ್ತು ಹೊರಳಾಡದಿರು** **ರಾಗ: ಕಲಾವತಿ**

ಅತ್ತಿತ್ತ ನೋಡದಿರು ಅತ್ತು ಹೊರಳಾಡದಿರು। ನಿದ್ದೆ ಬರುವವಳು ಹೊದ್ದು ಮಲಗೋ ಮಗುವೆ ಜೋ.... ಜೋ....॥ಪ॥ ಸುತ್ತಿ ಹೊರಳಾಡದಿರು ಮತ್ತೇ ಹಟ ಹೂಡದಿರು। ನಿದ್ದೆ ಬರುವವಳು ಕದ್ದು ಮಲಗೋ ಮಗುವೇ ಜೋ.... ಜೋ....॥ಅ.ಪ॥ಮಲಗೊ ಚೆಲ್ವಿನ ತೆರೆಯೇ ಮಲಗು ಒಲ್ಮೆಯ ಸೆರೆಯೆ। ಮಲಗೊ ತೊಟ್ಟಿಲ ಸಿರಿಯೇ ದೇವರಂತೇ? ಮಲಗೋ ಮುದ್ದಿನ ಗಿಣಿಯೇ ಮಲಗು ಮುತ್ತಿನ ಮಣಿಯೆ (ಮಲಗೊ ಚಂದಿರನೂರಾ ಹೋಗುವೆಯಂತೆ)-3ಸಾರಿ॥1॥ ತಾರೆಗಳು ಜರತಾರಿ ಅಂಗಿ ತೊಡಿಸುವರಂತೆ। ಚಂದಿರನ ತಂಗಿಯರು ನಿನ್ನ ಕರೆದು। ಹೂವ ಮುಡಿಸುವರಂತೆ ಹಾಲು ಕುಡಿಸುವರಂತೆ (ವೀಣೆ ನುಡಿಸುವರಂತೆ ಸುತ್ತ ನೆರೆದು)-3ಸಾರಿ॥2॥ ಬಣ್ಣ ಬಣ್ಣದಾ ಕನಸು ಕರಗುವುದು ಬಲುಬೇಗ। ಹಗಲು ಬರುವನು ಬೆಳ್ಳಿ ಮುಗಿಲ ನಡುವೆ। ಚಿನ್ನದಂಬಾರಿಯಲಿ ನಿನ್ನ ಕಳುಹುವರಾಗ (ಪಟ್ಟದಾನೆಯ ಮೇಲೆ ಪುಟ್ಟ ಮಗುವೆ)-3ಸಾರಿ॥3॥

**ಅಮ್ಮನ ಗೀತೆ ಭಗವದ್ಗೀತೆ** **ರಾಗ: ಸೌಖ್ಯದಾಯಿನಿ**

ಅಮ್ಮನ ಗೀತೆ ಭಗವದ್ಗೀತೆ। ಹಾಡಿದಷ್ಟು ಬೇಕು। ಅಮ್ಮ ಅಮ್ಮ ಅಮ್ಮ ಎಂಬ। ಎರಡಅಕ್ಷರವೇ ಸಾಕು।।ಪ।। ಬಾಲ್ಯಯೌವನ ಬ್ರಹ್ಮಚರಿತ। ಗೃಹಸ್ಥಾಪನ ಚರಿತ। ಏನೇ ಇರಲಿ ಏನೇ ಆಗಲಿ। ಅಮ್ಮ ಎಂದರೆ ಸಾಕು।।1।। ಕಂದನ ಕರೆಗೆ ಓ ಎನ್ನುವಳು। ಏನು ಬೇಕು ಕೇಳು। ತನ್ನನೆ ತಾನು ಕೊಡುವಳು ಅವಳು। ಅಮ್ಮ ಎಂದರೆ ದೇವರು।।2।। ಅಮ್ಮ ಅಮ್ಮ ಅಮ್ಮ ಎಂದು। ಹಗಲು ಇರುಳು ಹಾಡು। ಅಮ್ಮನ ಧ್ಯಾನ ದೇವರ ನಮನ। ಒಂದೇ ಅಲ್ಲವೆ ಹೇಳು।।3।। ಅಮ್ಮನೆ ದೇವಿಯ ಪ್ರತಿರೂಪ। ಬ್ರಹ್ಮಾನಂದ ದೀಪ। ಅಮ್ಮನ ಮನೆಯೆ ಬ್ರಹ್ಮಸ್ಥಾನ। ಅಮೃತ ಕುಡಿಸಿ ದವಳಾಶ್ರಮ।।4।।

**ಅಮ್ಮ ಎನ್ನುವ ಆ ನುಡಿಯೆ** **ರಾಗ: ಕಲಾವತಿ**

ಅಮ್ಮ ಎನ್ನುವ ಆ ನುಡಿಯೆ ಅಮೃತವಾಗಿದೆ। ಯಾವ ಕಾಲಕು ಕರೆವ ತುಟಿಗೆ ಮಧುರವಾಗಿದೆ।।ಪ।। ಭೂಮಿದೇವಿಯ ಸಹನೆ ಇವಳಿಗೆ। ಸಸ್ಯ ಶ್ಯಾಮಲ ಇವಳ ಹೂ ನಗೆ। ಎಲ್ಲಾ ಋತುಗಳು ಒಂದೇ ದಿನದಲಿ। ನೆಲೆ ನಿಂತು ಸಾಗಿದೆ ಇವಳ ಮೊಗದಲಿ।।1।। ಮೇರು ಶಿಖರವು ಇವಳ ಧೈರ್ಯವು। ಪ್ರೀತಿ ಚಿಲುಮೆಯು ಅಂತರಂಗವು। ಇವಳ ಕರುಣೆಗೆ ಕಡಲೇ ಹೋಲಿಕೆ। ಇವಳಿಂದ ಜೀವನ ರಾಗಮಾಲಿಕೆ।।2।।

**ಅಮ್ಮ ನಿನ್ನ ಕರುಣೆ ಹೊನಲು** **ರಾಗ: ವಲಚಿ**

ಅಮ್ಮ ನಿನ್ನ ಕರುಣೆ ಹೊನಲು ಹರಿಯುತಿಹುದು ಹಗಲು ಇರುಳು। ಇಂದು ನಿನ್ನ ಪ್ರೀತಿ ಮಡಿಲು ಹೊಂಗೆಯಂತೆ ತಂಪು ನೆಳಲು।।1।। ನಿನ್ನ ಎದೆಯ ಹಾಲು ಸವಿದು ನನ್ನ ನಡೆಯು ನುಡಿಯು ಇನಿದು। ನಿನ್ನ ಕೈಯ ತುತ್ತು ಎಂದು ಕ್ಷಯಿಸದಂಥ ಅಮೃತ ಬಿಂದು।।2।। ನಿನ್ನ ಶಾಂತಿ ಸಹನೆಯಲ್ಲಿ ಎನಿತು ಜೀವ ಅರಳಿದೆ। ನೀನು ಶುಭದಿ ಹರಸುವಲ್ಲಿ ನನ್ನ ದುಗುಡ ಕರಗಿದೆ।।3।। ನಿನ್ನ ತ್ಯಾಗದಿರುವಿನಲ್ಲಿ ಎಷ್ಟೋ ಮನೆಯು ಬೆಳಗಿದೆ। ನಿನ್ನ ನಾನು ನೆನೆಯುವಲ್ಲಿ ಪೂಜ್ಯಭಾವ ಸ್ಫುರಿಸಿದೆ।।4।।

**ಆಡಿ ಬಾ ನನಕಂದ** **ರಾಗ: ಶುಭಪಂತುವರಾಳಿ**

ಆಡಿ ಬಾ ನನಕಂದ ಅಂಗಾಲ ತೊಳೆದೇನು। ತೆಂಗೀನ ಕಾಯಿ ತಿಳಿನೀರು। ತಕ್ಕೊಂಡು ಬಂಗಾರ ಮೋರೆ ತೊಳೆದೇನು।।1।। ಬಾಲಕರಿಲ್ಲದ ಬಾಳಿದ್ಯಾತರ ಜನ್ಮ। ಬಾಡಿಗಿ ಎತ್ತು ದುಡಿದ್ಹಾಂಗ। ಬಾಳೆಲೆಯ ಹಾಸುಂಡು ಬೀಸಿ ಒಗೆದಂಗ।।2।। ಕಂದಾನ ಕೊಡು ಶಿವನೆ। ಬಂಧಾನ ಪಡಲಾರೆ। ಹಂಗೀನ ಬೋನ ಉಣಲಾರೆ। ಮರ್ತ್ಯದಾಗ ಬಂಜೆಂಬ ಶಬುದ ಹೊರಲಾರೆ।।3।। ಹಾವಿನ ಹೆಡೆಚಂದ। ಮಾವಿನ ಮಿಡಿಚೆಂದ। ಹಾರಾಡಿ ಬರುವ ಗಿಣಿ ಚೆಂದ। ಕಂದಯ್ಯ ನೀ ಚೆಂದ ನಮ್ಮ ಮನೆಗೆಲ್ಲ।।4।।

**ಎಲೆ ಗಿಣಿಯೆ ಮುದ್ದಿನ** **ರಾಗ:ಹಿಂದೋಳ**

ಎಲೆ ಗಿಣಿಯೆ ಮುದ್ದಿನ ಗಿಣಿಯೆ। ಬಳ್ಳಿ ಬಳ್ಳಿಯೆ ನಗುವೆ ಹೂವುಗಳೆ। ಅಮ್ಮಾ.... ಅಮ್ಮ..... ಎಂದರೆ ಹಿತವು ಅಮ್ಮ.... ಅಮ್ಮ.... ಭೂಮಿಗೆ ವರವು। ಅಮ್ಮನ ನೆರಳೇ ನಿಮಗೆ ಜಗವು। ಅಮ್ಮನಿಗಿಂತ ಸವಿ ನುಡಿಯೆ ಸಿಕ್ಕದು।।ಪ।। ಓಡಾಡೋ ಮುದ್ದು ಚೆಂಡು ಹೂಗಳೆ। ಅಮ್ಮನೆ ನಿಮ್ಮ ಪ್ರೀತಿ ಕಾವಲು। ಒಡಲಾಗಿ ಇರುವ ಮಮತೆ ಎಲ್ಲವ। ಹಾಲನು ಮಾಡಿ ಕರುವಿಗೆ ನೀಡುವಳು। ಕಣ ಕಣದೊಳಗು ಅಮ್ಮನಿರುವಳು। ಕರುಣೆ ಪ್ರೀತಿ ಹಂಚಲು।। ಎಲೆ ಗಿಣಿಯೆ।। ಪ್ರೀತಿಯ ಜೇನಿರೋ ಹೂವು ಅಮ್ಮನೆ। ಪ್ರಾಣವ ಉಳಿಸೆ ನದಿಯು ಅಮ್ಮನೆ। ಹುಟ್ಟೋರನೆಲ್ಲ ಹೊತ್ತು ತಿರುಗುತ। ಸಹಿಸುತ ಸಲಹೋ ಭೂಮಿ ಅಮ್ಮನೆ। ಆ ಮಾದೇವನ ಸೃಷ್ಟಿಯೆ ಇದು ಅಮ್ಮ ಎಂಬ ಸೋಜಿಗ।।2।।

**ಏನುಮಾತೋ2 ಏನುಮಾತಮ್ಮ** **ರಾಗ : ಅಭೋಗಿ**

ಏನು ಮಾತೋ ಏನು ಮಾತೋ ಏನು ಮಾತಮ್ಮ ಇದು ಸುಳ್ಳು।।ಪ।। ಹೋಗಿ ಹೋಗಿ ನಮ್ಮ ಮನೆಯಲ್ಲಿ ಇಲ್ಲವೇ ಕೆನೆ। ಯಾತಕೀ ಕೃಷ್ಣನಿಗೆ ನಿಮ್ಮ ಬೆಣ್ಣೆ। ನಮ್ಮ ಮನೆಯಲ್ಲಿ ಇಲ್ಲವೇ ಮೊಸರು। ಯಾತಕೀ ಕೃಷ್ಣನಿಗೆ ಕೆಟ್ಟ ಹೆಸರು।।1।। ಹಸು ಮಕ್ಕಳೆ ಮನೆಯ ಬೆಳಕಲ್ಲವೆ। ನೀವವರ ಬಯಕೆ ತೀರಿಪ ತಾಯಂದಿರೇ ಅಲ್ಲವೇ। ಅವನ ಕಳ್ಳನೆಂದು ಹೇಳುವುದು ಸರಿಯೆ...? ನಿಮ್ಮ ಮನ ಮನೆಗಳ ರಕ್ಷಿಸುವ ಹರಿಯೆ।।2।। ನಿಮಗೆ ಮತ್ಸರಯಾತಕೆ ನನ್ನ ಕುರಿತು ಅವನ ಎಣಿಸಬಹುದೆ। ಭಕ್ತಿಭಾವ ಮರೆತು ಮಕ್ಕಳಲ್ಲಿ ಕೃಷ್ಣನೆಂದರೆ ಸಾಮಾನ್ಯನೇ। ಬಾಯಲ್ಲಿ ವಿಶ್ವತೋರಿಸಿದ ಮಾನ್ಯನೆ....।।3।।

**ಕಂದನ ತೂಗಿದಳು ಯಶೋದೆ** **ರಾಗ: ಸಾವೇರಿ**

ಕಂದನ ತೂಗಿದಳು ಯಶೋದೆ। ಕಂದನ ತೂಗಿದಳು।।ಪ।। ಇಂದಿರರಮಣನ। ಅಂದವ ನೋಡುತ। ಮಂದಹಾಸನ ನೋಡಿ। ಆನಂದದಿ ಹಿಗ್ಗುತ।।1।। ಝುಗಝುಗಿಸುವನಿನ್ನ। ಜಗಿಲು ತೊಟ್ಟೀಲೊಳಗೆ। ಜಗನ್ನಾಥನೀನೆಂದು। ಮಗನೆಂದು ನಲಿಯುತ।।2।। ತಾಮರಸಾಕ್ಷನ ಕೋಮಲಾಂಗಿಯು ನೋಡಿ। ಆ ಮಹಿಮೆಯ ನೋಡಿ ಪ್ರೇಮ ಭರಿತಳಾಗಿ।।3।।

**ಕೇಳಿರೀಗ ಮಾತುಗಳನು**

ಕೇಳಿರೀಗ ಮಾತುಗಳನು ಬಾಲರೆ ವಿನೋದದಿ।।ಪ।। ರೀತಿಯಾದ ನಡತೆಯಿಂದ ಭೂತದಯೆಯ ತೋರಿರಿ।। ರೀತಿಯಿಂದ ದೀನಜನಕೆದಾತರೆನಿಸಿ ಮೆರೆಯಿರಿ।।1।। ಬೇರೆ ಜನರ ದುಃಖಗಳನು। ಧೀರತನದಿ ಕಳೆಯಿರಿ। ತೋರಿ ದೇಶಸೇವೆಯೊಳಗ। ಪಾರರೆನಿಸಿ ಮಮತೆಯ।।2।। ಹೀನ ಜನರ ಸಂಘಗಳನು। ನೀವು ಬಿಡಿರಿ ಬೇಗನೆ। ಸಾಧು ಜನರ ಜೊತೆಯ ಸೇರಿ। ಮಾನದಿಂದ ಮೆರೆಯಿರಿ।।3।।

**ಜೋ ಜೋ ಜೋ ಮಲಗೆನ್ನ ಮುದ್ದುಮರಿ** **ರಾಗ: ಖರಹರಪ್ರಿಯ**

ಜೋ ಜೋ .... ಜೋ ಜೋ ಜೋ। ಮಲಗೆನ್ನ ಮುದ್ದು ಮರಿ ಚಿನ್ನ।.... ನಿದ್ದೇನೇವರಿಸುತಿದೆ ಕಣ್ಣಾ ಜೋ..।।ಪ।। ನಡುರಾತ್ರಿ ದಾಟುತಿದೆ ಗಡಿಯಾ। ಇರುಳು ಬಿಚ್ಚಿದೆ ಕಪ್ಪು। ಜಡೆಯಾ ಲೋಕವೇ ಮಲಗಿರಲು ಹೊದ್ದು। ಆಟ ಶುರು ಮಾಡುವರೆ ಮುದ್ದು।।1।। ಹೂವಿಗೂ ಮಿದುವಾದ ಹೆಜ್ಜೆ। ಜೀವ ಝಲ್ಲೆನಿಸುವ ಗೆಜ್ಜೆ। ನಿನ್ನ ತೂಗುವ ಭಾಗ್ಯಕ್ಕೆಂದೆ। ತೊರೆದೆ ಮನೆ ಮಾರು ಲಜ್ಜೆ।।2।। ಕಣ್ಣೆ ಇದು, ಕಾಂತಿಯ ಚಿಲುಮೆ। ಹುಣ್ಣೆಮೆಗು, ಇಲ್ಲ ಈ ಹಿರಿಮೆ। ನಿನ್ನ ಕುಲುಕುಲು ನಗೆಯ ಹನಿಯು। ಬೃಂದಾವನದ ಕೊಳಲ ಹನಿಯು।।3।। ಮೂಗು ತಿದ್ದಿದಳೇನೋ ರಂಭೆ। ನಗಲು ಕಲಿಸಿದಳೋ ಜಗದಂಬೆ। ನನ್ನ ಮಗುವೇ? ನಾನೇ ನಂಬೆ! ದೇವಲೋಕದ್ದೇ ಈ ಗೊಂಬೆ।।4।। ಜೀವದಾಳದ ಬಯಕೆ। ನೀನು ಜನುಮ ಜನುಮದ ಕನಸು। ನೀನು ಒಲುಮೆ ಇಂಪನು ಹೀರಿ ಬೆಳೆದ ಕೆಂಪು। ತೋಟದ ಕಂಪು ನೀನು।।5।।

**ಜೋ ಜೋ ರನ್ನ ಜೋ** **ರಾಗ: ಕುರಂಜಿ**

ಜೋ ಜೋ ರನ್ನ ಜೋ ಜೇನುಕಾರಂಜಿಯೆ । ಚಿಲುಮೆಯೇ ನಲುಮೆಯೇ ಜೋ ಜೋ।।ಪ।। ಕನ್ನಡಾಂಬೆಯ ಹೊನ್ನ ಬಸಿರು ನಿನ್ನ ತವರೂರು। ಪುಣ್ಯಗಣಿಯೆ ತಣ್ಣಗಿರಲಿ ನಿನ್ನ ಬಾಳುಸಿರು।।1।। ಪಚ್ಚೆಯುಂಗುರ ಚಂದ್ರಹಾರ ಚಿನ್ನದುಡಿದಾರ। ಬೆಳ್ಳಿನೂಪುರ ತೊಡಿಪೆ ಎನ್ನ ಕೈಯಾರ।।2।।

**ಜೋ ಜೋ ಲಾಲಿ ನಾ ಹಾಡುವೆ**

ಜೋ ಜೋ ಲಾಲಿ ನಾ ಹಾಡುವೆ। ಚಿನ್ನ ನಿನ್ನ ಮುದ್ದಾಡುವೆ।। ಹೂವಂತ ಕನಸು ತಾ ಮೂಡಿ ಬರಲಿ। ನಗುವ ಅಳುವ ಕಣ್ಣಲ್ಲಿ ಇಂದು।। ಜೋಜೋಲಾಲಿ।। ನಿದಿರಾದೇವಿ ಬಾ ಮೆಲ್ಲಗೆ। ತಾರೆಯಿಂದ ಈ ಭೂಮಿಗೆ। ಸಾವಿರ ರಂಗಿನ ಮಳೆಬಿಲ್ಲಿನ। ಮಾಲೆಯ ಧರಿಸಿ ಬಾ ಇಲ್ಲಿಗೆ। ಚಿನ್ನದತೇರಲಿ ಒಲವಿಂದ ಬಂದು। ತಾರೇ ಮುತ್ತು ಕಂದಂಗೆ ಇಂದು।। ಜೋ ಜೋ ಲಾಲಿ।।

**ಜೋಜೋ ರಾಜಕುಮಾರ** **ರಾಗ: ಆನಂದಭೈರವಿ**

ಜೋಜೋ ರಾಜಕುಮಾರ। ಜೋ ಜೋ ರಾಜಕುಮಾರ।।ಪ।। ಜೋಜೋ ಎನ್ನುತ ಜೋಗುಳ ಪಾಡುತ। ಚಂದಿರನ ಕೂಗುವಳೋ।।ಅ.ಪ।। ತಣ್ಣನೆ ಹಾಸಿ। ತಂಗಾಳಿ ಬೀಸಿ। ಕಣ್ಣಿಗೆ ಜೋಂಪನು ತುಂಬಿಸಿ। ನನಸನು ಮರಸಿ। ಕನಸನು ಕಲೆಸಿ। ಸೋಜಿಗ ತೋರುವಳೋ।।1।। ಸನ್ನಿಧಿಯಲ್ಲಿ ಸೌಂದರ್ಯರಾಶಿ। ಎನ್ನಿಸಿಕೂತಿಹ ನಿನ್ನರಸಿ। ನಸುನಗು ಸೂಸಿ ನಲುಮೆಯ ಬೆರೆಸಿ ಹಾಯಿ ಎನ್ನುವಳೋ।।2।।

**ಜೋಗುಳವ ಹಾಡಿದರಾ।** **ರಾಗ: ಮೋಹನ**

ಜೋಗುಳವ ಹಾಡಿದರಾ। ಆ ಬಾಲ ಕೇಳ್ಯಾನಾ। ಹಾಲ ಹಂಬಲ ಮರೆತಾನ।।2 ಸಲ।। ನನ ಕಂದ ಜೋಗುಳದಾಗ ಅತಿಮುದ್ದು।।ಪ।। ಕೂಸಿದ್ದ ಮನೆಗೇ ಬೀಸಣಿಗೆ ಯಾತಕ? ಕೂಸೂ ಕಂದಯ್ಯ ಒಳ ಹೊರಗೆ।।2 ಸಲ।। ಸುಳಿದಾರೆ। ಬೀಸಣಿಗೆ ಗಾಳಿ ಸುಳಿದ್ಹಾಂಗೆ।।1।। ಹಕ್ಕೀಗೆ ಗೂಡಾಸೆ ಮಕ್ಕಳಿಗೆ ತಾಯಾಸೆ। ಬಿತ್ತೀದಾ ಬೆಳೆಗೇ ಮಳೆಯಾಸೇ।।2 ಸಲ।। ನೀ ಹತ್ತಿರವಿರಲೂ ನಮಗಾಸೆ।।2।। ಹಾವೀನ ಹೆಡೆಚೆಂದ ಮಾವಿನ ಮಿಡಿಚೆಂದ। ಹಾರಾಡಿ ಬರುವ ಗಿಳಿ ಚೆಂದ।।2 ಸಲ।। ನನ ಕಂದ ಹತ್ತೀರವಿರಲೂ ನಮಗಾನಂದ।।3।। ನಿನ್ನಂಥ ನೂರಾರು ಮಕ್ಕಳು ಆಡಲು। ಹೊನ್ನೆಯ ಮರದ ನೆರಳೊಳೂ।।2 ಸಲ।। ಹೊಂಗೆಯ ಮರದ ನೆರಳೊಳು ಆಡಲು। ಸನ್ಯಾಸಿ ಜಪವ ಮರೆತಾನು।।4।। ಯಾತಕಳುತಾನೆಂದು ಎಲ್ಲರು ಕೇಳೋರು। ಕಾಯದ ಹಾಲ ಕೆನೆಬೇಡಿ ಕಂದಯ್ಯ(2ಸಾರಿ) ಕಾಡಿ ಕೈ ಬಿಟ್ಟು ಇಳಿಯಲು।।5।। ಅತ್ತರೆ ಅಳಲವ್ವ, ಈ ಕೂಸು ನಮಗಿರಲಿ। ಕೆಟ್ಟರೇ ಕೆಡಲೀ ಮನೆಗೆಲಸ।।2ಸಲ।। ಈ ಕೆಲಸ ಮಕ್ಕಳಿರಲವ್ವ ಮನೆ ತುಂಬ।।6।। ಅತ್ತರು ಆಡ್ಯಾನ ಮತ್ತೇನು ಬೇಡ್ಯಾನಾ। ಎತ್ತಿಕೊಳ್ಳೆಂಬೋ ಹಠವಿಲ್ಲ।।2ಸಲ।। ನನಕಂದ ಜೋಗುಳದಾಗ ಅತಿಮುದ್ದು।। ಜೋ... ಜೋ... ಜೋ... ಜೋ ...।।7।।

**ತಾಯಿ ದುರ್ಗೆಯ ನಿಜವನರಿಯುವ** **ರಾಗ: ಮೋಹನ**

ತಾಯಿ ದುರ್ಗೆಯ ನಿಜವನರಿಯುವ। ಧೀರರಾರೋ ಜಗದೊಳು। ಆರು ದರುಶನ ವೇದ ಶಾಸ್ತ್ರ। ಪುರಾಣವರಿಯದು ಅವಳನು।।1।। ಯೋಗಿಹೃದಯದ ದಿವ್ಯ ನಿತ್ಯಾ। ನಂದ ರೂಪಿಣಿ ಆಕೆಯು। ತನ್ನ ಆನಂದದಲಿ ತಾನೇ। ಜೀವರೆದೆ ಯೊಳಗಿರುವಳು।।2।। ಸಕಲ ಬ್ರಹ್ಮಾಂಡವನು ಬಸಿರಲಿ। ಧರಿಸಿ ನಿತ್ಯವು ಪೊರೆವಳು। ಮೂಲಾಧಾರ ಸಹಸ್ರಾರದಿ। ಮುನಿಗಳವಳನು ನೆನೆವರು।।3।। ಶಿವನ ಹೊರತಿನ್ನಾರು ಅರಿಯರು। ಅವಳ ದಿವ್ಯ ಸ್ವರೂಪವ। ಪದ್ಮವನದಲಿ ಹಂಸರೂಪವ। ಜೊತೆಗೆ ನಲಿಯುವ ಮಾಟವ।।4।।ಕಡಲನೀಜುವೆನೆಂಬ ಮರುಳನ। ಕಲ್ಪನೆಗೆ ನಗುವಂದದಿ। ಇಂಥ ತಾಯಿಯನು ತಿಳಿದನೆಂದರೆ। ಶ್ರೀಪ್ರಸಾದನು ನಗುವನು।।5।। ಕುಬ್ಜನಾದವ ಮುಗಿಲ ಚಂದ್ರನ ಹಿಡಿವ ಯತ್ನದ ತೆರದಲಿ। ಬುದ್ಧಿಯರಿತರು ಹೃದಯವರಿಯದು। ತಾಯಿ ದುರ್ಗೆಯ ನಿಜವನು।।6।।

**ತೋಳ್ಸೆರೆಯಲ್ಲಿ ಅಪ್ಪಿ ಮುತ್ತಿಕ್ಕಿ**

ತೋಳ್ಸೆರೆಯಲ್ಲಿ ಅಪ್ಪಿ ಮುತ್ತಿಕ್ಕಿ ಬೆಳೆಸುವಳು ಅಮ್ಮ। ತೊದಲ ಮಾತಲ್ಲಿ ಮೊದಲು ಕಲಿಯುವುದೇನೆಂದರೆ "ಅಮ್ಮ"।।1।। ಅಆಇಈ ಮೊದಲ ಪಾಠವ ಕಲಿಸಿ ಕೊಡುವಳು ಅಮ್ಮ। ಜೋಗುಳ ಪಾಡಿ ನಸುನಗುತ ಮಲಗಿಸುವಳು ಅಮ್ಮ ।।2।। ಬಾಯಿಗೆ ತುತ್ತನು ಇಟ್ಟು ಹಸಿವೆ ನೀಗಿಸುವಳು ಅಮ್ಮ। ಒಳ್ಳೆಯ ಕಥೆಗಳ ಹೇಳಿ ನಕ್ಕಿ ನಗಿಸುವಳು ಅಮ್ಮ ।।3।। ಎಡವಿ ಬಿದ್ದ ಅಳುವ ಕಂದಗೆ ಕಣ್ಣೀರ್ ಒರೆಸುವಳು ಅಮ್ಮ। ದೃಷ್ಟಿ ತಾಗದೆ ಇರಲಿ ಎಂದು ಉಪ್ಪು ನಿವಾಳಿಸುವಳು ಅಮ್ಮ ।।4।। ತನ್ನ ಸುಖ ಸಂತೋಷಗಳ ತ್ಯಾಗಮಾಡಿ ಬದುಕುವಳು ಅಮ್ಮ। ತಾನೂ ತಿನ್ನದೆ ಬಚ್ಚಿಟ್ಟು ತಿಂಡಿ ತಂದುಕೊಡುವಳು ಅಮ್ಮ ।।5।। ಋಣ ತೀರಿಸಲು ಸಾಧ್ಯವಿಲ್ಲ ಅವಳು ಯಾರೆಂದರೆ ಅಮ್ಮ। ನವಮಾಸ ಹೊತ್ತು ಹೆತ್ತು ತುತ್ತಿಕ್ಕಿ ಸಾಕುವಳು ಅಮ್ಮ ।।6।। ಎಲ್ಲಿದ್ದರು ಸರಿ ಹೇಗಿದ್ದರು ಸರಿ ಕಂದನ ಏಳಿಗೆ ಬಯಸುವ ಅಮ್ಮ। ಎಂದಿಗೂ ಮರೆಯದಿರು ಮನದಲ್ಲೆ ನೆನೆಯುತಿರು ತಾಯಿ ದೇವರು ಅಮ್ಮ ।।7।।

**ದಿನಕರ ಗಗನದಿ ಕಾಣುತ** **ರಾಗ: ತಿಲಂಗ್**

ದಿನಕರ ಗಗನದಿ ಕಾಣುತ ಬಂದ ಗೆಳೆಯನೆ ಮರೆಯದೆ ಏಳೆಲೊ ಕಂದ॥ಪ॥ ಕೊಡಗಿನ ಕಿತ್ತಳೆ ಹಣ್ಣನು ತಂದ ತಿನ್ನಲು ಸೊಗಸಿದು ಏಳೆಲೊ ಕಂದ। ದಿನಮಣಿ ತಂದಿಹ ಕೆಂಪು ಗುಲಾಬಿಯ ಜಡೆಯಲಿ ಮುಡಿಸುವೆ ಏಳೆಲೊ ಕಂದ॥1॥ ನಿನ್ನನು ಕರೆಯುತ ದೂರದಿ ನಿಂದ ಬೆಳಕಲಿ ಆಡಲು ಏಳೆಲೊ ಕಂದ। ಸೂರ್ಯನು ಕಾದಿರೆ ಏನದು ಚೆಂದ। ಬೇಗನೆ ನಗುತಲಿ ಏಳೆಲೊ ಕಂದ॥2॥ ಏಳೇಳು ಕಂದ ಓ ಮಗುವೆ ಬುದ್ಧಿಯ ಮಾತಿದು ಲಾಲಿಸು ಮಗುವೆ। ಬೆಳಬೆಳಗೆದ್ದು ಮುಖವನು ತೊಳೆದು ಹಲ್ಲುಗಳುಜ್ಜಲು ಬೇಕು ಮಗುವೆ॥3॥

**ನಮ್ಮೂರ ಪುಟ್ಟಾಣಿ ಬಾ** **ರಾಗ: ಶಂಕರಾಭರಣ**

ನಮ್ಮೂರ ಪುಟ್ಟಾಣಿ ಬಾ। ನಮ್ಮ ಕೇರಿ ಕಟ್ಟಾಣಿ ಬಾ...। ಇಗೋ ಚಿನ್ನಿ ಕೋಲು ತಗೋ ಬಣ್ಣದ ಬಾಲು। ಪುಟ್ಟಾಣಿ ಓಡಿ ಬಾ...॥ಪ॥ ಸಿಟ್ಟು ಗಿಟ್ಟು ಬಿಟ್ಟು ಬಾರೋ ಇತ್ತಾ...। ಅಳೋದ್ಯಾಕೆ ಕಣ್ಣ ನೀ ಉಜ್ಜುತಾ...॥2ಸಾರಿ॥ ಕ್ರಿಕೆಟ್ ಬಾಲು ಬೇಕೋ ಬೇಡ್ವೋ ಹೇಳು। ಬಾಮ್ಮಾ ಮುದ್ದು ಮರೀ...॥1॥ ನೀನೇ ಗೆಲ್ಲು ನಮಗೇನಿಲ್ಲ ಚಿನ್ನ। ಕೂಸುಮರಿ ಮಾಡ್ತೀವಮ್ಮಾ ನಿನ್ನ। ಗಾಡ್‌ಪ್ರಾಮಿಸ್ಸು ನೀನೇ ನಮ್ಮ ಮಿಸ್ಸು। ಬಾಮ್ಮಾ ಮುದ್ದು ಮರೀ...॥2॥ ಭೀಮು ಆನೆ ರಾಮು ಜಿಂಕೆ ಆಯ್ತಾ। ಆನೆಮೇಲೆ ಜಿಂಕೆ ಹಾರಿಹೋಯ್ತಾ। ಎಲ್ಲಾ ತಾರೆ ನಿನ್ನ ಸುತ್ತುತ್ತಾರೆ। ಬಾಮ್ಮಾ ಮುದ್ದು ಮರೀ॥3॥

**ನನ್ನ ತಾಯಿ ನನಗಿರಲಿ** **ರಾಗ: ಹಿಂದೋಳ-ಏಕತಾಳ**

ನನ್ನ ತಾಯಿ ನನಗಿರಲಿ ಎಂದೆಂದು ನಗುತಿರಲಿ। ಅವಳ ಪಡೆದಾ ಭಾಗ್ಯ ಎಲ್ಲ ನನ್ನದಾಗಿರಲಿ॥ಪ॥ ಅವಳ ಶಾಂತಿ ಸ್ವರೂಪ ಮನೆಯ ನಂದಾದೀಪ। ಅವಳ ತೃಪ್ತಿಯ ನೋಟ ಮನಕೆ ಹಬ್ಬದೂಟ। ಮನಕೆ ಹಬ್ಬದೂಟ॥1॥ ಅವಳ ಮನದಾ ಹರುಷ ಸಂಜೀವಿನೀ ಸ್ಪರ್ಶ। ಅವಳೊಲುಮೆಯ ಧ್ವನಿಯು ಅಮೃತದ ಧ್ವನಿಯು। ಅಮೃತದಾ ಧ್ವನಿಯು॥2॥ ಅವಳ ಕೃಪೆಯಾಗಾರ ದೇವಗಂಗಾ ತೀರ। ಅವಳ ದೈವ ಮೂರ್ತಿ ಮನಕೆ ನಿತ್ಯದ ಸ್ಫೂರ್ತಿ ಮನಕೆ ನಿತ್ಯದಾ ಸ್ಫೂರ್ತಿ॥3॥

**ನೋಡಮ್ಮ ಅಳುತಾನೆ ನನಕಂದ** **ರಾಗ: ಚಂದ್ರಜ್ಯೋತಿ**

ನೋಡಮ್ಮ ಅಳುತಾನೆ ನನ ಕಂದ। ಬೇಕಂತೆ ಅವಗೊಂದು ಪಾರಿವಾಳ। ಕೈಗೆ ಸಿಕ್ಕೀತೇನು ಪಾರಿವಾಳ। ಶ್ವೇತ ಗರಿಯ ಪಾರಿವಾಳ॥ಪ॥ ಬಿಸಿಲು ಮಚ್ಚಿನ ವಾಲೆ ನೋಡೇ ತಂಗಿ। ಅಂಜೂರದ ಮರದ ಬಳಿ ಹುಡುಕೇ ತಾಯಿ। ಸಂಜೆ ಅಲ್ಲೇ ಅದು ಸುಳಿದು ಬಂತು। ಸುಮ್ಮನಿರೋ ತಂದೆ ನೀನು ಅಣ್ಣ ಬಂದ॥1॥ ಅಜ್ಜಿ, ಅತ್ತೆ, ಅಕ್ಕ ಹುಡುಕಿಬಂದರೂ। ಅದೆಲ್ಲೂ ಕಾಣುತ್ತಿಲ್ಲ। ಯಾವ ಸೀಮೆಯಲುಂಟು ಅಂತಹ ಹಕ್ಕಿ। ಬಾನೊಳಗೆ ಇರಬಹುದು ಶಿವನೆ ಬಲ್ಲ॥2॥ ಸಿಕ್ಕದಿದ್ದರೆ ಏನು ಗತಿಯಮ್ಮ। ಸೆರಗೆಳೆದು ಜಗ್ಗಿಸುತ ಸೆಳೆವನಮ್ಮ। ಇವನಿಗೆ ಹೆದರುವ ಬೀದಿ ಗುಮ್ಮ। ಇವನ ಚಂಡಿಗೆ ಕಲ್ಲೂ ಕೂಗುವುದಮ್ಮ॥3॥ ಉಪ್ಪು ತುಪ್ಪವ ಕಲೆಸಿದನ್ನ ಉಣಿಸಿ। ಉಗುರು ಬೆಚ್ಚಗೆ ಕಾದ ಹಾಲು ಕುಡಿಸಿ। ತೂಗು ಮಂಚದ ಮೇಲೆ ತಂದುರುಳಿಸಿ। ಸಣ್ಣ ದನಿಯಲಿ ಹಾಡಿ ನಿದ್ದೆ ಬರಿಸಿ ಗೆದ್ದೆ॥4॥

**ಬುದ್ಧಿ ಮಾತ ಕೇಳಿ ಓ ಮುದ್ದು** **ರಾಗ: ಮಾಂಡ್**

ಬುದ್ಧಿ ಮಾತ ಕೇಳಿ ಓ ಮುದ್ದು ಮಕ್ಕಳೇ ಜಾಣರಾಗಿ ಬಾಳಿ ನನ್ನ ಹೊನ್ನ ಹೂಗಳೇ॥ಪ॥ ಮಾತಲ್ಲಿ ಮಿತವಿರಲೇ ಬೇಕು। ನಿಮ್ಮ ನಡೆಯಲ್ಲಿ ಹಿತವಿರಬೇಕು। ನೀವು ಎಲ್ಲೇ ಇರಲಿ ನಾಳೇ ಹೇಗೇ ಇರಲಿ। ಜನ ಮೆಚ್ಚುವಂತೆ ನೀವಿರಬೇಕು॥1॥ ಹಿರಿಯರಲ್ಲಿ ಗೌರವವು ನಿಮಗಿರಬೇಕು। ಗುರುಗಳಲ್ಲಿ ಭಕ್ತಿಭಾವ ತುಂಬಿರಬೇಕು। ಗೆಳೆಯರಲ್ಲಿ ಸ್ನೇಹಪ್ರೇಮ ತುಂಬಿರಬೇಕು। ಬಡವರನ್ನು ಪ್ರೀತಿಸುವ ಗುಣವಿರಬೇಕು॥2॥ ಯಾರಲ್ಲು ನೋವು ತರಬಾರದು। ಸುಳ್ಳು ನುಡಿ ಹೇಳದಿರಿ। ಕೆಟ್ಟವರ ಸೇರದಿರಿ। ಬಾಳುವ ನೀತಿಯ ಕಲಿಯಿರಿ॥3॥ ಲಾಲಾ ಲಾಲಾ ಲಾಲಾ ಲಾಲಾಲಾ(2 ಸಾರಿ) ಧೂಮಪಾನ ಮಾಡುವುದು ಗೌರವವಲ್ಲಾ। ಮಧುಪಾನ ದೇಹಕ್ಕೆ ಒಳ್ಳೆಯದಲ್ಲಾ। ನಿಜವನ್ನು ಏಕೆ ನೀ ಅರಿತಿಲ್ಲ।

ಅತಿಯಾದ ಚೆಲ್ಲಾಟ ಸರಿಯೇನಲ್ಲಾ॥4॥ ಹೆಣ್ಣುಗಳು ನಿನ್ನಾಟದ ಬೊಂಬೆಗಳಲ್ಲಾ। ಈ ಪಾಠ ಏಕೆ ನೀ ಕಲಿತಿಲ್ಲಾ। ಸುಳ್ಳಿಯಂತೆ ನೋಡದಿರು ಕಳ್ಳನಂತೆ। ನೋಡದಿರು ಬದುಕಿನ ರೀತಿಯ ನೀ ಅರಿತುಕೋ ಮಗುವೇ॥5॥

## ಮಲಗು ಮಲಗೆಲೆ ಕಂದ ರಾಗ:ಆನಂದಭೈರವಿ

ಮಲಗು ಮಲಗೆಲೆ ಕಂದ। ಅಳಲೇನು ಚಂದ। ಕಿಲಕಿಲನೆ ನಗುತಲಿರು ನನ್ನ ಆನಂದ॥ಪ॥ ಹಾಡೊಂದು ಹಾಡುವೆನು ಸಣ್ಣದಾಗದಲಿ। ತೂಗುವೆನು ತೊಟ್ಟಿಲನು ಲಾಲಿ ಹೇಳುತಲಿ॥ ಜೋಜೋ॥ ಚಳಿಗಾಳಿ ಬೀಸುತಿದೆ ಮಲಗು ಬಾ ಮಗುವೇ। ಬೆಳಗಾಗ ನಿನಗಾಗಿ ಕೆನೆಹಾಲು ಕೊಡುವೇ ॥1॥ ಮುಖ ತೊಳೆದು ತಲೆ ಬಾಚಿ ಜಡೆ ಹೆಣೆದು ನಿನಗೇ। ಹೂ ಮುಡಿಸಿ ತೊಡಿಸುವೆನು। ಜರಿತಾರಿ ಲಂಗ। ಜೋಜೋ॥ ಮುತ್ತು ಕೊಡು ಕೈಯ ಬಿಡು ಬತ್ತಾಸು ನೋಡು॥ ಅಮ್ಮ ಎಂದು ಕರೆದು ಬಿಡು ಮುದ್ದು ಮಾತಾಡು॥2॥ ಅಂಬೆಗಾಲಿಟ್ಟು ಬಿಡು ಬಾ ನನ್ನ ಚಿನ್ನ। ಕಾಲ್ಗೆಜ್ಜೆ ಕುಣಿಸಿ ಬಿಡು ನಗಿಸಿ ಬಿಡು ನನ್ನಾ॥ ಜೋಜೋ॥ ಹಾಡುವುವು ಹಕ್ಕಿಗಳು। ನೋಡು ಬಾ ಬೊಂಬೇ। ಓಡುವುವು ಚಿಟ್ಟೆಗಳು ಮುಟ್ಟದಿರು ಕೊಂಬೇ॥3॥ ಆಟಕಲಿ ಹಾಡು ಕಲಿ ಬಾ ಪುಟ್ಟ ಗೌರಿ। ಬಳಪ ಹಿಡಿ ಬರೆದು ಬಿಡು ಇನ್ನು ನನ್ನ ಬಂಗಾರ॥ ಜೋಜೋ॥ ಚಂದಕ್ಕಿ ಮಾಮನನು ನೀ ನೋಡು ಚಿನ್ನಾ। ಮೇಲೆ ಚುಕ್ಕೆಗಳೆಲ್ಲ ಕರೆಯುತಿವೆ ನಿನ್ನ॥4॥ ಅಣ್ಣಯ್ಯ ಬಂದಾಗ ಚಿಲ್ಪಾರಿ ಹೆಣ್ಣೇ। ಕೊಡಿಸುವರು ಮೋಟಾರು ಅಳಬೇಡ ಕಣ್ಣೇ॥ ಜೋ ಜೋ॥ ಬಿದ್ದು ಬಿಟ್ಟನೆಂದು ಹೆದರದಿರು ಮಗುವೇ। ಗಂಟೆಗಳು ಘಲುಕೆನಲು ನಾ ಓಡಿ ಬರುವೇ॥ ಲಾಲಿ॥ ಜೋಜೋ॥5॥

## ಹಾಡೊಂದ ಹಾಡುವೆ ನೀ ಕೇಳು

ಹಾಡೊಂದ ಹಾಡುವೆ ನೀ ಕೇಳು ಮಗುವೆ। ಬರಿದಾದ ಮನೆ ಬೆಳಗೆ ನೀನೆಂದು ಬರುವೆ॥ಪ॥ ಸೀಮಂತದಾನಂದ ನಾ ನೀಡಲಿಲ್ಲ। ನಿನಗಾಗಿ ಮಹಿಳೆಯರು ತಾ ಹಾಡಲಿಲ್ಲ। ಸಿರಿವಂತರಾ ಭೋಗ ನಿನಗಿಲ್ಲಿ ಇಲ್ಲ। ಸಿರಿಯಾಗಿ ನಿಧಿಯಾಗಿ ನೀ ಬರುವೆಯಲ್ಲ॥1॥ ನಿನ್ನೊಂದು ನುಡಿಮುತ್ತು ಸವಿ ಜೇನಿನಂತೆ। ಆ ಸುಖದೆ ನಾ ಮರೆವೆ ಈ ಬಾಳ ಚಿಂತೆ। ಅದ ಕೇಳೋ ಸೌಭಾಗ್ಯ ಈ ತಾಯಿಗಿಲ್ಲ। ಇವಳಾಸೆ ಆಕಾಂಕ್ಷೆ ನೀನಾದೆ ಎಲ್ಲ॥2॥

## ಹಾಯಿ ಹಾಯಿ ಹಾಯಿ (ತೊಟ್ಟಿಲು ತೂಗುವ ಹಾಡು)

ಹಾಯಿ ಹಾಯಿ ಹಾಯಿ ಯಾಯಿಽಽಽ। ಹಾಯಿ ಹಾಯಿ ಹಾಯಿ ಹಾಯಿಽಽಽ॥ ಯಾಕಳುವೆ ಎಲೆಕಂದ ಬೇಕಾದ್ದು ನಿನಗೀವೆ। ನಾಲ್ಕೆಮ್ಮೆ ಕರೆದ ನೊರೆ ಹಾಲು। ನಾಲ್ಕೆಮ್ಮೆ ಕರೆದ ನೊರೆಹಾಲು ಸಕ್ಕರೆ ನೀ ಕೇಳಿದಾಗ ಕೊಡುವೆನು॥ ಹಾಯಿಹಾಯಿ...॥1॥ ಯಾತಕಳುತಾನೆಂದು ಎಲ್ಲಾರೂ ಕೇಳ್ವಾರು। ಕಾಯದಾ ಹಾಲ ಕೆನೆ ಬೇಡಿ। ಕಾಯದಾ ಹಾಲ ಕೆನೆ ಬೇಡಿ ಕಂದಯ್ಯ। ಅತ್ತತ್ತು ಬಳಲಿ ಸೋರಗೀದ ॥ಹಾಯಿ ಹಾಯಿ॥2॥ ಅತ್ತಾರೆ ಅಳಲವ್ವ ಈ ಕೂಸು ನನಗಿರಲಿ। ಕೆಟ್ಟಾರೆ ಕೆಡಲಿ ಮನೆ ಕೆಲಸ। ಕೆಟ್ಟಾರೆ ಕೆಡಲಿ ಮನೆಗೆಲಸಽಽ ಕಂದಯ್ಯ। ನಕ್ಕು ನಗಿಸಲಿ ನಮಬಾಳ॥ ಹಾಯಿ ಹಾಯಿ...॥3॥ ಹಾಲ್ಬೇಡಿ ಹರಿದತ್ತ ನೀರ್ಬೇಡಿ ನಿಂದತ್ತ। ಮೊಸೆರ್ಬೇಡಿ ಕೆಸರ ತುಳಿದತ್ತ। ಮೊಸರ್ಬೇಡಿ ಕೆಸರ ತುಳಿದತ್ತ ಕಂದಯ್ಯ। ಹಸಿರಂಗಿ ಕೇಳಿ ಹಸಿದಾನೇ॥ಹಾಯಿ ಹಾಯಿ॥4॥ ಅತ್ತು ಕಾಡುವನಲ್ಲ ಮತ್ತೇ ಬೇಡುವನಲ್ಲ। ಎತ್ತಿಕೋ ಎಂಬ ಹಠವಿಲ್ಲ। ಎತ್ತಿಕೋ ಎಂಬ ಹಠವಿಲ್ಲ ನನ್ನ ಕಂದಯ್ಯ। ನಕ್ಕುನಗಿಸಲಿ ನಮಬಾಳ॥ ಹಾಯಿ ಹಾಯಿ..॥5॥ ಅತ್ತರ್ಯಾರಿಗೆ ಮುದ್ದು ಹೆತ್ತ ತಾಯಿಗೆ ಮುದ್ದು। ಅತ್ತೆಗೆ ಮುದ್ದು ಅತೀ ಮುದ್ದು। ಅತ್ತೆಗೆ ಮುದ್ದು ಅತೀ ಮುದ್ದು ನನ್ನಯ್ಯಾಽಽ ಹಣ್ಣಿನ ಮರಕೆ ಗಿಣಿಮುದ್ದು॥ಹಾಯಿ ಹಾಯಿ..॥6॥ ಮುದ್ದು ಮೂಲಂಗಿ ವಜ್ರದ ಕರಿಯಂಗಿ। ಮುದ್ದು ನನ್ನಮ್ಮ ತೊಡುವಂಗಿ। ಮುದ್ದು ನನ್ನಮ್ಮ ತೊಡುವಂಗಿಽ ತೊಡುವಂಗಿ ನಿದ್ದೆಗಳು ಬಂದು ಅಳುತ್ತಾನೆ॥ ಹಾಯಿ ಹಾಯಿ...॥7॥ ನಿದ್ದೆಗಳು ಬಂದಾವು ಬುದ್ಧಿಗಳು ತಿಳಿದಾವು। ಮುದ್ದಿನ ಮಾತು ಸೊಗಸ್ಯಾವು। ಮುದ್ದಿನ ಮಾತು ಸೊಗಸ್ಯಾವು ನಿದ್ದೆಗಳು ಬಂದು ಅಳುತ್ತಾನೆ॥ಹಾಯಿ ಹಾಯಿ॥8॥

### ಹಾಲನು ಕೊಡುತೆನ್ನ ಲೀಲೆಗೆ ನಲಿದಳು

ಹಾಲನು ಕೊಡುತೆನ್ನ ಲೀಲೆಗೆ ನಲಿದಳು। ತೋರಿದಳ್ ಯಾರೆನ್ನ ತಾಯಿ।।1।। ಓಡಿ ನಾ ಬೀಳೆ ತಾನೋಡಿ ಬಂದೆತ್ತಿ। ಮುದ್ದಾಡಿದಳ್ಯಾರೆನ್ನ ತಾಯಿ।।2।। ಲಾಲಿಸಿ ತೊಡೆಮೇಲೆನ್ನನು ಮಲಗಿಸಿ ಪಾಲಿಸಿದವಳ್ಯಾರು ತಾಯಿ।।3।।

## ಮಗು (೩)

### ಅಮ್ಮ ಅಮ್ಮಾ ಎಂದು — ರಾಗ: ಶಿವರಂಜಿನಿ

ಅಮ್ಮ ಅಮ್ಮಾ ಎಂದು ಕರೆಯುತಿಹೆನಮ್ಮಾ। ಕರಕರೆಯಿದೆಂದೆನದೆ ಓಡಿ ಬಾರಮ್ಮಾ।।ಪ।। ಯಾರ ದೋಷಗಳೆಷ್ಟು ನನಗೇಕೆ ಬೇಕು।। ನನ್ನ ದೋಷವ ತಿದ್ದಿ ನೀ ಸಲಹಬೇಕು।।1।। ಪಾಪಿಗಳನುದ್ಧರಿಪ ನೀ ದಯಾಸಿಂಧು। ನೀಡೆನಗೆ ಕರುಣೆಯಿಂ ಆ ಕೃಪೆಯ ಬಿಂದು।।2।। ತಾಯಿ ನೀನಿರುತಿರಲು ತಬ್ಬಲಿಯೆ ನಾನು। ವಾತ್ಸಲ್ಯಸುಧೆಯುಣಿಸಲಾರೆಯಾ ನೀನು।।3।। ಜ್ಞಾನ ಭಕ್ತಿ ವಿವೇಕ ವೈರಾಗ್ಯ ನೀಡು। ಎನ್ನ ಹೃನ್ಮಂದಿರದಿ ನಿತ್ಯ ನಲಿದಾಡು।।4।।

### ಅಮ್ಮ3 ನಮ್ಮ ತೋಳಿಗೆ — ರಾಗ:ಮೋಹನ

ಅಮ್ಮ ಅಮ್ಮ ಅಮ್ಮ ನಮ್ಮ ತೋಳಿಗೆ ರೆಕ್ಕೆ ಹಚ್ಚು। ಸೊಂಟಕೆ ಬೆಳ್ಳಿ ಪಟ್ಟಿ ಕಟ್ಟಿ ಹಕ್ಕಿ ಪುಚ್ಚ ಚುಚ್ಚು।।ಪ।। ಹಾರುತ್ತೇವೆ ರೆಕ್ಕೆ ಬಿಚ್ಚಿ ತೆಂಗಿನ ಮರಕೂ ಮೇಲೆ। ಜಗಲಿ ಮೇಲೆ ನಿಂತೇ ನಮಗೆ ಅಮ್ಮ ಟಾಟಾ ಹೇಳೆ।।1।। ಹಾಗೆ ಹಾಗೆ ಮೇಲೆ ಹೋಗಿ ಮುಟ್ಟುತ್ತೀವಿ ಮೋಡ। ತಿನ್ನುತ್ತೀವಿ ಯಾರೂ ಕೇಳದ ಚುಕ್ಕಿ ಹಾಡೋ ಹಾಡ।।2।। ತಿಂಗಳೂರಿನ ಅಂಗಳ ಸೇರಿ ಬೆಳ್ಳಿ ಮೊಲವನು ನೋಡಿ। ಹಿಡಿಯುತ್ತೀವಿ ಹಾರೋ ಬಣ್ಣದ ಜಿಂಕೆಯ ಹೇಗೋ ಮಾಡಿ।।3।। ಕೊಟ್ಟೇ ಕೊಡುವನು ಚಂದಮಾಮ ಕೆನ್ನೇ ತುಂಬಾ ಮುತ್ತು ಮುದ್ದಿಸಿ ಬೆಟ್ಟದಿ ತುದಿಗೆ ಇಳಿಸುವನು ಯಾರೂ ಇಲ್ಲದ ಹೊತ್ತು।।4।।

### ಅಮ್ಮಾ2 ಒಂದೇ ಒಂದು ಉಂಡೆ — ರಾಗ:ಹಂಸಧ್ವನಿ

ಅಮ್ಮಾ ಅಮ್ಮಾ ಒಂದೇ ಒಂದು ಉಂಡೆ ಕೊಡ್ತೀಯಾ? ನೆಂಚ್‌ಕೊಳ್ಳೋಕೆ ಜೊತೆಗೆ ಒಂದು ಚಕ್ಲಿ ಇಡ್ತೀಯಾ? ಅಮ್ಮಾ ನನಗೆ ಹಸಿವೆ ಇಲ್ಲ ಊಟ ಬೇಡಮ್ಮ। ಅದಕ್ಕೆ ಬದಲು ಎರಡೇ ಎರಡು ದೋಸೆ ಮಾಡಮ್ಮ। ಕ್ಲಾಸಿಗೆಲ್ಲ ನಾನೇ ಫಸ್ಟು ಎಲ್ಲ ಆಟದ್ಲಿ। ಇನ್ನೊಂದ್ ಸ್ವಲ್ಪ ಬೆಣ್ಣೆ ಹಾಕೇ ದೋಸೆ ಪ್ಲೇಟಲ್ಲಿ। ತುಂಬ ವೀಕಾಗಿದೀನಂತೆ ಮೇಡಂ ಹೇಳಿದರು। ತಿಂಡಿ ಸರಿಯಾಗ್ ತಿನ್ನೋಲ್ವಾಂತ ಮೆಲ್ಲಗೆ ಕೇಳಿದರು। ಮೇಡಂ ಮತ್ತೆ ಬಯ್ಯದ ಹಾಗೆ ತಿಂಡಿ ಮಾಡ್ಕೊಡೆ। ಇಲ್ಲ ಅಂದ್ರೆ ನಾಳೆ ಸ್ಕೂಲಿಗೆ ನೀನೇ ಹೋಗ್ಬಿಡೆ।।

### ಅಮ್ಮ2 ನಿನಗೆ ನಾನು — ರಾಗ:ಅಮೃತವರ್ಷಿಣಿ

ಅಮ್ಮ ಅಮ್ಮ, ನಿನಗೆ ನಾನು ನಲ್ಮೆ ಕಣ್ಮಣಿ। ಅಕ್ಕರೆಯಮ್ಮ ನನಗೆ ನೀನು ಅಮೃತವರ್ಷಿಣಿ।।ಪ।। ಅಮ್ಮ ಅಮ್ಮ, ನಿನಗೆ ನಾನು ಪ್ರೀತಿ ಅರಗಿಣಿ। ಅಕ್ಕರೆಯಮ್ಮ ನನಗೆ ನೀನು ಕಾವ್ಯಕಲ್ಯಾಣಿ।।ಅ.ಪ. ।।1।। ತೊದಲು ಮಾತಿನ ನನಗೆ ನೀನೆ ಬ್ರಹ್ಮನ ರಾಣಿ। ಒರಟುದನಿಯ ಕಂದಗೆ ನೀನೆ ವೀಣಾಪಾಣಿ।।1।। ನಡತೆ ಅರಿಯದ ನನಗೆ ನೀನೆ ಶ್ರೀ ಸದ್ಗುಣಿ। ಘನತೆ ತಿಳಿಯದ ನನಗೆ ನೀನೆ ಗುಣಗಳ ಗಣಿ।।2।। ಮಂದ ಬುದ್ಧಿಯ ನನಗೆ ನೀನೆ ಹಂಸವಾಹಿನಿ। ದಗ್ಧ ಹೃದಯದ ನನಗೆ ನೀನೆ ಹರ್ಷತರಂಗಿಣಿ। ಕುರುಡು ಕಣ್ಣಿನ ನನಗೆ ನೀನೆ ಜ್ಯೋತಿರ್ ಧಾರಿಣಿ। ದಿಕ್ಕು ತಪ್ಪಿದ ನನಗೆ ನೀನೆ ಮಾರ್ಗದರ್ಶಿನಿ।।3।।

### ಅಮ್ಮ ಎಂಬ ಮಾತಿಗಿಂತ — ರಾಗ: ದರ್ಬಾರಿಕಾನಡ

ಅಮ್ಮ ಎಂಬ ಮಾತಿಗಿಂತ ಬೇರೆ ಮಂತ್ರ ಎಲ್ಲಿದೆ। ಅದು ನೀಡುವ ಶಾಂತಿ ಕಾಂತಿ। ಯಾವ ತಾರೆ ರವಿಗಿದೆ ।।1।। ಹಾಲು ಕುಡಿಸಿ ಹೃದಯ ಬಿಡಿಸಿ ಪ್ರೀತಿ ಉಣಿಸಿ ಮನಸಿಗೆ। ಬಾಳ ತೇದು ಮಕ್ಕಳಿಗೆ ಬೆರೆದಳಲ್ಲ ಕನಸಿಗೆ ।।2।।

ಗಾಳಿಯಲ್ಲಿ ನೀರಿನಲ್ಲಿ ಹೂವು ಹಸಿರಿನಲ್ಲಿ। ಕಾಣದೇನು ತಾಯಬಿಂಬ ಕಾಯ್ವ ಕರುಣೆಯಲ್ಲಿ ।।3।। ಮರೆವೆ ಹೇಗೆ ಹೇಳೆ ತಾಯೆ ನಿನ್ನೀ ವಾತ್ಸಲ್ಯವಾ। ಅರಿವೆ ಹೇಗೆ ಹೇಳೆ ತಾಯೆ ನಿನ್ನ ಪ್ರೀತಿ ಎಲ್ಲೆಯ ।।4।।

**ಅಮ್ಮಾ ಎನ್ನುವ ಕರೆ ಚೆಂದ** **ರಾಗ:ಮಲಹರಿ**

ಅಮ್ಮಾ ಎನ್ನುವ ಕರೆ ಚೆಂದ। ಅದು .... ನೆಮ್ಮದಿ ನೀಡುವ ಮಕರಂದ। ಅಮ್ಮ ಇಲ್ಲದ ಅನಾಥ ಮಕ್ಕಳ। ದೇವನು ಕಾಯುವ ಒಲವಿಂದ।।ಪ।। ಕಂದನ ತೊದಲ್ನುಡಿ ಅಮ್ಮ ಅಮ್ಮ। ಕರುಳಿನ ಮಮತೆಯೇ ಅಮ್ಮ ಅಮ್ಮ। ಕಂಬನಿ ಒರೆಸಲು ಓಡೋಡಿ ಬರುವಾ। ಕರುಣೆಯ ಮೂರುತಿ ಅಮ್ಮ ಅಮ್ಮ।।1।। ತಾಳ್ಮೆಗೆ ತವರು ಅಮ್ಮ। ಬಾಳಿಗೆ ಬೆಳಕು ಅಮ್ಮ। ಮಾಡಿದ ತಪ್ಪುಗಳೆಲ್ಲವನು। ಕ್ಷಮಿಸುವ ದೈವವೇ ಅಮ್ಮ।।2।। ಭೂಮಿಗೆ ಹೆಸರು ಅಮ್ಮ ಅಮ್ಮ। ಪುನೀತ ನದಿಗಳು ಅಮ್ಮ ಅಮ್ಮ। ಸಂಕಟ ಬಂದ ವೇಳೆಯಲೆಲ್ಲರೂ। ಅರಿಯದೇ ಕರೆವುದು... ಅಮ್ಮ ಅಮ್ಮ।।3।।

**ಅಮ್ಮಾ ಬೇಕೇ ಬೇಕು ನಂಗೆ** **ರಾಗ: ದರ್ಬಾರಿ ಕಾನಡ**

ಅಮ್ಮಾ ಬೇಕೇ ಬೇಕು ನಂಗೆ ಚಂದ್ರ ಆಡೋಕೆ। ಇಲ್ಲಾಂದ್ರೆ ಬೀಳ್ತಿನಿ ನೋಡು, ಈಗ್ಲೆ ಅಂಗ್ಳಕ್ಕೆ।।ಪ।। ಚಂದ್ರ ನಂಗೆ ಸಿಗದೆ ಹೋದ್ರೆ... ಚಂದ್ರ ನಂಗೆ ಸಿಗದೆ ಹೋದ್ರೆ ಹಾಲ್ ಕುಡಿಯೋದ್ಬಿಡ್ತೀನಿ। ಮಲಗ್ಬಿಡ್ತೀನಿ.. ನಂಗೇನಂತೇ ಬೆಳೆಯೋದಿಲ್ಲ ಜುಟ್ಟು....।।1।। ಚಂದ್ರ ನಂಗೆ ಸಿಗದೆ ಹೋದರೆ ಚಂದ್ರ ನಂಗೆ ಸಿಗದೆ ಹೋದರೆ... ಅಪ್ಪನ ಮಗು ಆಗ್ತೀನಿ। ಅಮ್ಮ ನಿನ್ನ ಚಾಳಿ ಬಿಟ್ಟು ಅಪ್ಪನ ಜೋಡಿ ಕಟ್ತೀನಿ....।।2।। ಚಂದ್ರ ನಂಗೆ ಸಿಗದೆ ಹೋದರೆ ಅಪ್ಪಂಗೂನು (ಅಣ್ಣಂಗುನು) ಹೇಳ್ತೀನಮ್ಮಾ। ಬೇರೆ ಅಮ್ಮನ್ ತರೋಕೆ।।3।। ಸೂರು ಶ್ಯಾಮನಿಗೆ ... ಚಂದ್ರಮುಖಿಯನ್ನೇ .. ಸೂರು ಶ್ಯಾಮನಿಗೆ ... ಚಂದ್ರಮುಖಿಯನ್ನೆ... ತಂದು ಮದುವೆ ಮಾಡೋಣ। ಅಂದನು ಗೋಪಿ.. ನುಡಿದನು ಶ್ಯಾಮಾ.... ಮದುವೆಗ್ ಬೇಗ ಹೋಗೋಣ।।4।।

**ಅಮ್ಮಾ ನಿನ್ನ ಎದೆಯಾಳದಲ್ಲಿ** **ರಾಗ : ಮಲಯಮಾರುತ**

ಅಮ್ಮಾ ನಿನ್ನ ಎದೆಯಾಳದಲ್ಲಿ ಗಾಳಕ್ಕೆ ಸಿಕ್ಕ ಮೀನು। ಮಿಡುಕಾಡುತ್ತಿರುವೆ ನಾನು। ಕಡಿಯಲೊಲ್ಲೆ, ನೀ ಕರುಳ ಬಳ್ಳಿ। ಒಲವೂಡುತಿರುವಾ ತಾಯೇ। ಬಿಡದ ಭುವಿಯ ಮಾಯೆ।।1।। ನಿನ್ನ ರಕ್ಷೆಗೂಡಲ್ಲಿ ಬೆಚ್ಚಗೆ ಅಡಗಲಿ ಎಷ್ಟು ದಿನ। ದೂಡು ಹೊರಗೆ ನನ್ನ। ಓಡ ಕಲಿವೆ। ಒಳನೋಡ ತಿಳಿವೆ। ನಾ ಕಲಿವೆ ಊರ್ಧ್ವಗಮನ। ಓ ಅಗಾಧ ಗಗನ।।2।। ಮೇಲೆ ಹಾರಿ ನಿನ್ನ ಸೆಳೆತ ಮೀರಿ। ನಿರ್ಭರ ಸ್ಥಿತಿಗೆ ತಲುಪಿ। ಬ್ರಹ್ಮಾಂಡವನ್ನೇ ಬೆದಕಿ। ಇಂಧನ ತೀರಲು ಬಂದೇ ಬರುವೆನು। ಮತ್ತೆ ನಿನ್ನ ತೊಡೆಗೆ। ಮೂರ್ತ ಪ್ರೇಮದೆಡೆಗೆ।।3।।

**ಅಮ್ಮಾ ನಾನು ದೇವರಾಣೆ** **ರಾಗ: ದೇಶ್**

ಅಮ್ಮಾ ನಾನು ದೇವರಾಣೆ ಬೆಣ್ಣೆ ಕದ್ದಿಲ್ಲಮ್ಮ। ಎಲ್ಲಾ ಸೇರಿ ನನ್ನ ಬಾಯಿಗೆ ಬೆಣ್ಣೆಯ ಮೆತ್ತಿದರಮ್ಮ।।ಪ।। ನೀನೆ ನೋಡು ಬೆಣ್ಣೆ ಗಡಿಗೆ ಸೂರಿನ ನಿಲುವಲ್ಲಿ। ಹೇಗೆ ತಾನೆ ತೆಗೆಯಲಿ ಅಮ್ಮ। ನನ್ನ ಪುಟ್ಟ ಕೈಗಳಲ್ಲಿ।।1।। ಶ್ಯಾಮ ಹೇಳಿದ ಬೆಣ್ಣೆ ಮೆತ್ತಿದ ತನ್ನ ಬಾಯಿ ಒರೆಸುತ್ತಾ। ಬೆಣ್ಣೆ ಒರೆಸಿದಾ ಕೈಯ ಬೆನ್ನ ಹಿಂದೆ ಮರೆಸುತ್ತಾ।।2।। ಎತ್ತಿದ ಕೈಯ ಕಡಗೋಲನ್ನು ಮೂಲೆಲಿಟ್ಟು ನಕ್ಕಳು ಗೋಪಿ। ಸೂರದಾಸ ಪ್ರಿಯಶ್ಯಾಮನ ಮುತ್ತಿಟ್ಟು ನಕ್ಕಳು ಗೋಪಿ।।3।।

**ಅಮ್ಮ ನಿನ್ನ ಮರೆಯದಂತೆ** **ರಾಗ:ಚಕ್ರವಾಕ**

ಅಮ್ಮ ನಿನ್ನ ಮರೆಯದಂತೆ ನನ್ನನೊಮ್ಮೆ ಹರಸು ತಾಯೆ। ನಿನ್ನ ನೆನಪಿನಿಂದ ನಾನು ಎನಿತು ಧನ್ಯ।।ಪ।। ಇರುಳನೊಂದು ಹಗಲುಮಾಡಿ ದುಡಿದು ದಣಿದ ನಿನ್ನ ಬೆವರ ಬೆಲೆಗೆ। ಯಾವ ಸಿರಿಯು ಸಾಟಿ ನೀನೆ ದೇವರು।।1।। ದೊರೆಯೆ ಆದರೇನು ಧರೆಗೆ ತಾಯಿಗವನು ಮಗುವುತಾನೆ। ತೊರೆಯಬಾರದವಳ ನೆನಪ ಮನುಜ ಮನಗಳು।।2।। ತಾಯಿ ಋಣವು ತೀರಲುಂಟೆ ಜಾಣತನದ ಮಾತಿನಲ್ಲಿ। ಬಾಯಿ ನೂರು ಸಾಲದಮ್ಮ ನಿನ್ನ ಜಪಿಸಲು।।3।।

**ಅಮ್ಮ ನಿನ್ನ ನೆನಪಿನಲ್ಲಿ** **ರಾಗ: ಕಾಂಬೋದಿ**

ಅಮ್ಮ ನಿನ್ನ ನೆನಪಿನಲ್ಲಿ ಬೆಳದಿಂಗಳ ತಂಪಿದೆ। ನಿನ್ನ ನಲ್ಮೆ ನುಡಿಗಳಲ್ಲಿ ಚೈತನ್ಯದ ಹೊನಲಿದೆ।।ಪ।। ನಿನ್ನ ಪ್ರೀತಿ ಕಾಡುವಲ್ಲಿ ನಿತ್ಯ ಸ್ಮರಣೆ ಬಲವಿದೆ। ಬಾಳಹಾದಿ ನಡೆಯುವಲ್ಲೂ ನಿನ್ನ ಪ್ರೇಮದ ಗೆಲುವಿದೆ।।1।। ಅಮ್ಮಾ ನನ್ನ ಕಣ್ಣ ಮುಂದೆ ನಿಜದ ದೈವ ಎಂದೂ ನೀನು। ನೀನು ಹರಸಲುಂಟು ನನಗೆ ಅದೇ ಅನುಪಮ ಶ್ರೀರಕ್ಷೆ।।2।।

**ಅಮ್ಮ ನಿನ್ನ ತೋಳಿನಲ್ಲಿ ಕಂದ**

ಅಮ್ಮ ನಿನ್ನ ತೋಳಿನಲ್ಲಿ ಕಂದ ನಾನು। ನಿನ್ನ ಸಂಗ ಆಡಲೆಂದು ಬಂದೆ ನಾನು।।ಪ।। ಸಣ್ಣ ಸಣ್ಣ ಹೂವಿನಲ್ಲೂ ಕಂಡೆ ನೀನು। ಬಣ್ಣ ಬಣ್ಣದ ಚಿಟ್ಟೆಯಲ್ಲೂ ನೀನೇ ನೀನು। ರೆಕ್ಕ ಬಂದ ಹಕ್ಕಿ ಹಾಗೆ ಹಾರುವೆ ನಾನು। ಅಕ್ಕರೆಯ ತೋರಿ ಎನ್ನ ಅಪ್ಪು ನೀನು।।1।। ನೀನು ಇತ್ತ ಹಣ್ಣುಗಳೆ ಅನ್ನ ನನಗೆ। ನಿನ್ನ ಮಡಿಲಲ್ಲೇ ನನ್ನ ಹಾಸಿಗೆ। ಬೀಸಿ ಬಂದ ಗಾಳಿಯಲ್ಲೂ ನಿನ್ನ ಮಾಯೆ। ಹರಿಯುವ ನದಿಯಲ್ಲೂ ನಿನ್ನ ಛಾಯೆ ಅಮ್ಮಾ....।।2।।

**ಓ ಚೆಲುವಿನ ಮುದ್ದಿನ ಮಕ್ಕಳೇ** **ರಾಗ: ಖರಹರಪ್ರಿಯ**

ಓ..... ಚೆಲುವಿನ ಮುದ್ದಿನ ಮಕ್ಕಳೇ। ಮನೆ ಮನೆಯ ಅಂಗಳದಿ ಅರಳಿರುವಾ ಹೂವುಗಳೇ। ನಾಳೆದಿನ ನಾಡಿದನು ನಡೆಸುವರು ನೀವುಗಳೇ।।ಪ।। ತಂದೆ ತಾಯಿ ಹೇಳಿದ ರೀತಿ ನಡೆಯಲು ಬೇಕು। ಶಾಲೆಯ ಗುರುಗಳು ಕಲಿಸಿದ ಪಾಠವ ಕಲಿಯಲು ಬೇಕು।।1।। ದೊಡ್ಡವರಲ್ಲಿ ಭಕ್ತಿ ಗೌರವ ತೋರಲು ಬೇಕು। ನಡೆನುಡಿಯಲ್ಲಿ ಸತ್ಯವ ಎಂದೂ ಪಾಲಿಸ ಬೇಕು।।2।। ಸ್ನೇಹಿತರಲ್ಲಿ ಪ್ರೀತಿಯ ತೋರಿ ಸೋದರ ಭಾವದಿನೋಡಿ। ಸೋಮಾರಿಯಾಗದೆ ಕೊಟ್ಟಿಹ ಕೆಲಸವ ತಪ್ಪದೆ ಮಾಡಿ।।3।। ಯಾರೇ ಆಗಲಿ ಕಷ್ಟದಲ್ಲಿದ್ದರೆ ಸಹಾಯಹಸ್ತವ ನೀಡಿ। ಭೇದವ ತೊರೆದು ಬಾಳಿರಿ ಎಂದು ಎಲ್ಲರು ಒಂದು ಗೂಡಿ।।4।।

**ಓಡಿ ವಿಳೆಯಾಡು ಪಾಪ್ಪಾ**

ಓಡಿ ವಿಳೆಯಾಡು ಪಾಪ್ಪಾ... ನೀ। ಒಯ್ಯಿಂದಿರುಕ್ಕಲಾಗದು ಪಾಪ್ಪಾ।। ಕೂಡಿ ವಿಳೈಯಾಡು ಪಾಪ್ಪಾ...ಒರು। ಕುಳಂದೆಯ್ಯೆ ವೈಯಾದೆ ಪಾಪ್ಪ...।।1।। ಚಿನ್ನಂಜಿರು ಕುರುವಿ ಪೋಲೆ ನೀ। ತಿರಿಂದು ಪರಂದು ವಾ ಪಾಪ್ಪಾ। ವನ್ನ ಪರವೈಗಳೈ ಕಂಡು.. ನೀ। ಮನದಿಲ್ ಮಗಿಳ್ಚಿಕೊಳ್ಳು ಪಾಪ್ಪಾ।।2।। ಕಾಲೈ ಎಂಳುಂದ ವುಡನ್ ಪಡಿಪ್ಪು। ಓರೆಂಡ್ರೆಂಡ್ ಈರಂಡ್ನಾಲು ಮುವಿರೆಂಡಾರು ನಾಲ್ರೆಂಡ್ರು ಎಟ್ಟು।। ಕಾಲೈ ವಿಳುಂದವುಡನ್ ಪಡಿಪ್ಪು-ಪಿನ್ಬು। ಕನಿವು ಕೊಡುಕ್ಕುಂ ನಲ್ಲ ಪಾಟ್ಟು।।3।। ಸರಿಗಮ ಪದನಿಸ ನಿನಿದಪ ಮಗಮರಿ ಕಾಲೈ ಎಳುಂದವುಡನ್ ಪಡಿಪ್ಪು ಪಿನ್ಬು ಕನಿವು। ಕೊಡುಕ್ಕುಂ ನಲ್ಲಪಾಟ್ಟು। ಮಾಲೈ ಮುಳುದುಂ ವಿಳೈಯಾಟ್ಟು।।4।। ಚಡಗುಡು ಗುಡುಗುಡು ಗುಡುಗುಡು ಗುಡು ಗುಡು ಮಾಲೈ ಮುಳುಂದು ವಿಳೈಯಾಟ್ಟು ಎನ್ರು ವಳಕ್ಕ ಪಡುತ್ತಿಕೊಳ್ಳು ಪಾಪ್ಪಾ।।5।। ಪಾವಂ ಸೈದವರೈ ಕಂಡಾಲ್ ನಾಂ। ಭಯಂಗೊಳ್ಳು ಲಾಗಾದು ಪಾಪ್ಪಾ।। ಮೇದಿ ಮಿದುತ್ತುವಿಡು ಪಾಪ್ಪಾ - ಅವರ್। ಮುಗತ್ತಿಲ್ ಉಮುಯಿಳ್‌ಂದುವಿಡು ಪಾಪ್ಪಾ।।6।।

**ಕಣ್ಣಲ್ಲಿ ಕಂಬನಿಯಾದೆ**

ಕಣ್ಣಲ್ಲಿ ಕಂಬನಿಯಾದೆ, ನೆನಪುಗಳ ಸಾಗರವಾದೆ। ಮಮತೆಯ ಕಡಲಾದೆ। ಹೃದಯದ ಬಿಡಿತವಾದೆ। ನೋವಿನ ಆಗರವಾದೆ। ಸ್ಫೂರ್ತಿಯ ಚಿಲುಮೆಯಾದೆ। ಸಹನೆಯ ಶಿಖರವಾದೆ। ಮನೆ ಮನಗಳ ಅಚ್ಚಳಿಯದ ಬರಹವಾದೆ। ಕೊನೆಗೆ ಪಂಚಭೂತಗಳಲ್ಲಿ ಲೀನವಾದೆ। ನಮ್ಮನ್ನಗಲಿ ದೇವರಿಗೆ ಹತ್ತಿರವಾದೆ।।

**ಕಂದ ನಿನ್ನವಳಿವಳು** **ರಾಗ: ಶುಭಪಂತುವರಾಳಿ**

ಕಂದ ನಿನ್ನವಳಿವಳು ಕೈ ಬಿಡದಿರಮ್ಮಾ। ನೊಂದು ಬಂದಿಹೆನು ಹಾಲೂಡಿ ಪೊರೆಯಮ್ಮ।।ಪ।। ಕಂದಗಲ್ಲವೇ ನಿನ್ನ

ಪಾಲು, ನಿನ್ನೆದೆಗೇ ಅಮ್ಮ? ಕಂದನಲ್ಲವೇ ನಿನ್ನ ಜೀವದಾನಂದವಮ್ಮ? ಕಂದನನು ತೊರೆದು ಅನ್ಯರಾ ಮಗುವ ಮೋಹಮಾಡಿ। ಕಂದನೆಂದರೆ ಕರುಳು ಕಿಲಕಿಲನೆ ನಗದೆ ಹೇಳಮ್ಮಾ।।1।। ಹೆರರ ಮಕ್ಕಳ ಮೀರಿ ನಿನ್ನವಳು ಚೆಲುವಮ್ಮ। ನೀನು ಒಲಿದರೆ ಮುಗಿಲ ಸಮಕೆ ನಿಲುವೆನಮ್ಮ। ವಿಶ್ವವನೆ ಗೆಲಿದು, ಲೋಕವನೊಲಿಸಿ, ನಿನ್ನನ್ನೂ ಒಲಿಸಿ ನಾನೂ ನಲಿವೆನಮ್ಮಾ।।2।। ನಿನ್ನ ತೊಡೆಯೇರಿ ಕೊರಳಪ್ಪಿಕೊಳ್ಳುವೆನಮ್ಮ। ನಿನ್ನ ಕಂದನ ಬೇಡಿಕೆಯನೀಡೇರಿಸಿ ಸಲಹಮ್ಮ। ಮೊದಲೆನ್ನ ಕಣ್ತಣಿಯೆ ನೋಡಿ, ಮುದ್ದಿಸು।।3।। ಹೆಣ್ಣೆಂದಲ್ಲಗಳೆಯಬೇಡಮ್ಮ। ನಾ ನಿನ್ನೊಡಲ ಕುಡಿಯಮ್ಮ। ಬಾಳುಸಿರ ಕೊನೆಗಾಣಿಸುವ ಹಂಬಲವೇಕಮ್ಮ।।4।।

### ಗಂಡುಮಗು ಹುಟ್ಟಿತೆಂದು — ರಾಗ:ಬೃಂದಾವನಸಾರಂಗ

ಗಂಡುಮಗು ಹುಟ್ಟಿತೆಂದು ಹೆಮ್ಮೆಯಿಂದ ಪೇಳುತಲಿ ಭುಜಬೋರಿಡುವವರು ನಾವಲ್ಲವೇ? ಹೆಣ್ಣು ಮಗು ಹುಟ್ಟಿತೆಂದು ಗೋಳಿಡುತ ನಾವಿಂದು ತಲೆ ಕೆಳಗೆ ಮಾಡುವವರು ನಾವಲ್ಲವೇ?।।1।। ಹೊಸ ಬಟ್ಟೆ ಗಂಡಿಗೆ ಕೊಟ್ಟು ಹಳೇ ಬಟ್ಟೆ ಹೆಣ್ಣಿಗೆ ತೊಡಿಸಿ ತಾರತಮ್ಯ ಮಾಡುವವರು ನಾವಲ್ಲವೇ? ವರದಕ್ಷಿಣೆ ಹಿರಿಯುತಲಿ ಹೆಣ್ಣಿಗೆ ಖರ್ಚು ಏಕೆಂದು ಕಳ್ಳ ನೆವ ಹೇಳುವವರು ನಾವಲ್ಲವೇ?।।2।। ಗಂಡ ಹೆಂಡತಿಯ ಜೊತೆ ಬೇರೆ ಮನೆಗೆ ಹೋದನೆಂದು ಗೊಣಗುತ್ತ ಕೂಡುವವರು ನಾವಲ್ಲವೆ? ಹೆಣ್ಣು ಮಗು ಹುಟ್ಟಿತೆಂದು ಅದಲು ಬದಲು ಮಾಡುತ್ತ ಲಂಚವನು ನೀಡುವವರು ನಾವಲ್ಲವೇ?।।3।।

### ಚಿನ್ನ2 ಬೊಮ್ಮೈ ಇದು (ತಮಿಳು) — ರಾಗ: ಖರಹರಪ್ರಿಯ

ಚಿನ್ನ ಚಿನ್ನ ಬೊಮ್ಮೈ ಇದು ಸಿಂಗಾರ ಬೊಮ್ಮೈ। ಎನ್ನರುಮ್ಮೈ ತಾಯಾರು ಎನಕ್ಕು ತಂದ ಬೊಮ್ಮೈ।।1।। ಪೊಟ್ಟು ವೈತ್ತು ಪೂವೈ ವೆಚ್ಚಿ ಇರುಕ್ಕುಂ ಅಂದ ಬೊಮ್ಮೈ। ವಣ್ಣ ವಣ್ಣ ಆಡೈಗಳುಂ ಅಣಿಂದಿರುಕ್ಕುಂ ಬೊಮ್ಮೈ।।2।। ಕೀಕುಡುತ್ತಾಲ್ ನಡಕ್ಕುಂ ಬೊಮ್ಮೈ ಮಣಿ ಅಡಿತ್ತಾಲ್ ಸಿರಿಕ್ಕ್ಯುಂ ಬೊಮ್ಮೈ। ನಲ್ಲ ನಲ್ಲ ನಾಟ್ಟಿಯಂಗಳ್ ಆಡುಂ ಪಾಡುಂ ಎನ್ನರುಮ್ಮೈ ಬೊಮ್ಮೈ।।3।।। ಅಮ್ಮ ತಂದ ಬೊಮ್ಮೈ ಇದೈ ಸುಮ್ಮಾ ತರುವೇನೋ। ಸುಟ್ರಿ ಸುಟ್ರಿ ವಂದಾಲುಂ ಸುಮ್ಮಾ ತರಮಾಟ್ಟೇನ್ ಎನ್ರುಂ ತರಮಾಟ್ಟೇನ್।।4।।

### ಚಿಕ್ಕ2 ಬೊಂಬೆ ಚಿತ್ರವಾದ

ಚಿಕ್ಕ ಚಿಕ್ಕ ಬೊಂಬೆ ಚಿತ್ರವಾದ ಬೊಂಬೆ। ಅಮ್ಮ ನನಗೆ ತಂದುಕೊಟ್ಟ ಅಂದವಾದ ಬೊಂಬೆ।।1।। ನನ್ನಂತೆ ಕೈಯಿ ನನ್ನಂತೆ ಕಾಲು। ನನ್ನ ಹಾಗೆ ಮೂಗು ಕಿವಿ ಬಲು ರಮ್ಯವಾದ ಬೊಂಬೆ।।2।। ಲಂಗ ಗಿಂಗ ತೊಡಿಸಿ ಅದಕೆ ಶೋಕುಮಾಡಿ। ಇರಿಸುವೆ ಸಾದಹಚ್ಚಿ ಹೂವಮುಡಿಸಿ ಕಣ್ಣಿಗೆ ಕಪ್ಪನು ಹಚ್ಚುವೆ।।3।। ಕೀಲು ಕೊಟ್ಟರೆ ನಡೆವುದದು ಬಿರಾ ಬಿರಾ ಎಂದು ಜೋಗುಳವ ಪಾಡಿ ನಾ ನಿದ್ರೆ ಮಾಡಿಸುವೆ।।4।।

### ಚಿನ್ನದ ಒಡವೆಗಳು ಏತಕೆ — ರಾಗ: ಪುನ್ನಾಗವರಾಳಿ

ಚಿನ್ನದ ಒಡವೆಗಳು ಏತಕೆ ಅಮ್ಮ। ತೊಂದರೆ ಕೊಡುವುವು ಬೇಡಮ್ಮ। ಬಣ್ಣದ ಬಟ್ಟೆಗಳು ಏತಕೇ ಅಮ್ಮ। ಮಣ್ಣಿನೊಳು ಆಡಲು ಬಿಡವಮ್ಮ।।1।। ಚೆಂದಕೆ ಚೆಂದಕೆ ಎನ್ನುವೆ ಅಮ್ಮ। ಚೆಂದವು ಯಾರಿಗೆ ಹೇಳಮ್ಮ। ನೋಡುವಗೆ ಚಿನ್ನವು ಆನಂದ। ಆಡುವ ಎನಗದು ಬಲುಚಂದ।।2।। ನನ್ನೀ ಶಿಶುತನ ನಿನ್ನೀ ತಾಯ್ತನ। ಎರಡೇ ಒಡವೆಗಳೆಮಗಮ್ಮ। ನಾ ನಿನಗೆ ಒಡವೆಯು ನೀ ನನಗೆ ಒಡವೆಯು। ಬೇರೆಯ ಒಡವೆಗಳೇಕಮ್ಮ।।3।।

### ಜನುಮವ ನೀಡಿರುವೆ ಎದೆ — ರಾಗ:ಶಿವರಂಜನಿ

ಜನುಮವ ನೀಡಿರುವೆ ಎದೆ ಹಾಲನು ಎರೆದಿರುವೆ। ಲಾಲಿಯ ಹಾಡಿರುವೆ ನಿನ್ನ ಮಡಿಲಲಿ ಬೆಳೆಸಿರುವೆ। ಸವಿ ಅಕ್ಕರೆ

ತೋರಿರುವೆ ನೀ ನೋವನು ನುಂಗಿರುವೆ। ಸಮನಾರು ತಾಯ ಪ್ರೀತಿ ಮುಂದೆ ಏಳು ಲೋಕದಿ॥1॥ ಅನ್ನ ತಿನ್ನದೆ ಅಳಲು ನಾನು ಬಗಲಲ್ಲಿ ತಬ್ಬಿಕೊಂಡು। ಚಂದಮಾಮನನ್ನು ತೋರಿ ತುತ್ತು ಉಣಿಸಿದೆ। ನನ್ನ ಜೀವದಾತೆ ಮೊದಲ ಗುರುವು ನೀನೆ। ತೊದಲು ಮಾತನಾಡೆ ನಾನು ತಿದ್ದಿ ಕಲಿಸಿದೆ॥2॥ ನಿನ್ನ ಮಮತೆಗೆ ಎಲ್ಲೆಯು ಇಲ್ಲ ಋಣ ತೀರಿಸೋ ಮಾರ್ಗವೆ ಇಲ್ಲ। ಪಣಕಟ್ಟುವೆ ಉತ್ತರ ಇಲ್ಲ। ಹಾಗಿದ್ದರು ದೇವರೆ ಬಲ್ಲ। ನಿನ್ನ ರಕ್ತಮಾಂಸ ಪಡೆದ ಬೊಂಬೆ ನಾನು ತಾಯಿಯೆ॥3॥ ಅಂದು ನನ್ನ ಜಗಕೆ ತರಲು ಸಾವಿನೊಡನೆ ಸೆಣಸಿದೆ ನೀನು। ನಿನ್ನ ಪಾದರಕ್ಷೆಯಾದರು ಋಣವು ತೀರದು। ಇಂದು ಜೀವದಾನ ಕಾಯ್ದೆ ನನ್ನ ಪ್ರಾಣ। ನಿನ್ನ ಪ್ರಾಣವನ್ನು ನೀನು ಪಣವ ಒಡ್ಡಿದೆ॥4॥ ಎದೆ ಬಿರಿದಿದೆ ನೋವಲಿ ಅಮ್ಮ। ಕಿಡಿ ಸಿಡಿದಿದೆ ರೋಷದಿ ಅಮ್ಮ। ಸದೆ ಬಡಿಯುವೆ ವೈರಿಯ ಅಮ್ಮ। ನಿನ್ನ ಸೇವೆಯ ಮಾಡುವೆನಮ್ಮ ಜನ್ಮ ಜನ್ಮ ನಿನ್ನ ಒಡಲ ಸೇರೋ ಆಸೆ ದೈವವೆ॥5॥

**ತಾಯಿ ನಿನ್ನ ಉಪಕಾರವನ್ನು** **ರಾಗ: ಬೇಹಾಗ್**

ತಾಯಿ ನಿನ್ನ ಉಪಕಾರವನ್ನು ಮರೆಯೆನೆಂದು ನಾನು। ನಿನ್ನ ಮೋಹ ಮಮತೆಯನ್ನು ಬಣ್ಣಿಸಲು ಸಾಧ್ಯವೇನು॥ಪ॥ ಒಂಭತ್ತು ತಿಂಗಳು ಒಡಲಭಾರ ತಾಪದಲ್ಲಿ। ನೊಂದು ಬೆಂದು ಬಳಲುತ ನೀನು ಪಡೆದೆ ನನ್ನ ಜನ್ಮವನ್ನು। ನಾನು ಹುಟ್ಟುವಾಗ ನಿನ್ನ ಕಷ್ಟವೆಷ್ಟು ತಾಯಮ್ಮ। ನನ್ನ ಜನ್ಮದೊಂದಿಗೆ ನಿನ್ನ ಪುನರ್ಜನ್ಮವಾಯಿತಮ್ಮ। ಮತ್ತೆ ಹುಟ್ಟಿ ಬಂದೆಯಮ್ಮ॥1॥ ಬಾಣಂತನದಿ ನಿಮ್ಮ ಜನ್ಮ ರಕ್ತ ನದಿಯು ಆಯಿತಮ್ಮ। ಆ ನಿಮ್ಮ ನೋವು ನಲಿವು ಲೋಕದಲ್ಲಿ ಯಾರಿಗಮ್ಮ। ಮಾಂಸಮುದ್ದೆಯಾದ ನನ್ನ ತಿದ್ದಿತೀಡಿ ಬೆಳಸಿದೆಯಮ್ಮ। ಕರುಣ ತೋಳತೊಟ್ಟಿಲಲ್ಲಿ ತೂಗಿ ಜೋಗುಳ ಹಾಡಿದೆಯಮ್ಮ। ಹಾಡಿ ಮೈ ಮರೆತೆಯಮ್ಮ॥2॥ ದೃಷ್ಟಿದೋಷ ಬಾರದಂತೆ ರಕ್ಷ ಬಂಧನ ಕಟ್ಟಿದೆಯಮ್ಮ। ಕಪ್ಪು ಚುಕ್ಕೆ ಕೆನ್ನೆಗೆ ಇಟ್ಟು ಜೇನು ಮುದ್ದು ಕೊಟ್ಟೆಯಮ್ಮ। ರೋಗರುಜಿನ ಬಾರದಂತೆ ನೋಡಿ ನಂಜು ಕುಡಿದೆಯಮ್ಮ। ನನ್ನ ಪ್ರಾಣ ನೀನೇ ಆಗಿ ನಿತ್ಯ ಕಾಲಕಳೆದೆಯಮ್ಮ ಜೋಪಾನ ಮಾಡಿದೆಯಮ್ಮ॥3॥ ಅಳುವ ದನಿಯ ಕೇಳಿದೊಡನೆ ಅವಸರವಾಗಿ ಬಂದೆಯಮ್ಮ। ಎತ್ತಿ ಎದೆಗೆ ಅವಚಿಕೊಂಡು ಅಮೃತವನ್ನು ಕುಡಿಸಿದೆಯಮ್ಮ। ಆಡಿ ದಣಿದು ಬಂದ ನನ್ನ ಅಂಗಾಲ ತೊಳೆದೆಯಮ್ಮ। ಹಸಿದ ಬಾಯಿಗೆ ಅನ್ನವನಿಟ್ಟು ಆನಂದಪಡಿಸಿದೆಯಮ್ಮ। ಅನ್ನಪೂರ್ಣೆ ಆದೆಯಮ್ಮ॥4॥ ಬಾಲಲೀಲೆ ನೋಡಿ ನಿಮ್ಮ ಕರುಣೆ ಕಣ್ಣು ತುಂಬಿತಮ್ಮ। ನಿನ್ನ ಹೃದಯಪೂರ್ಣ ಶಕ್ತಿ ನನ್ನ ಬಾಳಿಗೆ ಇಟ್ಟೆಯಮ್ಮ। ನನ್ನ ವಿದ್ಯೆ ಬುದ್ಧಿಗಳಿಗೆ ಮೊದಲ ಗುರು ನೀನೇ ಅಮ್ಮ। ನಿನ್ನ ಶುದ್ಧ ಪ್ರೀತಿ ನನ್ನ ಕೀರ್ತಿ ಕವಚ ವಾಯಿತಮ್ಮ। ನಿನ್ನ ಹರಕೆ ದೊಡ್ಡದಮ್ಮ॥5॥ ಲೋಕ ಪೂಜ್ಯೆಯಾದರೇನು ನಿನ್ನ ಸ್ಮರಣೆಮಾಡಲಮ್ಮ। ವೇದಶಾಸ್ತ್ರವನರಿತರೇನು ನಿನ್ನ ಮರೆಯಬಾರದಮ್ಮ। ಹೆತ್ತ ನಿನ್ನ ಋಣವ ತೀರಿಸಲು ಎಷ್ಟು ಜನ್ಮ ಸಾಲದಮ್ಮ। ಭೂಮಿಗಿಂತ ನಿನ್ನ ತೂಕ ಹೆಚ್ಚು ನೋಡು ತಾಯಮ್ಮ। ಮುದ್ದು ಬಸವ ಸಾಕ್ಷಿಯಮ್ಮ॥6॥

**ತಾಯಿ ನೀನು ದೇವರಂತೆ**

ತಾಯಿ ನೀನು ದೇವರಂತೆ। ನನ್ನ ಪೋಷಣೆ ಮಾಡಿದೆ। ಬಾಲ ಬುದ್ಧಿಗೆ ದಾಸನಾಗಿ। ಮನಕೆ ಬಂದುದ ಬೇಡಿದೆ। ಜನನಿ ತಾನೆ ಮೊದಲ ಗುರುವು। ಎಂಬ ಪಾಠವ ಹೇಳಿದೆ। ನ್ಯಾಯ ನೀತಿ ಧರ್ಮ ಬೋಧೆಯ ಮೆಲ್ಲನೆನಗೆ ಉಸುರಿದೆ॥

**ತಾರೆ ಸಾವಿರ ಸೇರಿ** **ರಾಗ:ಹಿಂದೂಸ್ಥಾನಿಕಾಪಿ**

ತಾರೆ ಸಾವಿರ ಸೇರಿ ಚಂದಿರಗೆ ಸಾಟಿಯೇ। ತಾಯಿ ಎಂಬ ದೈವಕೆ ಬೇರಾರು ಸಾಟಿಯೇ॥ಪ॥ ನವಮಾಸ ಧರಿಸಿ... ಹಾಲನು ಉಣಿಸಿ। ಬೆಳಸಿದಳಾ ಮಾತೆ। ಕಣ್ಣೀರ ಒರೆಸಿ... ನೋವನು ಮರೆಸಿ। ನಗಿಸಿದಾ ದೇವತೆ। ಅವಳೇ ನಮ್ಮ ಜೀವದಾತೆ॥1॥ ಮಮತೆಯ ಮಡಿಲು..... ಕರುಣೆಯ ಕಡಲು। ತೋರಿದಳೂ ಪ್ರೀತಿಯ। ಹಗಲು ಇರುಳು..... ಮನದಲ್ಲೇ ಇಹಳು। ಬೆಳಗುತೇ ಜ್ಯೋತಿಯ। ಮರೆಯುವರೇ ಆ ಪ್ರೇಮನಿಧಿಯ.....॥2॥

**ತಿನ್ನಲಿಲ್ಲ ಅಮ್ಮ ತಿನ್ನಲೇ ಇಲ್ಲ** **ರಾಗ: ಸಿಂಧುಭೈರವಿ-ಆದಿತಾಳ**

ತಿನ್ನಲಿಲ್ಲ ಅಮ್ಮ ತಿನ್ನಲೇ ಇಲ್ಲ ಬೆಣ್ಣೆಯ ಚೂರೂ ತಿನ್ನಲಿಲ್ಲ ।।ಪ।। ಹಾಲಿನ ಗಡಿಗೆ ನೋಡೇ ಇಲ್ಲ ಮೊಸರಿನ ಮಡಿಕೆ ಕಂಡೇ ಇಲ್ಲ । ಬೆಕ್ಕೊಂದು ಕೆಡವಿತ್ತು ಮೇಲಿಂದ ಗಡಿಗೆಯ ಮೈಮೇಲೆ ಚೆಲ್ಲಿತು ಹಾಲು ಮೊಸರೆಲ್ಲಾ।।1।। ಊರಾ ಜನರೆಲ್ಲಾ ಆಗದವರೆನಗೆ ತಂದರು ದೂರನ್ನ ನಿನ್ನಯ ಕಿವಿಯೆಡೆಗೆ। ದಮ್ಮಯ್ಯ ಎನ್ನುವೆ ಬೇಡುವೆ ನಿನ್ನ ಬಿಡು ಎನ್ನ ಕಿವಿಯನ್ನು ಕೊಡು ಎನಗೆ ಬೆಣ್ಣೆಯನ್ನು।।2।।

**ದೇವರ ಗೂಡಿನ ದೀಪದ ಹಾಗೇ** **ರಾಗ:ಖರಹರಪ್ರಿಯ**

ದೇವರ ಗೂಡಿನ ದೀಪದ ಹಾಗೇ ಅಮ್ಮನ ಕಣ್ಣೂ ಕೂಡ। ಅಮ್ಮ ತಬ್ಕೊಂಡು ಮುದ್ ಮಾಡಿದ್ರೆ ತಿಂದ್ಹಾಗಿರುತ್ತೆ ಫೇಡ।।1।। ಅಮ್ಮ ಯೋಚ್ನೆ ಮಾಡ್ತ ಇದ್ರೆ ಮೋಡ ಮುಚ್ಚಿದ ಸಂಜೆ। ಕುಲುಕುಲು ನಗ್ತ ಮಾತಾಡಿದ್ರೆ ಬೆಳಗಿನ ಬಿಸಿಲಿದ್ದಂಗೆ।।2।। ಅಮ್ಮ ಬೈದ್ರೂ ಇಷ್ಟ ನಂಗೆ ಸುಳ್ಳೇ ಅಳ್ತೀನಿ। ಬೇಜಾರಾಯ್ತು ನನ್ ಚಿನ್ನಂಗೆ ಅನ್ನೋದ್ ಕಾಯ್ತೀನಿ।।3।। ಆಗ್ಲೂ ಅಳ್ತ ಹತ್ರ ಹೋದ್ರೆ ಅಮ್ಮ ತಬ್ಕೋತಾಳೆ। ಕೆನ್ನೆ ಸವರಿ ತಿಂಡಿ ತಿನ್ಸಿ ಎಷ್ಟೊಂದು ಮುದ್ ಮಾಡ್ತಾಳೆ।।4।। ಅಮ್ಮ ಬೈದ್ರೆ ಒಳ್ಳೇದೇನೇ ತಿಂಡಿ, ಮುದ್ದು ಗಟ್ಟಿ। ಅಪ್ಪಂದ್ ಮಾತ್ರ ಬಲೇ ಕಷ್ಟ ತಿನ್ಬೇಕ್ ಏನ್ಬೇಕ್ ಏಟು ಬಿಟ್ಟಿ।।5।।

**ನಮಗೆ ಜನುಮ ನೀಡಿದವಳು** **ರಾಗ: ಕಾಪಿ**

ನಮಗೆ ಜನುಮ ನೀಡಿದವಳು ಹಾಲನುಣಿಸಿ ಹಾಡಿದವಳು। ನೀತಿ-ನುಡಿಯ ತೀಡಿದವಳು, ಯಾರು? ಅಮ್ಮ।।1।। ನಮ್ಮ ಕಾಟ ಸಹಿಸಿಕೊಂಡು, ನಮ್ಮ ಪಕ್ಷ ವಹಿಸಿಕೊಂಡು। ನಮ್ಮ ತಪ್ಪು ಕ್ಷಮಿಸುವವಳು, ಯಾರು? ಅಮ್ಮ।।2।। ನಮ್ಮ ಆಟ-ಪಾಠವನ್ನು ಪ್ರಗತಿ-ಕೀರ್ತಿ ಮಾರ್ಗವನ್ನು। ಕಂಡು ಹಿಗ್ಗುವವಳು ಸದಾ ಯಾರು? ಅಮ್ಮ।।3।। ಕಣ್ಣಿನಲ್ಲಿ ಕರುಣೆತುಂಬಿ ಮನಸಿನಲ್ಲಿ ಮಮತೆ ತುಂಬಿ। ಸವಿಯ ನುಡಿಯನಾಡುವವಳು ಯಾರು? ಅಮ್ಮ।।4।। ಅಮ್ಮ ಎಂಬ ಪದವು ಸರಳ ಉಂಟು ಅದಕೆ ಬೆಲೆಯು ಬಹಳ ನಮ್ಮ ಕಷ್ಟ ಸುಖದ ನೆಂಟರಾರು? ಅಮ್ಮ।।5।। ನಮ್ಮ ದೊಡ್ಡ ದೈವ ಯಾರು? ನಮ್ಮ ದೊಡ್ಡ ಧರ್ಮ ಯಾರು? ನಮ್ಮ ದೊಡ್ಡ ನಿಧಿಯು ಯಾರು? ಅವಳೆ ಅಮ್ಮ।।6।।

**ನಿದ್ದೆಯೊಳಿದ್ದೆನೋ ಎಚ್ಚರವಿದ್ದೆನೋ** **ರಾಗ: ತಿಲಂಗ್-ಏಕತಾಳ**

ನಿದ್ದೆಯೊಳಿದ್ದೆನೋ ಎಚ್ಚರವಿದ್ದೆನೋ ನೆನಸೋ ಕನಸೋ ಎಂತರಿವೆ?। ವರುಷವೆ ತುಂಬದ ಕೂಸಾಗಿರೆ ನಾ ಎನಗಿದ್ದಿತು ಹಿರಿಯನ ಪರಿವೆ।।1।। ಎಳೆಯನ ಮುದ್ದಿಡುತಿದ್ದಳು ತಾಯಿ ತುಟಿಗಿಳಿಯುತ್ತಿರೆ ಕಣ್ಣೀರು। ತುಟಿ ಜೇನಿನ ಸಿಹಿಗುಪ್ಪಿನ ರುಚಿ ಬರೆ ಆ ರುಚಿಯನು ಬಣ್ಣಿಪರಾರು।।2।। ಒಲಿದನುಪೇಕ್ಷೆಯೊ ಕರುಬಿನ ಭಿಕ್ಷೆಯೊ ನೀನಲ್ಲದೆ ನನಗಿಲ್ಲೆಂಬ। ಅನನ್ಯ ಶರಣೆಯ ಭಾವದೊಳಬ್ಬೆಯು ನನ್ನನು ಮುದ್ದಿಟ್ಟಳು ತುಂಬ।।3।। ಹೊಳಪಿನ ಕಣ್ಣಿನ ಹೊಳಪೇ ಹರಿವೊಲು ಮುತ್ತಿನ ಹರಳೇ ಕರಗಿದೊಲು। ನೋವಿನ ಪದದಿಂದಿಳಿಯುವ ಗಂಗೆಯೆ ಕಂದನ ತುಟಿಯೊಳು ತಂಗುವೊಲು।।4।। ಮುದ್ದಿನೊಳಿಳಿವಾ ಕ್ಷಾರದ ನೀರನು ಕೆನ್ನೆಯ ತಟ್ಟುತ ಚಪ್ಪರಿಸಿ ಕುಡಿದೆನು। ತೀಗುತ ಜನನಿಯ ಮೊಗದೊಳು ಮಂಗಳ ಮೃದುಹಾಸವ ತರಿಸಿ।।5।। ನೆನಸಿನಾಳದಿಂ ಕನಸಿಗೆ ಸುಳಿದೀ ಅನುಭೂತಿಯ ಚಿಂತಿಸುತಿರುವೆ। ನಗೆ ಹೊಗರಿಟ್ಟಾ ಕಂಬನಿ ಯೆದೆವಾಲೀಂಟುತ ಬಳೆದನು ಎಂದರಿವೆ।।6।।

**ನಿನ್ನ ಬೆಚ್ಚನೆಯ ಮಡಿಲಲ್ಲಿ**

ನಿನ್ನ ಬೆಚ್ಚನೆಯ ಮಡಿಲಲ್ಲಿ ತಲೆಯಿಟ್ಟು ಕಾಣಬೇಕು ಕನಸು, ಇದರಿಂದ ತೃಪ್ತಿಯಾಗುವುದು ನನ್ನ ಪುಟ್ಟ ಮನಸ್ಸು, ನಿನ್ನ ಮಡಿಲಲ್ಲಿ ಕಂದಮ್ಮನಾಗಿ ಬೆಳೆದಿದ್ದ ಬಾಂಧವ್ಯವೇ ಸೊಗಸು, ಈ ಆತ್ಮದ ಭಾವುಕಗಳ ಭಾರವನ್ನು ಧರಿತ್ರಿಯಾಗಿ ಸಹಿಸು, ಕನಸಲ್ಲಾದರೂ ಒಂದು ಈ ನಿನ್ನ ಕಂದಮ್ಮನನ್ನು ಮುದ್ದಿಸು, ಹೋಲಿಕೆಯಲ್ಲಿ ಪ್ರತಿಬಿಂಬವಾಗಿರುವ ನಾನೇ ನಿನ್ನ ಕೂಸು.

### ನಿನ್ನ ಪಯಣ ಹಿಂತಿರುಗಿ

ನಿನ್ನಪಯಣ ಹಿಂತಿರುಗಿ ಬಾರದ ಊರಿನತ್ತ, ನಿನ್ನವರಾಗಿ ನಾವಿಲ್ಲ ಈಗ ನಿನ್ನ ಸುತ್ತಮುತ್ತ, ದಿನೇದಿನೇ ಬೆಳೆಯುತ್ತಿದೆ ನಿನ್ನ ನೆನಪುಗಳಹುತ್ತ। ನೀನಾದೆ ಈಗ ಕಂಬನಿಯ ಮೊತ್ತ। ಇನ್ನಾರು ಕೊಡುವರು ಮಾಸಲಾಗದ ಪ್ರೀತಿಯ ಮುತ್ತ ಇನ್ನಾರು ತಿನಿಸುವರು ಅಕ್ಕರೆಯ ಕೈ ತುತ್ತು, ನಿನ್ನಗಲಿಕೆಯಿಂದ ಒಡೆದು ಹೋಯಿತು ಅಮ್ಮ ನನ್ನ ಚಿತ್ತ!!!

### ಪಿಲ್ಲಲ್ಲಾರಾ...ಪಾಪಲ್ಲಾರ...

ಪಿಲ್ಲಲ್ಲಾರಾ...ಪಾಪಲ್ಲಾರ... ರೇಪಟಿ ಭಾರತ ಪೌರುಲ್ಲಾರ। ಪೆದ್ದಲಕೆ ಒಕದಾರಿನಿ ಚೂಪೆ। ಪಿಲ್ಲಲ್ಲಾರಾ ಪಿಲ್ಲಲ್ಲಾರಾ॥ಪ॥ ಮೀ ಕುನ್ನುಲ್ಲೋ ಪುನ್ನಮಿ ಜಾಬಿಲಿ। ಉನ್ನಾಡು ಉನ್ನಾಡು ಪೊಂಚುನ್ನಾಡು। ಮೀ ಮನಸ್ಸುಲ್ಲೋ ದೇವುಡು ಕೊಲುವೈ। ಉನ್ನಾಡು ಉನ್ನಾಡು ಆತಡುನ್ನಾಡು। ಭಾರತ ಮಾತಕು ಮುದ್ದುಲ ಪಾಪುಲು। ಮೀರೇಲೆ ಮೀರೇಲೆ ಅಮ್ಮಕು ಮೀಪೈ ಅಂತೆಲೇನಿ। ಪ್ರೇಮೇಲೆ ಪ್ರೇಮೇಲೆ ಪಿಲ್ಲಲ್ಲಾರ ಭಾರತ ವೀರುಲ್ಲಾರ॥1॥ ಭಾರತ ದೇಸಂ ಒಕಟೇ ಇಲ್ಲು। ಭಾರತ ಮಾತಕು ಮೀರೇ ಕಳ್ಳು। ಮೀರೇ ಕಳ್ಳು ಮೀರೇ ಕಳ್ಳು। ಜಾತಿ ಪತಾಕಂ ಪೈಕೆಗೆರೇಸಿ। ಜಾತಿ ಗೌರವಂ ಕಾಪಾಡಂಡಿ॥ ಬಡಿಲೊ ಬಯಟಾ ಅಂತಾ ಕಲಿಸಿ। ಭಾರತೀಯುಲ್ಲೈ ವೆಲಗಂಡಿ ಕನ್ಯಾಕುಮಾರಿಕಿ ಕಾಶ್ಮೀರಾನಿಕಿ। ಅನ್ಯೋನ್ಯತನು ಪೆಂಚಂಡಿ। ವೀಡನಿಬಂಧಂ ವೇಯಂಡಿ ಪಿಲ್ಲಲ್ಲಾರ... ...॥2॥

### ಪುಟ್ಟ2 ಹೆಜ್ಜೆ ಇಟ್ಟು ಪಾಪು — ರಾಗ: ಅಭೇರಿ

ಪುಟ್ಟ ಪುಟ್ಟ ಹೆಜ್ಜೆ ಇಟ್ಟು ಪಾಪು ಬಂದಿತು। ಗಿಲಕು ಗಿಲಕು ಗೆಜ್ಜೆ ಸದ್ದು ಕಿವಿಯ ತುಂಬಿತು। ಏನೋ ಸಿಕ್ಕಿತು ಏಕೆ ನಕ್ಕಿತು ನಕ್ಕಿತು ನಕ್ಕಿತು॥1॥ ಬಾಬಾ ಗುಬ್ಬಿ ಎಂದು ಕೈಯ್ಯ ಮುಂದೆ ತಂದು। ಬೆಲ್ಲ ತೋರಿಸುತ್ತ ಸೊಂಟ ತಿರುವುತ್ತ। ಬಾ ಗುಬ್ಬಿ ಬಾ ಎಂದಿತು॥2॥ ಸುಳ್ಳೆ ಪಳ್ಳೆ ಅತ್ತುಗಿತ್ತು ಕಣ್ಣ ತಿಕ್ಕುತ್ತಾ। ಆಗ ಈಗ ನೆಕ್ಕಿ ಬೆಲ್ಲ ಪಾಪ ಬಿಕ್ಕುತ। ಬಾ ಗುಬ್ಬಿ ಬಾ ಎಂದಿತು॥3॥ ಮಹಡಿ ಮೇಲೆ ಹೋಗಿ ಚಂದಮಾಮನ್ ಕೂಗಿ। ಮೂವರೂನು ಸೇರಿ ಹೋಗೋಣ್ವಂತೆ ಹಾರಿ॥ಬಾ ಗುಬ್ಬಿ ಬಾ ಎಂದಿತು॥4॥ ಹಾರಿ ಹಾರಿ ಮೇಲಕ್ಕೇರಿ ಚಂದ್ರನೂರಲ್ಲಿ। ಕೇರಿ ಕೇರಿ ಸುತ್ತೋಣ್ವಂತೆ ಬೆಳ್ಳಿ ತೇರಲ್ಲಿ ॥ ಬಾ ಗುಬ್ಬಿ ಬಾ ಎಂದಿತು॥5॥

### ಬಾನಾಡಿಗಳ ಜೊತೆ ಒಡಗೂಡಿ

ಬಾನಾಡಿಗಳ ಜೊತೆ ಒಡಗೂಡಿ ಬಾನಲ್ಲಿ ಹಾರಾಡುವ ಆಸೆ। ಅಪ್ಪಣೆ ಕೊಡಿಸುವವರಾರು? ಸುಪ್ತ ಸ್ವರಗಳಲ್ಲಿ ಒಂದು ಸ್ವರವಾಗುವ ಆಸೆ। ಆದರೆ ಸ್ವರಹಾಕಿ ಗುನುಗುವ ಗಾಯಕನಾರು? ಬಾಳ ಜ್ಯೋತಿಯಾಗುವ ಆಸೆ। ಆದರೆ ತೈಲ ಹಾಕುವ ದಾರಿಹೋಕನಾರು? ಪತಂಗಗಳ ಬಣ್ಣಗಳಲ್ಲಿ ಒಂದು ಬಣ್ಣವಾಗುವ ಆಸೆ, ಕುಂಚ ಹಿಡಿಯುವ ಕಲಾವಿದನಾರು? ಚಂದಮಾಮನ ಕಥೆಗೆ ನಾಯಕಿಯಾಗುವ ಆಸೆ, ನಕ್ಷತ್ರಗಳ ಗುಂಪಲ್ಲಿ ಮಿನುಗುತಾರೆಯಾಗುವ ಆಸೆ, ಅಲ್ಲಿಗೆ ಕರೆದೊಯ್ಯುವಜಾದುಗಾರನಾರು? ಅಮ್ಮನ ಋಣ ತೀರಿಸುವ ಆಸೆ, ಅವಕಾಶಕೊಡಿಸುವ ನಂಬಿಕಸ್ತ ಯಾರೋ??

### ಮನೆ2 ಮುದ್ದು ಮನೆ

ಮನೆ ಮನೆ ಮುದ್ದು ಮನೆ। ಮನೆಮನೆ ನನ್ನ ಮನೆ। ತಾಯಿ ಮುತ್ತು ಕೊಟ್ಟ ಮನೆ। ತಂದೆ ಎತ್ತಿಕೊಂಡ ಮನೆ। ನಾನು ನುಡಿಯ ಕಲಿತ ಮನೆ। ನಾನು ನಡಿಗೆ ಕಲಿತ ಮನೆ। ನಾನು ಬಿದ್ದು ಎದ್ದ ಮನೆ। ಮೊದಲು ಬೆಳಕ ಕಂಡ ಮನೆ। ತಂಗಿತಮ್ಮರೊಡನೆ ತಿಂದು ತೇಗಿ ಬೆಳೆದ ಮನೆ॥

### ಮಾತೆ ಪೂಜಕ ನಾನು ಎನ್ನಯ — ರಾಗ:ಮಲಹರಿ

ಮಾತೆ ಪೂಜಕ ನಾನು ಎನ್ನಯ ಶಿರವನಿಡೆವೆನು ಅಡಿಯಲಿ ನಿನ್ನ ಕೀರ್ತಿಯು ಜಗದಿ ಮೆರೆಯಲಿ ಒಂದೇ ಆಸೆಯು

ಮನದಲಿ॥ಪ॥ ಎಡರು ತೊಡರುಗಳೆಲ್ಲಾ ತುಳಿಯುತ ಮುಂದೆ ನುಗ್ಗುವೆ ಭರದಲಿ। ನಿನ್ನ ನಾಮ ನಿನಾದವಾಗಲಿ ಶ್ರಮಿಪೆನಾ ಪ್ರತಿ ಕ್ಷಣದಲಿ। ನಿನ್ನ ಗೌರವಕೆದುರು ಬರುವ ಬಲವ ಮುರಿವೆನು ಛಲದಲಿ। ಜಗದ ಜನನಿ ಭಾರತ ಇದ ಕೇಳಿ ನಲಿಯುವೆ ಮನದಲಿ॥1॥ ನಗುತ ನಲಿಯುವ ನಿನ್ನ ವದನವ ನೋಡಿ ನಲಿವುದು ಎನ್ನೆದೆ। ನಿನ್ನ ದುಃಖಿತ ವದನ ವೀಕ್ಷಿಸೆ ಸಿಡಿವುದೆನ್ನಯಾ ಹೃದಯವು। ನಿನ್ನ ಮುಖದಲಿ ಗೆಲವು ತರಲು ನೀನು ಗೈಯುವೆ ಯುಕ್ತಿಯ। ಎನ್ನ ಕಣ ಕಣ ತೇದು ಬಸಿಯುವೆ ಪೂರ್ಣ ಜೀವನ ಶಕ್ತಿಯ॥2॥ ನಿನ್ನ ತೇಜವ ಜಗವು ನೋಡಲಿ ಉರಿವ ದೀಪದ ತೆರದಲಿ। ಎನ್ನ ಶಕ್ತಿಯ ಘೃತವ ಸತತವು ಎರೆಯುತಿರುವೆನು ಭರದಲಿ। ಮಾತೃಮಂದಿರ ಬೆಳಗುತಿರಲಿ ನಾನೆ ನಂದಾದೀವಿಗೆ। ಬತ್ತಿತೆರದಿ ದೇಹ ಉರಿಯಲು ಸಾರ್ಥಕತೆ ಈ ಬಾಳಿಗೆ॥3॥ ರುದ್ರನಾಗಿ ವಿರೋಧಿ ವಿಷವನು ಭರದಿ ನಾನುಂಗುವೆ। ಜಗವ ಮೆಚ್ಚಿಸಿ ಅದರ ಹೃದಯವ ನಿನ್ನೆಡೆಗೆ ನಾ ಸೆಳೆಯುವೆ। ಸೃಜಿಪೆ ಜಗದಲಿ ನಿನ್ನ ಪೂಜಿಪ ಕೋಟಿ ಕೋಟಿ ಭಕ್ತರ। ಕೀರ್ತಿ ಶಿಖರದ ಮಾತೆ ಮಂಡಿಸಿ ಅರ್ಪಿಸುವೆ ನಾ ಸರ್ವದಾ॥4॥

## ಮುದ್ದು ಮಗುವಿನ ಮೊದಲ — ರಾಗ: ಶುದ್ಧ ಧನ್ಯಾಸಿ

ಮುದ್ದು ಮಗುವಿನ ಮೊದಲ ತೊದಲ ನುಡಿ 'ಅಮ್ಮ'। ನೀನು ಸಹನೆಯಲಿ ಭುವಿಯ ಸಮ ಅಮ್ಮ ॥ಪ॥ ಆಗಸದ ಹರಹು ನಿನ್ನ ಕರುಣೆಗಿದೆಯಮ್ಮ। ನಿನ್ನೆದೆಗೂಡಲ್ಲಿ ಎಷ್ಟೊಂದು ಮಮತೆ ಜೇನುಗಟ್ಟಿದೆ। ನಿನ್ನ ಮನತುಂಬಾ ವಾತ್ಸಲ್ಯ ಮಡುಗಟ್ಟಿದೆ॥1॥ ನಿನ್ನೆದೆ ಹಾಲಿನೊಡನೆ ನಿನ್ನೆಲ್ಲ ಪ್ರೀತಿಧಾರೆಯ। ಎರೆದು, ಬುದ್ಧಿಯ ಅರೆದು ಕುಡಿಸಿದೆಯಮ್ಮ। ಕೈಹಿಡಿದು ಮೊದಲ ಹೆಜ್ಜೆ ಇಡಿಸಿದೆ, ನಡೆಯ ಕಲಿಸಿದೆ॥2॥ ಅಕ್ಷರಗಳ ಕಲಿಸಿ, ಗುಣಗಳ ಎರಕ ಹೊಯ್ದೆ ನೀನೆಲ್ಲ ಕಷ್ಟ ಸಹಿಸಿ। ಮಗುವಿನ ನಗುವ ಬಯಸಿದೆ। ಮಕ್ಕಳ ಬೆಳೆಸಲು ತ್ಯಾಗಮಯಿಯಾದೆ॥3॥ ಸಮಾಜದಿ ಅವರು ಕೀರ್ತಿಗಳಿಸಿ ಮೆರೆವುದ ಕಂಡು। ಆನಂದಿಸುವೆ ಹಿಂದೆಯೇ ಇದ್ದು। ಏನನ್ನೂ ಬಯಸದೆ ನಿಸ್ವಾರ್ಥ ಸೇವೆ ಮಾಡುತಿರುವೆ। ನಿನಗೆ ನಾನು ಋಣಿಯಮ್ಮ ನನ್ನೆದೆಯಾಳದಿಂದ ನಮನ ಅಮ್ಮ ॥4॥

## ಮೈಯಾ ಮೋರೀ ಮೈ ನಹಿಂ (ಹಿಂದಿ)

ಮೈಯಾ ಮೋರೀ ಮೈ ನಹಿಂ ಮಾಖನ್ ಖಾಯೋ। ಭೋರ್ ಭಯೋ ಗೈಯನ್ ಕೇ ಪಾವೆ। ಮಧುವನ್ ಮೋಹಿಂ ಪಠಾಯೋ॥ಪ॥ಚಾರ್ ಪಹರ್ ಬಂಸೀಬಟ್ ಭಟಕ್ಯೋ। ಸಾಂಝ್ ಪರೇ ಘರ ಆಯೋ। ಮೈ ಬಾಲಕ್ ಬಹಿಂಯನ್ ಕೋ ಛೋಟೋ। ಛೀಂಕೋ ಕಹಿ ವಿಧಿ ಪಯೋ। ಗ್ವಾಲ್ ಬಾಲ್ ಸಬ್ ಬೈರ್ ಪರೇ ಹೈಂ। ಬರ್ ಬಸ್ ಮುಖ್ ಲಪಟಾಯೋ। ತೂ ಜನನೀ ಮನ್ ಕೀ ಅತಿ ಭೋರೀ। ಇನ್ ಕೇ ಕಹೇ ಪತಿಯಾಯೋ। ಜಿಯ್ ತೇರೇ ಕಛು ಭೇದ ಉಪಜಿಹೈ। ಜಾನಿ ಪರಾಯೋ ಜಾಯೋ। ಯಹ್ ಲೈ ಅಪನೀ ಲಕುಟಿ ಕಮರಿಯಾ। ಬಹುತಹಿಂ ನಾಚ್ ನಚಾಯೋ। ಸೂರದಾಸ್ ತಬ್ ವಿಹಂಸಿ ಜಸೋದಾ। ಲೈ ಉರ್ ಕಂಠ್ ಲಗಾಯೋ॥1॥

## ಬಂತಮ್ಮ ಹುಟ್ಟಿದ ಹಬ್ಬ

ಬಂತಮ್ಮ ಹುಟ್ಟಿದ ಹಬ್ಬ ಬಂತಮ್ಮ। ಸಂತಸ ತಂದಿಹ ಹಬ್ಬ ಬಂತಮ್ಮ ॥ಪ॥ ಮುದ್ದಿನ ಕುವರಿ ಈ ನನಗೆ। ಮೂರೇ ವರುಷ ಈವರೆಗೆ। ವರ್ಷದಿ ಬರುವುದು ನನ್ನ ದಿನ। ಹರ್ಷವ ತರುವುದು ಜನ್ಮ ದಿನ॥1॥ ಹಬ್ಬಕೆ ಬರುವನು ಚಿಕ್ಕಣ್ಣ। ಬಳೆ-ಸರ ತರುವನು ನಮ್ಮಣ್ಣ। ಅಪ್ಪನು ತರುವನು ಹೊಸಲಂಗ। ನಾ ಒಪ್ಪಿದ ರೇಷಿಮೆ ಜರಿಲಂಗ॥2॥ ಮುದದಿಂ ತೊಡುವೆನು ಇದನೆಲ್ಲ। ಗೆಳೆಯರ ಕೂಡುತೆ ದಿನವೆಲ್ಲ॥ ಅಮ್ಮನು ಗಡಿಬಿಡಿ ಮಾಡುವಳು। ದೇವರ ಗುಡಿಗೆ ಒಯ್ಯುವಳು। 3॥ ಹೋಳಿಗೆ ಪಾಯಸ ಮಾಡುವಳು। ಆರತಿ ಈ ದಿನ ಬೆಳಗುವಳು। ಉಂಡೆ ಚಕ್ಕುಲಿ ಹಂಚುವಳು। ಮುತ್ತನು ಕೊಟ್ಟು ಹರಸುವಳು॥4॥

**ಹೆತ್ತ ತಾಯಿ ಎಂಬ ಹೆಸರು** **ರಾಗ: ಬೃಂದಾವನ ಸಾರಂಗ**

ಹೆತ್ತ ತಾಯಿ ಎಂಬ ಹೆಸರು ಎಷ್ಟು ದೊಡ್ಡದು। ಆ ತಾಯಿಯ ಹೃದಯವು ಅಷ್ಟೇ ದೊಡ್ಡದು॥ಪ॥ ಬೀಳದಂತೆ ಬಾಡದಂತೆ ನೋಡುವಳು ತಾಯಿ। ಶಿಶುವಿಗಾಗಿ ಪ್ರಾಣವನ್ನು ಕೊಡುವಳು ತಾಯಿ। ಮಗುವಿನಿಂದ ತನ್ನ ಮನದ ಚಿಂತೆ ಮರೆವಳು। ಮಗುವಿನಿಂದ ಮುಂದಿನಾ ದಿನವ ಕಳೆವಳು॥1॥ ತಾಯಿ ತನ್ನ ಮಗುವನ್ನು ತೊಟ್ಟಿಲೊಳಿಟ್ಟು। ಜೋಗುಳವ ಹಾಡುವಳು ಮುತ್ತನು ಕೊಟ್ಟು।ಮಲಗು ಎಂದು ತೊಡೆಯ ಮೇಲೆ ಮಗುವನ್ನಿಟ್ಟು। ಮಲಗಿಸುವಳು ತನ್ನ ಎದೆಯ ಹಾಲನುಕೊಟ್ಟು॥2॥ ಅಂಬೆಗಾಲಿಡುತ ಮಗುವು ಆಡುತಲಿತ್ತು। ಮನೆಯನೆಲ್ಲ ಇನ್ನು ತಾನು ಬೆಳಗುತ್ತಲಿತ್ತು। ಮಕ್ಕಳಿರುವ ಮನೆ ಸದಾ ಸ್ವರ್ಗದಂತೆ। ಹೆತ್ತವರ ಪಾಲಿಗೆ ಜ್ಯೋತಿಯಂತೆ॥3॥

## ಅಂತಃಪುರಗೀತೆ – 15 ಕೃತಿಗಳು

**ಶ್ರೀ ಚೆನ್ನಕೇಶವ (ಪ್ರಾರ್ಥನಾ ಗೀತೆ)** **ರಾಗ: ಆರಭಿ, ಆದಿತಾಳ**

ಶ್ರೀಚೆನ್ನಕೇಶವ ಶೃಂಗಾರ ಭಾವ॥ಪ॥ ಸೌಮ್ಯನಾಯಕೀ ಸ್ನೇಹ ಮಹೋತ್ಸವ। ಸೌಂದರ್ಯಾರ್ಣವ ಕರುಣಿಸು ದೇವಾ ॥ಅ.ಪ॥ ದೇವಾ-ದೇವಾಸುರನರ ಹೃದ್ಭಾವಾ। ಭಾವಾತೀತ ಪ್ರಭಾವಾ- ಸುಖರಾವಾ॥ ಜೀವ ಸಂಘ ಸಂಮೋಹನ ವೈಭವ। ಲಾವಣ್ಯಾಮೃತ ಘನ ಸ್ವಭಾವಾ॥1॥ ಈಶಾ-ವಿಶ್ವಾದ್ಭುತ ಚಿತ್ರ ವಿಲಾಸಾ। ಲಾಸೋಜ್ವ್ವಲ ರೂಪ ವಿಕಾಸಾ-ಚಿದ್ಭಾಸಾ। ಪೋಷಿಸಿ ಮಧುರಾವೇಶಂಗಳ ಸಂ-। ತೋಷಿಪ ರಸಿಕಾಗ್ರೇಸರ ವೇಷಾ॥2॥ ಸ್ವಾಮೀ ಬ್ರಹ್ಮಾಂಡಾವರ್ತನ ನೇಮೀ। ಸಂಸಾರ ತಾಪ ಶಮ ಭೂಮೀ-ಸುಪ್ರೇಮೀ। ರಾಮಣೀಯತಾ-ಸಾಮ್ರಾಜ್ಯಾಧಿಪ। ಕಾಮರೂಪ ಸರ್ವಾಂತರ್ಯಾಮೀ॥3॥

**ಮುಗುದೆಯಾದೆಯಾ ಕನ್ನೆ (ಮುಕುರ ಮುಗ್ಧೆ)** **ರಾಗ: ಕೇದಾರ, ಮಿಶ್ರಛಾಪುತಾಳ–ಆದಿ**

ಮುಗುದೆಯಾದೆಯಾ ಕನ್ನೇ-ಮುಕುರದ ಚೆನ್ನೇ॥ಪ॥ ನಿನ್ನ ಮೈ ಸೊಬಗಿಗೆ-ನೀನೇ ಮನವ ಸೋತು॥ಅ.ಪ॥ ಹರಹಿದ ಪೆರೆಯಂತೆ ಮೆರೆವ ಲಲಾಟದಿ। ಧರಿಸೆ ಕುಂಕುಮವ ನೀಂ ಬೆರಲೆತ್ತಿದಂತೆ॥ ಸ್ಥಿರದಿ ನಿಂದಿಹುದದು ಬೆರಗಿನ ಸೆರೆಯಲಿ। ಪರವಶೆಯಾದೆ ನೀಂ ಪರವಶಗೆಯ್ವಳೆ॥1॥ ಬೆರಗಿದು ಸಾಜವೆ-ಬರಿಯ ಬಿಬ್ಬೋಕವೆ।ತರಳ ಲೋಚನೆಯಿದು- ಸ್ಮರತಂತ್ರನಯವೆ॥ ಮೆರೆದು ಮೈ ಮರೆತಂತೆ-ಪರಕಿಸು ತಿನಿಯನ। ಗರುವವ ಮುರಿವೆಯ-ಗರುವವ ನಟಿಸುತೆ॥2॥ ಕನ್ನಡಿಯಲಿ ಕಾಣ್ಬುದೇಂ- ಮನ್ನೆಯೆ ತೊಟ್ಟ। ಚಿನ್ನರನ್ನಗಳಂದವೇಂ॥ ಉನ್ನತ ದಾನನ ವೇಂ-ತನ್ವಿಯೆ ತನು-। ವಿನ್ಯಾಸ ತ್ರೈಭಂಗಿಯೇಂ। ಅನ್ಯಾಯವಾದೀತು ನೀನಿಂತು ನಿಂದಿರೆ। ಧನ್ಯೆಯಪ್ಪೊಡೆ ನೋಡು ಚೆನ್ನಕೇಶವನೆಲ್ಲಿ॥3॥

**ಏನೇ ಶುಕಭಾಷಿಣಿ (ಶುಕಭಾಷಿಣಿ)** **ರಾಗ : ಬೇಹಾಗ್, ಏಕತಾಳ**

ಏನೇ ಶುಕಭಾಷಿಣೀ ಇದು। ಏನೇ ಶುಕ ಭಾಷಿಣೀ ಸುದ್ದಿಯೇನೇ ಮನೋಲ್ಲಾಸಿನೀ॥ಪ॥ ಆರಾರ ತೆಗಳುತಲಾರಾರ ಪೊಗಳುತ। ಕೀರಾಲಿಗುಸಿರುವೆ ಮಾರಾಂತರಂಗವ॥ಅ.ಪ॥ ಚಿಂತಾವಿಚಾರಂ ಗಳೇಂ ನಿನ್ನ। ಸಂತೋಷ ಗೋಪ್ಯಂಗಳೇಂ॥ ಕಾಂತಂಗದೇನೇ-ಕಾಂತಂಗಳೊಸಗೆಯ। ಕಾಂತೇ ನೀಂ ಕಳುಹಿ ಅಶಾಂತನನಾಗಿಪೆ॥1॥ ವನ್ಯಪ್ರವಾಸಿಯೊಳೇಂ-ನಿನ್ನ। ಬಿನ್ನಾಣ ಬೂತಾಟಗಳ್॥ ಇನ್ನಾರು ಮಿಲ್ಲವೆ ಚೆನ್ನಕೇಶವನಿಗೆ। ನಿನ್ನಂದ ಚಂದವ ಬಣ್ಣಿಪ್ಪ ಚತುರರು॥2॥

**ವಾಸಂತ ಕೇಳೀರತೇ** **ರಾಗ : ವಸಂತ, ಆದಿತಾಳ**

ವಾಸಂತ ಕೇಳೀರತೇ ಲಲಿತೇ। ರಾಸಿಕ್ಯ ದೀಕ್ಷಾವ್ರತೇ ಓ ವನಿತೇ॥ಪ॥ ಮಾಣಿಕ್ಯ ರಾಜತ ಸೌವರ್ಣ ರಂಜಿತ। ವೇಣು

ಪ್ರಣಾಳಿಯ ಶೋಣಾಂಬುಧಾರೆಯ॥ಅ.ಪ॥ ಶ್ರೀಂಗಧ ಕಸ್ತೂರಿಕಾ ಕೇಸರ। ಪುನ್ನಾಗ ಸೌಗಂಧಿಕಾ॥ ರಾಗಾಂಬು ಕುಂಕುಮ ಸೇಕೋಪಯಂತ್ರದೆ। ಯಾಗಾವ ಭೃಥವೇಂ ಚೆನ್ನಾಕೇಶವನಿಗೆ॥1॥

### ಏನೀ ಮಹಾನಂದವೇ (ಮುರಜಾಮೋದೆ) ರಾಗ : ಅಠಾಣ, ಮಿಶ್ರಛಾಪುತಾಳ (ಆದಿ)

ಏನೀ ಮಹಾನಂದವೇ - ಓ ಭಾಮಿನೀ। ಏನೀ ಸಂಭ್ರಮದಂದವೇ - ಬಲ್ಲಂದವೇ॥ಪ॥ ಏನೀ ನೃತ್ತಾಮೋದ - ಏನೀ ಮೌರಜನಾದ। ಏನೀ ಜೀವೋನ್ಮಾದ - ವೇನೀ ವಿನೋದ॥ಅ.ಪ॥ ಡಕ್ಕೆಯ ಶಿರಕೆತ್ತಿ-ತಾಳಗೋಲಿಂ ತಟ್ಟಿ। ತಕ್ಕಿಟ ಧಿಮಿಕಿಟ - ತಕಝುಣುರೆನಿಸಿ॥ ಕುಕ್ಕುತೆ ಚರಣವ-ಕುಲುಕುತೆ ಕಾಯವ। ಸೊಕ್ಕಿದ ಕುಣಿತವ - ಕುಣಿವೆ ನೀನೆಲೆ ಬಾಲೆ॥1॥ ಆರೋ ನಿನ್ನಯ ಹೃದಾ - ಗಾರದಿ ನರ್ತಿಸಿ। ಮಾರಶೂರತೆಯ ಪ್ರ -ಚಾರಿಸುತಿರ್ಪನ್॥ ಸ್ಮೇರವದನ ನಮ್ಮ - ಚೆನ್ನಕೇಶವರಾಯ। ನೋರೆಗಣ್ಣಿಂ ಸನ್ನೆ - ತೋರುತ ಲಿಹನೇನೆ॥

### ಭೈರವ ವೇಷದಿಂದಾರ (ಕಟಪ ಭೈರವಿ) ರಾಗ : ಭೈರವಿ, ಮಿಶ್ರಛಾಪುತಾಳ

ಭೈರವ ವೇಷದಿಂ -ದಾರ ನೀನಂಜಿಪೆ। ಮಾರತಂತ್ರ ಕಲಾಪೇ - ಸುರೂಪೇ॥ಪ॥ ಶೂಲರುಂಡ ವದೇಂ ಕ-ಪಾಲ ಪಾತ್ರೆಯ ದೇನೆ। ಕಾಲೆಡೆ ಮೊಳಗುವ - ತಾಳ ಮದ್ದಲೆಯೇನೆ॥ಅ.ಪ॥ ಆರರಿಯರೆ ನಿನ್ನ-ವೈರಾಗ್ಯ ಕಪಟವ। ಮಾರಭಿಕ್ಷೆಯ ನಿಂತು ಕೋರುವುದೇನೆ॥ ತಾರಳ್ಯ ನಯನದ-ಸ್ಮೇರ ಕಪೋಲದ। ತಾರುಣ್ಯವನದೆಂತು - ಮರೆಮಾಚಲಪ್ಪುದೆ॥1॥ ಹೆದರಿಪುದಾರನೆ- ಮದಿರ ಲೋಚನೆ ಪೇಳು। ಮಧುರ ರೂಪವ ಮತ್ತೆ - ತಳೆವುದೇ ಮೇಲು॥ ಚದುರ ಮಾಯಾವಿಯೀ - ಚೆನ್ನಕೇಶವನಮ್ಮ। ಹೃದಯಂಗಳೊಳವೊಕ್ಕು - ಗೆಲುವನೆಲ್ಲರ ನಮ್ಮ॥2॥

### ಡಂಗುರ ಪೊಯ್ವುದದೇನೆ (ತಾಂಡವೇಶ್ವರಿ) ರಾಗ : ಮಧ್ಯಮಾವತಿ, ಏಕತಾಳ

ಡಂಗುರ ಪೊಯ್ವುದದೇನೆ ಜನಜಂಗುಳಿಗೆಲ್ಲ ನೀಂ ಸಾರ್ವುದದೇನೆ॥ಪ॥ ಅಂಗಜ ವಾರ್ತೆಯದೇನೆ -ಎಲೆ। ಶೃಂಗಾರ ಶೀಲೆ ನಿನ್ನಯ ಸುದ್ದಿಯೇನೆ॥ಅ.ಪ॥ ಡವಣೆಯ ತಟ್ಟುತ್ತಲಿರುವೆ - ಗೆಜ್ಜೆ। ಹವಣಿಂದೆ ಮೆಯ್ಯ ನೀಂ ಕುಲುಕಿಸಿ ಮೆರೆವೆ। ಸವಿನಗುವನು ನಗುತಿರುವೆ -ಓ। ಯುವತೀ ನಿನ್ನಿಂಚರದೊಳಗೇ ನಿಟ್ಟಿರುವೆ॥1॥ ತದ್ಧಿಮಿ ತಕಧಿಮಿ ಝುಣುತಾ ಥೈಯ। ತ ತೋಂ ತದ್ದಿಮ್ಮಿತ ತಕಝುಣು ರಣಿತಾ। ಮದ್ದಲೆ ತಾಳದ ಕುಣಿತಾ - ಅದು। ನಿದ್ರಿಪ ಚೆನ್ನಕೇಶವಗೆ ಜಾಗರಿತಾ॥2॥

### ಯದುವಂಶ ತಿಲಕನ (ಮುರುಳೀಧರೆ) ರಾಗಃ ಯದುಕುಲ ಕಾಂಭೋಜಿ – ಆದಿತಾಳ

ಯದುವಂಶ ತಿಲಕನ -ವೇಷವಿದೇನೇ। ಮದಿರಾಕ್ಷಿ ಮುರಲೀ - ನಾದವಿದೇನೇ॥ಪ॥ ಮುರಲೀ ಗಾನವಿದೇನೆ - ತರಲಾಪಾಂಗವದೇನೆ। ಸ್ಮರಸಂಭ್ರಮಾನಂದ - ಸ್ಮರಣೆಯಿದೇನೇ॥ಅ.ಪ॥ ಕೊಳಲನೂದುತೆ ನಮ್ಮ - ಮನದಿ ಪವ್ವಳಿಸಿದ್ದ। ನಲವೊಲವೆಲ್ಲವ ಕೆರಳಿಸಿ ಕುಣಿಸಿ। ಪುಲಕಾಂಕುರಗಳನಾ-ಗಿಸಿ ಮೈಯ್ಯ ಮರೆಯಿಸಿ। ನಲಿವೀಗಾಯನಮಾಯೆ - ಯೊಳಗುಟ್ಟದೇನೆ॥1॥ ಆಶೆಗಳೆಷ್ಟೋ ನಿರಾಶೆಗಳಿನ್ನೆಷ್ಟೋ। ರೋಷ ದುಃಖ ಪ್ರೇಮೋ-ತ್ಸಾಹಂಗಳೆಷ್ಟೋ॥ ಸಾಸಿರ ಸುಳಿಗಾಳಿ ಬೀಸಿ ನಮ್ಮೆದೆಯನು। ಘಾಸಿಗೊಳಿಸೆ ಚೆನ್ನಕೇಶವನೊಲಿವನೆ॥2॥

### ಆವ ರಾಗವ ಪಾಡುವೇ (ಗಾನ ಜೀವನೆ) ರಾಗ : ರೀತಿಗೌಳ, ಮಿಶ್ರಛಾಪುತಾಳ (ಏಕ)

ಆವ ರಾಗವ ಪಾಡುವೇ - ಓ ಚೆಲುವೇ-ಎನ್ನೊಲವೇ। ಎನ್ನೊಲವೇ ಬಾಳ್ಗೆಲವೇ - ನೀನಾವ ರಾಗವ ಪಾಡುವೇ॥ಪ॥ ಆವ ರಾಗವ ಪಾಡಿ - ಆವ ಮಾಟವ ಮಾಡಿ। ಆವ ಜೀವವ ಕಾಡಿ - ನೀನಿಂತು ನಲಿಯುವೆ॥ಅ.ಪ॥ ಕಲಹಂಸಿ ಲಲಿತಸ್ವರೇ - ಮನೋಹರೆ। ವಿಲಸಿತ ವಿವರಾಧರೇ - ಓ ಚದುರೇ॥ ಮನಸಿನ ಗುಹೆಯಲಿ -ಮಲಗಿರ್ಪ ದನಿಗಳ।

ಹೊನಲಾಗಿ ಹರಿಸಿ ಜಾ-ಲಿಸುವೆ ನಮ್ಮ ಸುಗಳ॥1॥ ಮಧುರಗೀತಾಯುಧದೆ ನಮ್ಮ ಯ। ಚದುರ ಚೆನ್ನಿಗ ಕೇಶವೇಶನ॥ ಹೃದಯರಾಜ್ಯವ ಸೂರೆಗೊಳ್ಳುವ। ಮದನ ಬಲ ಪಟ್ಟಾಧಿಕಾರಿಣಿ॥2॥

**ಏನಿದು ರೋಷಾ (ವೀರಯೋಷಿತೆ) ರಾಗ : ಮಾಯಾಮಾಳಗೌಳ – ಮಿಶ್ರಛಾಪು (ಆದಿ)**

ಏನಿದು ರೋಷಾ-ವೀರಾವೇಶಾ॥ಪ॥ ಮಾನಿನಿ ನಿನ್ನಂಗ-ಭಾವ ಪ್ರಕಾಶಾ ॥ಅ.ಪ॥ ಕ್ಲೇಶವೇನಾಯಿತೆ - ಯೋಷಾಮಣಿಯೆ ನಿನಗೆ। ಹಾಸ್ಯವಾಡಿದ ನಾರೆ - ದೋಷವದೇನೆ॥ ಆಶೆಯ ತೋರಿ ನಿರಾಶೆಯ ಗೆಯ್ದ ಆ। ಕೇಶವನೊಳ್ ಮುನಿ-ದಾಕಾಶವಿರಿವೆಯ॥1॥

**ನೃತ್ಯ ನೈಪುಣೀ (ನಾಟ್ಯ ನಿಪುಣೆ) ರಾಗ : ನಾಟ – ಆದಿತಾಳ**

ನೃತ್ಯ ನೈಪುಣೀ - ನಿತ್ಯರಾಗಿಣೀ। ಚಿತ್ತ ಜಾಗಮಾರ್ಥ - ವ್ಯಕ್ತಹಾಸಿನೀ॥ಪ॥ ಮುರಲೀನಿ ನಾದ-ಮುರಜಾನುವಾದ। ಸ್ವರಮೇಳನದಾ - ಸರಸ ಪ್ರಮೋದ॥ಅ.ಪ॥ ಹರನ ಗೆಲ್ವ ವಶೀ -ಕರಣ ಮಂತ್ರವನು। ಗಿರಿಜೆಗಿಂತು ನೀ - ನೊರೆದು ತೋರ್ದಿಯೇಂ॥ ಸರಸಿಜಾ-ಸ್ಯೆ ನಿನ್ನ - ನರಸಿ ಬರುವನಮ್ಮ। ಸರಸಿ ನಮ್ಮ ದೊರೆ-ವರದ ಕೇಶವನು॥1॥

**ಭಾವವಿದೇನೇ ಸಖೀ (ಸ್ವರ್ಗಹಸ್ತೆ) ರಾಗ : ಕಾನಡಾರಾಗ – ಆದಿತಾಳ**

ಭಾವವಿದೇನೇ ಸಖೀ - ನರ್ತನಸುಖೀ॥ಪ॥ ಭಾವವಿದೇನೇ ಓ-ದೇವಲೋಕಾಹ್ವಾನೆ। ದಿವಿಜ ರಾಮೋದಕೆ-ಭುವಿಯನೊಯ್ಯುವೆಯೇನೆ॥ಅ.ಪ॥ ಕಾಲವನಂತ ನಿನ್ನೊಲವೇನನಂತವೇ। ದೈವವನಂತ ನಿನ್ನೊಯ್ಯಾರವಂತೇಂ॥ ಕಾಲ ದೈವ ಲೋಕ ಸ್ವಾರಸ್ಯಗಳು ನಿನ್ನ। ಬಾಳಿನೊಂದು ಮುಹೂರ್ತದೊಳೆ ಮೇಳವಿಪುವಲ್ತೆ॥1॥ ಒಂದೇಕ್ಷಣವೇ ನೂರು ಯುಗದಿಂ ಮೇಲೆನಿಸದೆ। ಸೌಂದರ್ಯ ಸಾರದ ಸಂದರ್ಶನವಿರೆ॥ ಬಂಧುರೆ ನಮ್ಮ ಯ ಬಂಧ ಮೋಕ್ಷಕೆ - ನಿನ್ನಾ-। ನಂದವಾಹಿನಿಯೊಂದು ಬಿಂದುವೆ ಸಾಲದೆ॥2॥ ಚೆನ್ನೆ ನೀನಾರನು ಮನದೊಳು ನೆನೆವೆಯ। ಇನ್ನೆಷ್ಟು ಯುಗ ಕಾದು ನೀನಿಂತು ನಿಲುವೆ। ಒಲ್ಲನೆ ನಿನ್ನನಾ ಚೆನ್ನಕೇಶವ ಸ್ವಾಮಿ॥ ಒಲ್ಲೆಯ ನೀ ನವನೀವ ಪ್ರಸಾದವ॥3॥

**ಕಾಲುಂಗರ ನೆವವೇ (ಪಾದಾಂಗುಳೀಯೆ) ರಾಗ : ಹಿಂದೋಳ – ಆದಿತಾಳ**

ಕಾಲುಂಗುರ ನೆವವೇ-ಬಾಲಾಮಣಿ।ಪ॥ ಕಾಲುಂಗುರ ನೆವ -ಲೋಲಾಂಗಕಾಯಿತೆ। ವಲ್ಲೀ ತೋರಣಗುಚ್ಛ -ವಾಲಿಂಗ್ಯವಾಯಿತೆ॥ಅ.ಪ॥ ಚಾರುವಾಮಾಂಘ್ರಿಗೆ -ಚಾರೆಯುಂಗುರವನು। ಧಾರಯ್ಸೆ ಪಿಡಿದಿರೆ -ನೀರೆ ನೀನೊಲಿದು॥ ಓರಡಿಯಿನೆ ನಿಂತು-ವೀರವ್ಯಾಯಾಮವ। ತೋರುವಾತುರವೇನೆ-ನಾರೀಶಿರೋಮಣಿ॥1॥ ರಾಕೇಂದುಮುಖಿ ನಿನ್ನೀ - ಏಕಪಾದದ ತಪ। ನಾಕವಾಸಿಗಳನಾ - ರಾಧಿಪ ಪರಿಯೇಂ॥ ಲೋಕದ ಬೇಗೆಯ - ಪೋಗಿಪುದದು ನಮ್ಮ। ಶ್ರೀ ಕೇಶವೇಶನ - ಕೃಪೆಯ ಸಾಧಿಪುದೇನೆ॥2॥

**ಮುದ್ದಿನ ವಿಕಟೆಯ ನೋಡೇ (ವಿಕಟ ನರ್ತಿನಿ) ರಾಗ : ಮಧ್ಯಮಾವತಿರಾಗ – ಏಕತಾಳ**

ಮುದ್ದಿನ ವಿಕಟೆಯ ನೋಡೇ - ಎಲೆ। ಮದ್ದಲೆ ರಭಸದ ಕುಣಿತವ ನೋಡೆ॥ಪ॥ ಮದ್ಯವನುಂಡಿಹಳೇನೇ - ಭಂಗಿ। ಮದ್ದನು ಸೇವಿಸಿ ಹುಚ್ಚಾದಳೇನೇ॥ಅ.ಪ॥ ಪುರುಷನ ಮುಖವಾಡವೇನೇ -ಈ। ಒರಟಾಟಗಳ ದೇವನೆಡೆ ಮಾಳ್ಪರೇನೇ॥ ಶಿರದಲ್ಲಿ ಹಿರಿಯ ಕೊಪ್ಪೇನೇ - ನಿನ್ನ। ಕೊರೆಯುವ ತೆಳುನಡು ಕಾಲಾಳಿಯೇನೆ॥1॥ ತದ್ಧಿಮಿ ತಕಧಿಮ್ಮಿ ಧಿಮ್ಮಿ - ಈ। ಗದ್ದಲವೇ ನಿನ್ನ ಹಬ್ಬವೇನಮ್ಮಿ। ನಿದ್ದೆಯ ಕೆಡಿಸಿದೊಡಮ್ಮೀ - ನಿನ್ನ। ನೊದ್ದು ಬೀಳಿಸಿಯಾನು ಕೇಶವ ನಮ್ಮೀ॥2॥

**ಸರಸವಾಡೆ ಕೆಳೆಯನೆತ್ತಲರಸಿ (ಶುಕ ಸಖಿ)** **ರಾಗ : ಹಂಸಧ್ವನಿ-ಆದಿತಾಳ**

ಸರಸವಾಡೆ ಕೆಳೆಯನೆತ್ತಲರಸಿ ತಂದೆಯೇ। ಅರಗಿಣಿಯಾ ನುಡಿಯ ಕೇಳಿ ಮರುಳು ಗೊಂಡೆಯೇ।।ಪ।। ಬೆಡಗ ನೋಳ್ಪರಿರದೆ ನಿನಗೆ ಬೇಸರಾದುದೇ। ನುಡಿಯ ಕೇಳ್ವರಿರದೆ ಮನಸು ರೋಸಿ ಪೋದುದೇ।। ಕಲಿಸಿದುಲಿಯ ನುಲಿಯುವ ಗಿಣಿ। ತಿಳಿಯಲಹುದೆ ನಿನ್ನ ಮನವ।।1।। ಕಾದು ನೋಡುತಿಹನು ನಿನ್ನ ಚೆನ್ನಕೇಶವಂ। ಆದಿ ಮೂಲನವನೆ ಸೊಬಗನೆಲ್ಲ ಸೂಸುವಂ। ಶುಕಭಣಿತದಿ ಪಿಕಮಣಿತದಿ। ಸಕಲ ಜಗದ ರುಚಿಯೊಳವನೆ।।2।।

## ಪ್ರಕೃತಿ ಗೀತೆ

**ಆಡೋಣ ಬನ್ನಿ ಕಣ್ಣುಮುಚ್ಚಾಲೆ** **ರಾಗ: ಪುನ್ನಾಗವರಾಳಿ**

ಆಡೋಣ ಬನ್ನಿ ಕಣ್ಣಮುಚ್ಚಾಲೆ ತೂಗೋಣ ಬನ್ನಿ ಉಯ್ಯಾಲೆ। ಜೀವನವೊಂದು ನಾಟಕಶಾಲೆ। ನಾವೆಲ್ಲ ಕುಣಿಯುವ ನರ್ತನಶಾಲೆ।।ಪ।। ಸುತ್ತಲು ಚೆಲ್ಲಿದೆ ರಂಗುರಂಗೋಲೆ। ಬಳುಕುತ ಬರುವಳು ವನಮಾಲೆ। ಭರದಿಂತೊಟ್ಟ ಪಚ್ಚೆಯ ಸಾಲೆ। ತೂಗಾಡಿ ಕರೆದಾವು ತೆಂಗಿನ ಸಾಲೆ। ಉಯ್ಯಾಲೆ ..... ಜಂಪಾಲೆ।।1।। ಹಕ್ಕಿಗಳಿಂಚರ ಕರೆಯೋಲೆ। ಕುಣಿಯುತ್ತ ಕರೆದಾವು ನವ್ವಾಲೆ। ಇಂಪು ಇಂಪಿನ ಗುಂಪು ಕೋಗಿಲೆ। ತಂಪನು ಸೂಸುವ ಬೆಳ್ಳಕ್ಕಿ ಸಾಲೆ। ಉಯ್ಯಾಲೆ ಜಂಪಾಲೆ।।2।। ತುಂಬಿ ಹರಿಯುವ ಆ ನಾಲೆ। ತಲೆಬಾಗಿ ಕುಣಿದಾವು ಹೂ ಮಾಲೆ। ಹಿಮ್ಮೇಳ ಸೂಸುವ ಮರಗಳ ಸಾಲೆ ಬೆಳಕನ್ನು ಬೀರುವ ರವಿಚಂದ್ರರೆ।।3।।

**ಇದು ಮೀಸಲೆ ನನಗೆ ಈ ಬೆಳ್ಳಿ ಬಟ್ಟಲೊಳು (ದಾಳಂಬರಿ)** **ರಾಗ:ರಂಜನಿ**

ಇದು ಮೀಸಲೆ ನನಗೆ ಈ ಬೆಳ್ಳಿ ಬಟ್ಟಲೊಳು। ರತ್ನ ಕಾಂತಿಯ ಚೆಲ್ಲಿ ಕಳ ಕಳಿಪ ದಾಳಿಂಬೆ। ನೂತ್ನರುದ್ದಿಯ ಪಡೆದ ಮೋದದೊಳಗೀ ಜಿಹ್ವೆ। ಇದುವರೆಗೂ ಕಾರ್ಪಣ್ಯದೊಳಗಿದ್ದೆನೆನುತಿಹು ದು। ಬಿತ್ತಬಿತ್ತದ ರಸವ ಸವಿದು ಸವಿದಾಕ್ಷಣದಿ। ಆಯುಷ್ಯಸಾರವನು ಭಟ್ಟಿ ಇಳಿಸುವ ತೆರದಿ।। ದೇಯವಿದನಾ ರೂಕ್ಷ ವೃಕ್ಷವೀ ಪೃಥ್ವಿಯಿಂದೆತ್ತಿ। ಮುದವೆರವ ಒಲಾವರ್ತಿ ಚೋದಿಸಿತು? ಋತುಋತುತುಗಳಾದರ ಗಾಳಿಯಪ್ಪುಗೆ ಸೊಬಗ। ಬೆಂಗದಿರ ರಕ್ತಿಯನು ತಂಗದಿರ ಸಕ್ತಿಯನು। ತಂಗಿಸಿತೋ ಮಳೆಮಂಜಿನೊಲವ। ಮಧುರಾಮ್ಲದೊಳು ಇತರೇಂದ್ರಿಯ। ಜ್ಯುತಿಯ ರಸನೆಗನುವದಿಸುವೊಲು? ರಸವಿದೇನಿದ ಸವಿವರಾರ್ ಏನಿದಚ್ಚರಿಯ ಭೋಗ? ರಸನೆ ಹಸೆಯೊಳಗಿಂತು ಪ್ರಕೃತಿ ಪುರುಷರ ದಿವ್ಯಯೋಗ।।

**ಈ ಬಾನು ಈ ಚುಕ್ಕಿ** **ರಾಗ: ಪುನ್ನಾಗವರಾಳಿ**

ಈ ಬಾನು ಈ ಚುಕ್ಕಿ ಈ ಹೂವು ಈ ಹಕ್ಕಿ। ತೇಲಿ ಸಾಗುವ ಮುಗಿಲು ಹರುಷ ಉಕ್ಕಿ। ಯಾರು ಇಟ್ಟರು ಇವನು ಹೀಗೆ ಇಲ್ಲಿ। ತುದಿ ಮೊದಲು ತಿಳಿಯದೀ ನೀಲಿಯಲ್ಲಿ।। 1।। ಒಂದೊಂದು ಹೂವಿಗೂ ಒಂದೊಂದು ಬಣ್ಣ। ಒಂದೊಂದು ಜೀವಕೂ ಒಂದೊಂದು ಕಣ್ಣ। ಯಾವುದೋ ಬಗೆಯಲ್ಲಿ ಎಲ್ಲರಿಗೂ ಅನ್ನ। ಕೊಟ್ಟ ಕರುಣೆಯ ಮೂಲ ಮರೆಸಿಹುದು ತನ್ನ।।2।। ನೂರಾರು ನದಿಕುಡಿದು ಮೀರದಾ ಕಡಲು। ಭೋರೆಂದು ಸುರಿಸುರಿದು ಆರದಾ ಮುಗಿಲು। ಸೇರಿಯೂ ಕೋಟಿತಾರೆ ತುಂಬದಾ ಬಯಲು। ಯಾರದೀ ಮಾಯೆ ಯಾವ ಬಿಂಬದಾ ನೆರಳು।।3।। ಹೊರಗಿರುವ ಪರಿಯೆಲ್ಲ ಅಡಗಿಹುದೆ ಒಳಗೆ। ಹುಡುಕಿದರೆ ಕೀಲಿಕೈ ಸಿಗದೇ ಎದೆಯೊಳಗೆ। ತಿಳಿಯದೆಲ್ಲದರಲ್ಲೆ ಕುಳಿತಿರುವೆ ನೀನೆ। ಎನ್ನುವರು ನನಗೀಗ ಸೋಜಿಗವು ನಾನೇ।।4।।

**ಉಷೆ ಬಂದಳು ನಿಶೆ ಕಳೆದು** **ರಾಗ:ಶುಭಪಂತುವರಾಳಿ**

ಉಷೆ ಬಂದಳು ನಿಶೆ ಕಳೆದು। ಜಗಕೆ ಹೊಸ ಯುಗ ತಂದಳು। ರಾತ್ರಿ ತೊರೆದು ಭೀತಿ ಮರೆತು। ಸುಖದ ಶಾಂತಿ ಮುಖ ತೋರುತ॥1॥ ನವಕಿರಣ ಭಾವ ಹರಣ। ಮಧುರ ಗಾನ ರಾಗ ಕೊಡುತ। ಮೋಹ ಸೆರಗ ಸ್ನೇಹ ಸೊಬಗ। ತಂಪಿನ ಚೆಂದ ಕಂಪ ಬೀರುತ॥2॥ ಮುದ್ದು ಮೊಗ್ಗನ್ನು ಎದ್ದು ನಿಲ್ಲಿಸಿ। ಚುಂಬನ ಕೊಟು ಹೋಗು ಬಂದಳು। ಭೂಮಿವೃಕ್ಷದಿ ಹಿಮ ಬಿಂದುವ। ಸುತ್ತ ಚೆಲ್ಲುತ ಮೋಹ ತಂದಳು॥3॥ ದುಂಬಿ ನೋಟಕೆ ತುಂಬಿ ರೂಪವ। ಸುತ್ತ ಚೆಂದ ನೋಟ ಕೊಡುತ। ಸುಮನದ ಗಂಧ ನೀಡುತ। ಸೊಬಗನೆಲ್ಲ ಹೊತ್ತು ತಂದಳು॥4॥ ಎಲ್ಲ ಏಳಿರಿ ಕಾಲ ನೋಡಿರಿ। ಅದಕೆ ತಡೆ ಇಲ್ಲ ಕಾಣಿರಿ। ಕರ್ತವ್ಯವೆಂಬ ಧರ್ಮ ತಿಳಿದು। ಶ್ರೀಸಾಹಸವ ಮಾಡುತಿರಿ॥5॥

**ಎಂಥ ದಿವ್ಯ ಭವ್ಯ ನೋಟ** **ರಾಗ: ಸಿಂಧುಭೈರವಿ**

ಎಂಥ ದಿವ್ಯಭವ್ಯ ನೋಟ। ದೈವ ಸೃಷ್ಟಿ ರಮ್ಯಆಟ। ಮನವನು ಸೆಳೆಯುವ। ಅಂದ ಚಂದ ಚೆಲ್ವ ನೋಟ॥ಪ॥ ತೇಲ್ ತೇಲುವ ಬಾನ್ ರವಿಯ। ಬೀಳ್ ಬೀಳುವ ಹೊಂಗಿರಣ। ಸೇರುತಲಿ ಅಲೆಯ ಕಡಲಿನಲಿ। ಕಣ್ಗೆ ಹಬ್ಬ ತಂದಿದೆ ಈ ನೋಟವು॥1॥ ಬನಬನದಾ ಕೋಗಿಲೆಯ। ಸಿಹಿಮಧುರ ಇಂಚರವು। ಚಿಮ್ಮುತಲಿ ಹೊರ ಹೊಮ್ಮುತಲಿ। ತಂಪು ಮನಕೆ ನೀಡಿದೆ। ಆ ಸ್ವರವು॥2॥ ಘಮ ಘಮದಾ ಮಲ್ಲಿಗೆಯು। ನಲಿನಲಿವಾ ಸಂಪಿಗೆಯು। ಅರಳುತಲಿ ಗಂಧ ಹರಡುತಲಿ। ಹಿಗ್ಗು ಸಗ್ಗದಿಂದಿದೆ ಎಲ್ಲ ಮನವು॥3॥

**ಎಲ್ಲಿ ಹೋಗುವಿರಿ ನಿಲ್ಲಿ ಮೋಡಗಳೆ** **ರಾಗ: ಪುನ್ನಾಗವರಾಳಿ**

ಎಲ್ಲಿ ಹೋಗುವಿರಿ ನಿಲ್ಲಿ ಮೋಡಗಳೆ ನಾಲ್ಕು ಹನಿಯ ಚೆಲ್ಲಿ। ದಿನ ದಿನವೂ ಕಾದು ಬಾಯಾರಿ ಬೆಂದು ಬೆಂಗದಿಹ ತಾಪದಲ್ಲಿ॥ಪ॥ ಜಡವಾದ ನನ್ನ ಬಡತನದ ನೋವು ನಿಮಗರಿವು ಆಗಲಹುದೇ। ನೀಲಿ ಮೋಡದಲಿ ತೇಲಿ ಹೋಗುತಿಹ ನಿಮ್ಮ ನೆಳೆಯಬಹುದೇ॥1॥ ಓಯ್ ಬನ್ನಿ ಬನ್ನಿ ಓಯ್ ತನ್ನಿ ತನ್ನಿ ನನ್ನೆದೆಗೆ ತಂಪ ತನ್ನಿ। ನೊಂದ ಜೀವರಿಗೆ ತಂಪನೀಯುವುದು। ಪರಮ ಪೂಜ್ಯವೆನ್ನಿ॥2॥ ಎನ್ನೆದೆಯ ಹಸಿರು ಉಸಿರು ಕುಗ್ಗಿದರು। ಬರಲಿಲ್ಲ ನಿಮಗೆ ಕರುಣೆ। ಎನ್ನ ಹೃದಯದಲಿ ನೋವು ಮಿಡಿಯುತಿದೆ ನಾನು ನಿಮಗೆ ಶರಣು॥3॥

**ಏಲಾವನ ಲವಲೀಬನ** **ರಾಗ: ಸಿಂಧುಭೈರವಿ**

ಏಲಾವನ ಲವಲೀಬನ ಲವಂಗ ಬನಗಳಲಿ। ನಾಗಲತಾ ಸಂಕುಲ ಬನವಾಸಿಯ ಜನಗಳಲಿ। ಲೀಲಾಂದೋಲಿತದೋಲಾ ಲಲನಾ ಮಣಿಗಳಲಿ॥ಪ॥ ಏಲಾಪದ ಲೀಲಾಪದ ಆಲಾಪದ ಸರಣಿ। ಸಖಸಖಿಯರ ಮೇಳಾಪದಿ ತೆರೆದಿರೆ ಎದೆ ಭರಣಿ। ಆಲಿಸುತಿವೆ ಮಾಲಿಸುತಿವೆ ಹರಿಣದ ಜತೆ ಹರಿಣಿ॥1॥ ಯಾಳದ ಜತಿ, ಏಳೆಯಗತಿ, ಏಳೇಳೇಳೆಂದು। ಎಬ್ಬಿಸಿ ಮಬ್ಬನು ಚೆದುರಿಸಿ ಬಾಳ್ ಬಾಳ್ ಬಾಳೆಂದು। ತಂತಿಯ ತಾಳಕೆ ಮಿಡಿದಿದೆ, ಎಲ್ಲಾಯಿತು ಒಂದು॥2॥ ಎಳೆಯ ಬಸಿರೊಳು ಮಲಗಿದ ಯಾವುದೋ ಗತಿಚಿತ್ರ। ದನಿ ಪಡೆದಿತು ತಿಳಿದೆದ್ದಿತು-ಕಣ್ಪಡೆದು ವಿಚಿತ್ರ। ಆ ಕ್ಷಣವನು ಈ ಕ್ಷಣವನು ಮಾಡಿತು ಸುಪವಿತ್ರ॥3॥

**ತಿಳಿಮುಗಿಲ ತೊಟ್ಟಿಲಲಿ** **ರಾಗ: ಶಿವರಂಜಿನಿ**

ತಿಳಿಮುಗಿಲ ತೊಟ್ಟಿಲಲಿ ಮಲಗಿದ್ದ ಚಂದಿರನ। ಗಾಳಿ ಜೋಗುಳ ಪಾಡಿ ತೂಗುತಿತ್ತು ತೂಗುತಿತ್ತು। ಜೋ... ಜೋ... ಜೋ... ಎಂದು ಹಾಡುತ್ತಿತ್ತು(2ಸಾರಿ) ॥ಪ॥ ಗರಿಮುದುರಿ ಮಲಗಿದ್ದ ಹಕ್ಕಿಗೂಡುಗಳಲ್ಲಿ। ಇರುಳು ಹೊಂಗನಸೂಡಿ ಸಾಗುತ್ತಿತ್ತು (2ಸಾರಿ)॥1॥ ಮುಗುಳಿರುವ ಹೊದರಿನಲಿ ನರುಗುಂಪಿನುದರದಲಿ। ಜೇನುಗನಸಿನ ಹಾಡು ಕೇಳುತ್ತಿತ್ತು (2ಸಾರಿ) ॥2॥ ತುಂಬು ನೀರಿನ ಹೊಳೆಯೊಳ್ ಅಂಬಿಗನ ಕಿರುದೋಣಿ। ಪ್ರಸ್ಥಾನ ಗೀತೆಯನು ಹೇಳುತ್ತಿತ್ತು(2ಸಾರಿ)

।।3।। ಬರುವ ಮುಂದಿನ ದಿನದ ನವನವೋದಯಕಾಗಿ। ಪ್ರಕೃತಿ ತಪವಿರುವಂತೆ ತೋರುತ್ತಿತ್ತು(2ಸಾರಿ) ।।4।। ಶಾಂತರೀತಿಯೊಳಿರುಳು ಮೆಲ್ಲ ಮೆಲ್ಲನೆ ಉರುಳಿ। ನಾಳಿನ ಶುಭೋದಯವ ಸಾರುತ್ತಿತ್ತು(2ಸಾರಿ) ।।5।।

### ತೆನೆತುಂಬಿ ಬಯಲೆಲ್ಲ — ರಾಗ: ಅಭೇರಿ

ತೆನೆತುಂಬಿ ಬಯಲೆಲ್ಲ ಹಸುರಾಗಿದೆ। ತಂಗಾಳಿ ತಾಬೀಸಿ ತಂಪೆರೆದಿದೆ। ಲಲನೆ ಹೋಲುತ ಮೈ ಬಳಸುತ। ಕಣ್ಮನ ಸೆಳೆಯುತ ತಾ ಸಾಗಿದೆ।ಅದು।।ಪ।। ಕೈ ತುಂಬ ಕೊಟ್ಟಾಗ ಕರುಣಾಳು ಬಾನು ಮೈ ದುಂಬಿ ಹರಿದಳೆ ಸುರಗಂಗೆ ತಾನು। ಜಗಕೆಲ್ಲ ಸಿಂಗಾರ ತಾನಾಗಿ ಬಂತು। ಭೂತಾಯಿ ಮೆರೆದಳೆ ವಧುವಾಗಿ ನಿಂತು।।1।। ದೈವಕ್ಕೆ ಶರಣಾಗಿ ಮೈಬಗ್ಗಿ ದುಡಿಯೆ। ಫಲ ಪೂರ ಪಡೆಯೆ ತಪವೆಲ್ಲ ಎರೆಯೆ। ನಾಡಿಗೆ ತೋರುತ ನಲ್ಮೆಯ ನೆಲೆಯ। ಭೂತಾಯಿ ತರುತಾಳೆ ಬಂಗಾರ ಬೆಳೆಯ।।2।।

### ನಡೆದಿದೆ ಪೂಜಾರತಿ ವಿಶ್ವದೇಹಿಗೆ — ರಾಗ: ಶ್ರೀ

ನಡೆದಿದೆ ಪೂಜಾರತಿ ವಿಶ್ವದೇಹಿಗೆ।।ಪ।। ನಭದ ನೀಲ ತಳಿಗೆಯಲ್ಲಿ ಚುಕ್ಕಿಚೆಲ್ಲಿದೆ। ರವಿಚಂದಿರ ನೀಲಾಂಜನ ಜ್ವಲಿಸಿ ಉರಿದಿದೆ।।1।। ಚಂದನವನ ಚಾಮರಾ ಬೀಸುತಲಿದೆ ಪರಿಮಳಾ। ಭೂ ಕಂಠದಿ ಹೊಮ್ಮಿದೆ ಹಕ್ಕಿ ಕಲರವಾ।।2।। ಕೋಟಿ ಕೋಟಿ ಗಿಡಮರ ಚಿತ್ರಾಂಕಿತ ಸ್ತಂಬ। ರಾಶಿ ರಾಶಿ ಬಣ್ಣದ ಹೂ ತಾಳಿ ಮೈಯ ತುಂಬ।।3।। ಸಾಗಿದೆ ದಿನ ದಿನವೂ ನೀರವ ಧ್ಯಾನ। ಸತ್ಯ ರೂಪಿ ಶಿವನಿಗೆ ಭಕ್ತಿಯ ನಮನ।।4।।

### ಪ್ರಕೃತಿಯ ಸೌಂದರ್ಯವು

ಪ್ರಕೃತಿಯ ಸೌಂದರ್ಯವು ಸುಕೃತದವರಿಗೆ ಲಭ್ಯವು। ಆತ್ಮದಲಿ ದೃಷ್ಟಿಯಿರಲು ಚಿತ್ರವಿಚಿತ್ರದ ಸೃಷ್ಟಿಯು।।ಪ।। ಭಕ್ತಿ ತುಂಬಿದ ಅರ್ಚನೆ ಮುಕ್ತಿ ಮಾರ್ಗ ಹಿರಿಬಯಕೆ। ಸರ್ವ ತ್ಯಾಗದ ನೈವೇದ್ಯ ಪರ್ವಕಾಲದ ಸಾನಿಧ್ಯ।।1।। ನೇಮ ನಿಷ್ಠೆಯ ಅರ್ಪಣೆ ಸೌಮ್ಯ ದೃಷ್ಟಿಯ ಅನುಕರಣೆ। ಪರ ಹಿತದ ಬಯಕೆಗಾಗಿ ಶ್ರೀದೇವ ನೊಲಿಸಿರಿ।।2।।

### ನೋಡಲು ಬನ್ನಿರಿ ಲಾಲ್ ಬಾಗ್

ನೋಡಲು ಬನ್ನಿರಿ ಲಾಲ್ ಬಾಗ್ ನೋಡಲು ಸೊಗಸಿದೆ ಲಾಲ್ ಬಾಗ್। ಆಡಲು ಪಾಡಲು ಲಾಲ್ ಬಾಗ್ಕೂಡಲು ಸಂತಸ ಲಾಲ್ ಬಾಗ್।।1।। ಗಾಜಿನ ಮನೆಯಿದೆ ಲಾಲ್ಬಾಗ್। ಸೋಜಿಗ ತೋರಿದೆ ಲಾಲ್ ಬಾಗ್। ತೇಜಸಿ ಮೆರೆವುದು ಲಾಲ್ ಬಾಗ್। ರಾಜಿಸುತಿರುವುದು ಲಾಲ್ ಬಾಗ್।।2।। ಜಿಂಕೆಯು ನವಿಲಿದೆ ಲಾಲ್ಬಾಗ್। ಅಂಕೆಯು ಇಲ್ಲದ ಲಾಲ್ಬಾಗ್। ಪಂಕಜ ಸರಿಸಿದೆ ಲಾಲ್ ಬಾಗ್। ಶಂಕೆಯು ತೋರದು ಲಾಲ್ ಬಾಗ್।।3।।

### ಬಾನಿನ ಜಗುಲಿಯ ನೀಲಿಯಲಿ — ರಾಗ: ಖರಹರಪ್ರಿಯ

ಬಾನಿನ ಜಗುಲಿಯ ನೀಲಿಯಲಿ। ಬಿಳಿಮುಗಿಲಿನ ಕೂಸಾಡುತಿದೆ। ಮುಗಿಲಾಡುತಿದೆ।।ಪ।। ಹಡಗಿನ ಪಟ ಹಿರಿ ಕಡಲಿನಲಿ। ಗುರಿಯಿಲ್ಲದೆ ತೇಲಾಡುತಿದೆ। ಮುಗಿಲಾಡುತಿದೆ।।1।। ಯಮುನೆಯ ನೀರಿನ ಹೊನಲಿನಲಿ। ನಿದ್ದೆಯ ಹಂಸವು ತೇಲುತಿದೆ। ಮುಗಿಲಾಡುತಿದೆ।। ನೀಲಿಯ ತೈಲದ ಬಟ್ಟಲಲಿ ಬೆಣ್ಣೆಯ ಮುದ್ದೆಯ ಹೋಲುತಿದೆ। ಮುಗಿಲಾಡುತಿದೆ।।2।। ಹಸುರುನು ಹಾಸಿದ ತೊಟ್ಟಿಲಲಿ। ಬಿಳಿಗನಸಿನ ಕೂಸಾಡುತಿದೆ। ಶಿಶು ನಿದ್ರಿಸಿದೆ।। ಅಮ್ಮನ ಕಣ್ಣಿನ ಕಪ್ಪಿನಲಿ। ತಮ್ಮನ ಚಿತ್ರವು ಮುದ್ರಿಸಿದೆ। ಮುಗಿಲಾಡುತಿದೆ।।3।।

### ಬೆಳಗಾಗಲು ಅರುಣ ಮೂಡಿಬಂದ

ಬೆಳಗಾಗಲು ಅರುಣ ಮೂಡಿಬಂದ। ಕಮಲ ಅರಳಿ ನಿಲ್ಲಲು ಭ್ರಮರ ಓಡಿ ಬಂದ।।ಪ।। ನವ ಪ್ರಭಾತ ಬಂದು ಜಗತೆ

ಸೊಗಸ ತರಲು। ಹೊನಲ ಕಿರಣ ಸೂಸಿ ಮನಕೆ ಮೋದ ತಣಿಸಿತು॥ ಉದಯರಾಗ ಪಾಡಿ ಹಕ್ಕಿ ಜೊತೆಯ ಕೂಡಿ। ಪುಟ್ಟ ರೆಕ್ಕೆ ಬಡಿಯುತ ಮುಂದೆ ಹಿಂದೆ ನಡೆದು॥1॥ ತಾಯಿ ಮುಖವ ನೋಡುವ ಕಿರು ನಗೆಯ ಬೀರಿ। ಮುದ್ದು ಮಗುವ ಕರೆದು ಎಬ್ಬಿಸಿ ಚಂದ ಮುಖವ ತೋರಿತು॥ ತಾಯಿ ಮಗುವು ಕೂಡಿ ದೇವ ಧ್ಯಾನ ಮಾಡುತ। ಶ್ರೀಶುಭವ ಬಯಸಿ ಜಗದ ಜನಕೆ ಹರಸಲು॥2॥

**ಬೆಳಗಿನಲ್ಲಿ ಬೆಳಕು ಚೆಲ್ಲಿ** **ರಾಗ : ಶುಭಪಂತುವರಾಳಿ**

ಬೆಳಗಿನಲ್ಲಿ ಬೆಳಕು ಚೆಲ್ಲಿ। ಬಿಳಿಯ ಮುತ್ತು ಸುರಿಸಲು। ಉಷೆಯನಿಳೆಗೆ ಸ್ವಾಗತಿಸಲು। ಜಗವು ನಗಲು ಕುಲುಕುಲು॥ಪ॥ ಝುಳು ಝುಳು ಝುಳು ಹರಿವ ಹಳ್ಳ। ಮೆಲ್ಲ ಮೆಲ್ಲನೆ ಸಾಗಿದೆ। ಈ ಹೂಗಳು ಸವಿ ಪರಿಮಳ। ಬೀರಲೆನುತ ಸಾಗಿದೆ॥1॥ ಬಾನಿನಲ್ಲಿ ಹಕ್ಕಿ ಸಾಲು। ಧರೆಯ ಕಡೆಗೆ ನೋಡುತ। ಏರುತಿಹುದು ಹಾರುತಿಹುದು। ಉದಯರಾಗ ಹಾಡುತ॥2॥ ಏಸು ಬಣ್ಣ ತಳೆವುದೆನ್ನ। ವೈಖರಿಯ ಚೆಲುವನು ಸಾರುತ। ಕುಣಿ ಕುಣಿಯುತ ಬಂದಳುಷೆಯು। ಭುವಿಗೆ ಶುಭವ ಕೋರುತ॥3॥

**ಬಂಗಾರ ನೀರ** **ರಾಗ: ಶಂಕರಾಭರಣ**

ಬಂಗಾರ ನೀರ ಕಡಲಾಚೆಯೀಚೆಗಿದೆ ಸ್ವರ್ಗ ನೀಲ ನೀಲ। ತೆರೆ ಮಿಂಚು ಬಳಗ ತೆರೆತೆರೆಗಳಾಗಿ ಅಲೆಯುವುದು ಪುಟ್ಟ ಪೂರ॥ಪ॥ ಅದು ನಮ್ಮೂರ ತೀರ ಇದು ನಿಮ್ಮೂರ ತೀರ ತಂತಮ್ಮ ಊರ ತೀರ। ನಮ್ಮೊಳಗೆ ತಾವು ಅದರೊಳಗೆ ನಾವು ಅದು ಇಲ್ಲವಣ್ಣ ದೂರ॥1॥ ಇದು ಸಮಯವಣ್ಣ ಇದು ಸಮಯತಮ್ಮ ನಮ್ಮ ನಿಮ್ಮ ಆತ್ಮಗಳಿಗೆ। ಹರಿದಾಗ ಭಾವ ಬೆರೆತಾಗ ಜೀವ ಅದರೊಳಗೆ ಬಳಿಗೆ ಬಳಿಗೆ॥2॥ ಕರೆ ಬಂದಿತಣ್ಣ ತೆರೆ ಬಂದಿತಣ್ಣ। ನೆರೆ ಬಂದಿತಣ್ಣ ಬಳಿಗೆ। ಅಂಬಿಗನು ಬಂದ ನಂಬಿಗನು ಬಂದ ಬಂದದೋ ದಿವ್ಯ ಘಳಿಗೆ॥3॥ ಇದು ಉಪ್ಪು ನೀರು ಕಡಲಲ್ಲಿ ನಮ್ಮ ಒಡಲೊಳಗೆ ಇದರ ನೆಲೆಯು। ತಿಳಿದವಗೆ ಮಾತ್ರ ತಿಳಿದಾದ ಇದರ ಬೆಲೆಯೂ। ಕಣ್ಣರಳಿದಾಗ ಕಣ್ಣೊರಳಿದಾಗ ಎಲ್ಲೆಲ್ಲು ಇದರ ಹೊಳೆಯು॥4॥

**ಬಂತಿದೋ ಓಹೋ ಬಂತಿದೋ** **ರಾಗ: ಶುದ್ಧಧನ್ಯಾಸಿ**

ಬಂತಿದೋ ಓಹೋ ಬಂತಿದೋ। ಬೃಂದಾವನದಿಂದ ವಸಂತ ಮಧುರ ಮಾಸ॥ಪ॥ ನೀಲಗಗನ ತೇಲಿಸುವ ನೀಲ ಸುಭಗಹಾಸ। ಬಂತಿದೋ ಓಹೋ ಬಂತಿದೋ॥ಅ.ಪ॥ ಹಸಿರು ನೆಲದ ಹೂವ ಮೇಲೆ ಬಣ್ಣದೊಂದು ಚಿಟ್ಟೆ ಕುಳಿತು। ದಿಗಿಲಿನಿಂದ ಮುದುರಿಕೊಂಡು ತರತೊಡಗಿದೆ ಮಂದಹಾಸ॥1॥ ಮಾವು ಬೇವು ಹೊಂಗೆ ಆಲ ಚಿಗುರಿ ಅರಳಿ ಹೂವ ಸೂಸಿ। ಅರಳಿ ಕಣ್ಣ ಕಂಪ ಬೀರಿ ರೂಪಿಸಿಹುದು ವನವಿಲಾಸ॥2॥ ಕೊಳಲಿನುಲಿಯು ಕೇಳುತಿಹುದು ನವಿಲ ನೋಟ ತೋರುತಿಹುದು। ಬಯಲಿನಾಟ ಕಾಣುತಿಹುದು ಬೀರುತಿಹುದು ಜೀವಶ್ವಾಸ॥3॥ ಏನು ಭುವನ ಭವ್ಯ ರಾತ್ರಿ। ಎಂಥ ದಿವಸ ದಿವ್ಯ ರಾತ್ರಿ। ಯಾರು ಇಲ್ಲಿ ಎನಗೆ ಮಂತ್ರಿ ನಾನೇ ಇಲ್ಲಿ ರಾಜ ತಂತ್ರಿ॥

**ಭೂಮಿನ್ ತಬ್ಬಿದ್ ಮೋಡ್ ಇದ್ದಂಗೆ** **ರಾಗ:ಶಂಕರಾಭರಣ**

ಭೂಮಿನ್ ತಬ್ಬಿದ್ ಮೋಡ್ ಇದ್ದಂಗೆ। ಬೆಳ್ಳಿ ಬಳ್ದಿದ್ ರೋಡ್ ಇದ್ದಂಗೆ। ಸಾಫಾಗ್ ಅಳ್ಳ ತಿಟ್ಟೆಲ್ದಂಗೆ। ಮಡಕೇರೀಲಿ ಮಂಜು॥1॥ ಮಡಗಿದ್ ಅಲ್ಲೇ ಮಡಿಗಿದ್ದಂಗೆ। ಲಂಗರ್ ಬಿದ್ದಿದ್ ಅಡಗಿದ್ದಂಗೆ। ಸೀತಕ್ ಸಕ್ತಿ ಉಡಗೋದಂಗೆ। ಅಳ್ಳಾಡಲ್ದು ಮಂಜು॥2॥ ತಾಯಿ ಮೊಗೀನ್ ಎತ್ಕೊಂಡಂಗೆ। ಒಂದಕ್ಕೊಂದು ಇಡ್ಕೊಂಡಂಗೆ। ಮಡಕೇರೀನ ಎದೆಗೊತ್ಕೊಂಡಿ ಜೂಗೀಡ್ಸಿತ್ತು ಮಂಜು॥3॥ ಮಲಗಾಕ್ ಸೊಳ್ಳೆಪರದೆ ಕಟ್ಟಿ। ಒದಿಯಾಕ್ ಒಗದಿದ್ ದುಪಟಿಕೊಟ್ಟಿ। ಪಕ್ದಾಗ್ ಗಂಧದ್ ಧೂಪ ಆಕ್ದಂಗ್। ಮಡಕೇರೀಮೇಲ್ ಮಂಜು॥4॥ ಸೂರ್ಯನ್ ಕರೆಯೋಕ್

ಬಂದ್ ನಿಂತೋರು। ಕೊಡಗೀನ್ ಎಲ್ಲಾ ಪೂವಮ್ನೋರು। ತೆಳ್ಳೆ ಬೆಳ್ಳೆ ಬಟ್ಟೇನಾಕಿ। ಬಂದಂಗಿತ್ತು ಮಂಜು॥5॥ ಚಿಮ್ತಾನಿದ್ರ್ ಎಳ್‌ಬಿಸ್ಲಿನ್ ಕೆಂಪು। ಮಂಜಿನ್ ಬಣ್ಣ ಕಣ್ಗೆ ತಂಪು। ಕೊಡಗೀನ್ ಲಸ್ಮೀರ್ ಪೂವಮ್ನೋರ್ಗೆ। ಆಲಿನ್ ಸೌಂದ್ರೀ ಮಂಜು॥6॥ ತೈಲ ನೀರಿನ್ ಮ್ಯಾಗಿದ್ದಂಗೆ। ಪೂವಮ್ಮನನ್ ತಂಗಿದ್ದಂಗೆ। ಬಿಟ್ಟು ಬಿಡದಂಗ್ ಇಡ್ಕೊಂತಿತ್ತು। ಮಡಕೇರೀಗೆ ಮಂಜು॥7॥ ಅಗಲೆ ಇರಲಿ ರಾತ್ರೆ ಬರ್ಲಿ। ಬಿಸಿಲು ನೆಳ್ಳು ಏನೆ ಇರ್ಲಿ। ಕಣ್ಮರೆಯಾಗಾಕ್ ತಾವ್‌ಕೊಡಲ್ದು। ಮಡಕೇರೀಗೆ ಮಂಜು॥8॥

## ಭೃಂಗದ ಬೆನ್ನೇರಿ ಬಂತು — ರಾಗ: ಶುದ್ಧಧನ್ಯಾಸಿ

ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸಾ॥ ಮಸೆದ ಗಾಳಿ ಪಕ್ಕೆ ಪಡೆಯುತಿತ್ತು ಸಹಜ ಪ್ರಾಸಾ। ಮಿಂಚಿ ಮಾಯವಾಗುತ್ತಿತ್ತು ಒಂದು ಮಂದಹಾಸಾ॥1॥ ಎಲ್ಲೆಲ್ಲೂ ಸೃಷ್ಟಿದೇವಿಗಿಟ್ಟ ಧೂಪ ಧೂಮಾ। ಲಹರಿ ಲಹರಿ ಕಂಪ ಬಳ್ಳಿ ಚಿತ್ತರಂಗ ಭೂಮಾ। ದಾಂಗುಡಿಗಳ ಬಿಡುತಲಿತ್ತು ಅರಳಲಿತ್ತು ಪ್ರೇಮಾ॥ಭೃಂ॥2॥ ಮಾತು ಮಾತು ಮಥಿಸಿ ಬಂದ ನಾದದ ನವನೀತ। ಹಿಗ್ಗ ಬೀರಿ ಹಿಗ್ಗಲಿತ್ತು ತನ್ನ ತಾನೆ ಪ್ರೀತಾ। ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತ॥3॥

## ಮಿನುಗುತಿವೆ ತಾರೆಗಳು — ರಾಗ:ಕಲ್ಯಾಣಿ

ಮಿನುಗುತಿವೆ ತಾರೆಗಳು ಗಗನದಲ್ಲಿ। ಕೈ ನೀಡಿ ಕರೆಯುತಿವೆ ಕೂಡಿ ನಲಿಯಲು॥ಪ॥ ನಮ್ಮ ಅಂದಾದ ಲೋಕದಲ್ಲಿ ಸುಖ ಇಹುದು। ನಿತ್ಯ ಚಂದದಾ ನೋಟ ತುಂಬಿಹುದು। ಸಖ್ಯ ಭಾವದಿಂದ ನಾವು ಸೇವೆ ಗೈವಾ। ಬನ್ನಿಮಾನವರೆ ನಮ್ಮ ಬಳಿ ಎಂದು॥1॥ ನಮ್ಮಲ್ಲಿ ಐಕ್ಯತೆಯು ಕೂಡಿಹುದು। ಲೋಕಕ್ಕೆ ಸತ್ಯವಾ ತೋರುತಿಹೆವು। ಬನ್ನಿ ಗೆಳೆಯರೇ ನೀವು ಒಂದಾಗಿ ಬಾಳುವ। ಜೀವನದಿ ಸವಿಯ ಸುಖ ಕಾಣೆರೆಂದು॥2॥ ನಮ್ಮ ಜೀವನವು ಪುಳಕಿತವು ಎಂದೆಂದು। ದಿವ್ಯಜ್ಞಾನದ ಜ್ಯೋತಿ ನಮ್ಮಲ್ಲಿಹುದು। ಯುದ್ಧ ಬೀತಿಯನು ಕಾಣೆವು ನಾವು। ತಿಳಿಯ ಬನ್ನಿರಿ ನಮ್ಮ ಶ್ರೀ ಶಕ್ತಿ ಎಂದು॥3॥

## ಮುಗಿಲ ಮುತ್ತುಗಳನ್ನು ಕರಿಮೋಡ — ರಾಗ:ಶುಭಪಂತುವರಾಳಿ

ಮುಗಿಲ ಮುತ್ತುಗಳನ್ನು ಕರಿಮೋಡ ಚಾಣಿಸಿತು। ನೆಲದ ಚಿಪ್ಪೊಳು ಬಿತ್ತು, ಅಲ್ಲಿ ಇಲ್ಲಿ ಧರೆಯೆದ್ದು। ಹಸಿರ ಕಣ್ಣರಳಿಸಿತು ಬಯಲಿನಲಿ। ಬೀಳು, ಆ ಈ ಕಂಟಿ, ಟೊಂಗೆಗಳಲಿ॥1॥ ಮನೆಯ ಕೈ ತೋಟದಲಿ ನಂದನವು ತೊದಲಿತೋ। ಮಳೆಬಿಲ್ಲು ಅರಳಿದುವು ಬೇಲಿಯಲಿ। ಹಸಿರೆಲೆಯ ತುದಿಗೆ ಹೂ ಬಣ್ಣ, ಬತ್ತಿಯ ಬೆಳಕು। ಜೋಕಾಲಿ ಜೀಕಿತೋ ದೀಪಾವಳಿ॥2॥ ತೊಯ್ದು ಗದ್ದೆಯ ತಯಲೆ ಬಾಚಿ ಹೆಣೆಯಿತು। ಗಾಳಿಷ ಕುಣಿದಾಡಿತೋ ಬಿದಿರ ಮೈಯ ತುಂಬಿ। ಹರೆ ಬಂತು ಝುರಿತೊರೆಗು, ಹರಿಗೂ, ಚರಂಡಿಗೂ। ಬಿಳಿಮೋಡ ನಕ್ಕವೋ ಬುರುಗು ತುಂಬಿ॥3॥ ಗುಳ್ಳವ್ವ ಉರುಳಾಡಿ ಊರೊಳಗೆ ಬಂದಳೋ। ಹುಲುಸು ಕನವರಿಸಿಹುದು ಹೊಲವ ತೂಗಿ। ಒರಟು ಮೂಗನು ತಿರುವಿ ರಂಗೋಲಿ ಬಿಡಿಸಿತೋ। ಚದುರಂಗಿ ಅಲ್ಲಲ್ಲಿ ಕೆಂಪು ಹಳದಿ॥4॥ ಬದಿಯ ಗುಡಿಸಲಿನಲ್ಲಿ ಅಳುವ ತೊಟ್ಟಿಲವೇಕೊ। ಚಿಗುರುನಗೆ ನಕ್ಕು ಚಿಲಿಪಿಲಿಸಿ ತಂದ। ಮೊಲೆಯೂಡಿ ಅಂಗಾಲ ತೊಳೆದ ತಾಯೆದೆಯೊಲವು। ಜೋಗುಳವ ಹಾಡಿತ್ತು; ಕುಡಿಯೊ ಕಂದ॥5॥

## ಮುಗಿಲೆ ಮುಗಿಲೆ ಓ ಮುಗಿಲೆ ಆಕಾಶದ — ರಾಗ:ಸಾವೇರಿ

ಮುಗಿಲೆ ಮುಗಿಲೆ ಓ ಮುಗಿಲೆ ಆಕಾಶದ ಆ ನೀಲಿಮ ಪಥದಲಿ ಹೊಳೆಯುವ ಬೆಳ್ಮುಗಿಲೆ ಓ ಬೆಳ್ಮುಗಿಲೇ ಬೆಳ್ಳಿ ಬೆಳ್ಳಿ ಮುಗಿಲೇ॥ಪ॥ ಶುಭದ ಸೊಗದ ಓ ಶಾರದ ನೀಲಿಮ ಗಗನಗಾಮಿ ಮುಗಿಲೇ। ಕಾಳಿದಾಸನ ಮೇಘದೂತನೆ

ಎತ್ತಣಿಂದ ಬಂದೆ। ಯಾವ ಯಕ್ಷನ ವಿರಹದುರಿಯ ನೀ ಹೊತ್ತು ತಂದೆ।। ವ್ಯೋಮ ಕೇಶನ ಮುಡಿಯ ಸೇರುವ ಹಿರಿಯ ಹಂಬಲೇನೋ। ರಾಮಗಿರಿಗೆ ಸಂದೇಶವೇನೋ ತುಸು ನಿಲ್ಲಬಾರದೇನೋ।।1।। ಬೆಳ್ಳಿ ಮುಗಿಲೇ ಬೆಳ್ಳಕ್ಕಿ ಸಾಲು ನಿನ್ನತ್ತ ಹಾರುತಿಹುದು। ಹೊಳೆವ ಹಿಮದ ಮುಸುಕೊಳಗೆ ಹಸಿದು ನಿನ್ನನ್ನೇ ನೋಡುತಿಹುದು। ಯಾವ ಬೆಸುಗೆ ವಸಗೆಯನು ತಂದೆ ನನ್ನೊಡನೆ ಹೇಳು ಬಂದೆ। ಯಾವ ಕನಸಿನ ಮೇಘಮಾಲೆಯ ಕಟ್ಟಬಂದೆ ಇಂದು ನೀ ಕಟ್ಟ ಬಂದೆ ಇಂದು।।2।।

**ಮುಗಿಲ ಮಾರಿಗೆ ರಾಗ ರತಿಯ** ರಾಗ: ಮೋಹನ

ಮುಗಿಲ ಮಾರಿಗೆ ರಾಗ ರತಿಯ ನಂಜಾ ಏರಿತ್ತಾ। ಆಗ ಸಂಜೆಯಾಗಿತ್ತಾ।। ನೆಲದ ಅಂಚಿಗೆ ಮಂಜಿನ ಮುಸುಕು ಹ್ಯಾಂಗೊ ಬಿದ್ದಿತ್ತಾ ಗಾಳಿಗೆ ಮೇಲಕ್ಕೆದ್ದಿತ್ತಾ।।1।। ಬಿದಿಗೇ ಚಂದ್ರನ ಚೊಗಚೀ ನಗಿಹೂ ಮೆಲ್ಲಗೆ ಮೂಡಿತ್ತಾ। ಮ್ಯಾಲಕ ಬೆಳ್ಳಿನ ಕೂಡಿತ್ತಾ ಆ....।। ಇರುಳು ಹೆರಳಿನಾ ಅರಳ ಮಲ್ಲಿಗೀ ಜಾಳಿಗೆ ಹಾಂಗಿತ್ತಾ। ಸೂಸ್ಯಾವ ಚಿಕ್ಕಿ ಅತ್ತಿತ್ತಾ।।2।। ಬೊಗಸಿಗಣ್ಣಿನಾ ಬಯಕೆಯ ಹೆಣ್ಣು ನೀರಿಗೆ ಹೋಗಿತ್ತಾ ತಿರುಗಿ ಮನೀಗೆ ಸಾಗಿತ್ತಾ।। ಕಾಮಿಬೆಕ್ಕಿನ್ಹಾಂಗ ಭಾವೀ ಹಾದೀ ಕಾಲಾಗ ಸುಳೀತ್ತಿತ್ತಾ। ಎರಗಿ ಹಿಂದಕ್ಕುಳಿತಿತ್ತಾ।।3।। ಮಳ್ಳಗಾಳಿಸುಳಿ ಕಳ್ಳ ಕೈಲೆ ಸೆರಗನು ಹಿಡಿದಿತ್ತಾ ಮಕ ಮಕ ಬೆರಗಿಲೆ ಬಿಡುತ್ತಿತ್ತಾ।। ಬಂದ ಮನದ ಗಿಣಿ ಹಿಂದ ನೆಳ್ಳಿಗೆ ಬೆನ್ನಿಲೆ ಬರುತ್ತಿತ್ತಾ ತನ್ನ ಮೈ ಮರ ಮರೆತಿತ್ತ।।4।।

**ಯಮುನಾಜಲ ಕಲಕಲರವ** ರಾಗ: ಮಧ್ಯಮಾವತಿ

ಯಮುನಾಜಲ ಕಲಕಲರವ ಕೊಳಲೂದಿದ ಹಾಗೇ। ಧಾವಿಸುತಿಹ ಗಾಳಿಯತೆರೆ ಗೋಪಿಕೆಯರ ಹಾಗೇ।।ಪ।। ಜಲದಲೆಗಳ ನಲಿದಾಟವು ರಾಸಲೀಲೆಯಾಗಿ। ಈ ದೃಶ್ಯವೇ ಆ ಕೃಷ್ಣನ ಬೃಂದಾವನವಾಗಿ। ನವಿರೆದ್ದಿತು ಮೈ ಮರೆತಿತು ತೀರದಿ ನಿಂತಿರಲು। ಎಚ್ಚೆತ್ತಿಹ ಕವಿಕಲ್ಪನೆ ವಿಸ್ಮಯವಾದಂತಿರಲು। ತೀರದಿ ನಿಂತಿರಲೂ ವಿಸ್ಮಯವಾದಂತಿರಲು।।1।। ಕಾವೇರಿಯ ಕಟ್ಟೆಯ ಬಳಿ ಇಂದ್ರಜಾಲವರಳಿ। ನಂದನವನವೇಕೋ ಕಳಚಿ ಭೂಮಿಯ ಮೇಲುರುಳಿ। ಮಣ್ಣಿನೆದೆಯ ಚೆಲುವಿನಮನ ಕೆರಳಿ। ವೃಂದಾವನ ತಲೆಎತ್ತಿದೆ ನಮ್ಮ ಹೆಮ್ಮೆ ಮರಳಿ। ಕನ್ನಡಿಗರ ಕನಸುಗಳಿವು ಈ ದೀಪದ ಸಾಲು। ಅವರಾಸೆಯ ಭಾಷೆಗಳಿವು ಕಾರಂಜಿಯ ಸಾಲು। ಈ ದೀಪದ ಸಾಲು..... ಕಾರಂಜಿಯ ಸಾಲು।।2।।

**ಲಾಸ್ಯವಾಡೆ ಬಾರೆ ಉಷೆ** ರಾಗ: ಖರಹರಪ್ರಿಯ

ಲಾಸ್ಯವಾಡೆ ಬಾರೆ ಉಷೆ ಲಾಸ್ಯವಾಡೆ ಬಾ। ಹಾಸ್ಯ ಬೀರಿ ಬಾರೆ ಉಷೆ ಹಾಸ್ಯ ಬೀರಿ ಬಾರೆ।।ಪ।। ಬಾಬಾ।। ಬೇಡ ಈಗ ಸಂಧ್ಯಾ ಉಷೆ ತೊಲಗಲಿನ್ನು ಉಳಿದನಿಶೆ। ಎಂಟು ದಿಸೆಗೆ ಎಂಟೂ ದಿಸೆ ಸ್ಥಗಿತವಿದೆ ಬಾರೆ। ಎಂಟು ದಿಸೆಗೊಲಿವೆ ಬಾರೆ।।1।। ತೊರೆದು ಮೂಡಲೊಡಲ ಸದ್ದು ಕೇಳಿಸದೆ ಕಾಲಗೆಜ್ಜೆ। ನಿದ್ದೆ ತೊರೆದು ಬಾ ಎದ್ದು ಬೇಗ ಬಾರೆ।।2।। ದುಂಬಿ ತಂಡ ನಿನ್ನ ಮುಖ ಹಾಡಿ ಕರೆವ ಮೊದಲು। ಎಂದು ಬರುವನು ಆ ರವಿ ಚಂದ ಕರೆದು। ಬಾರೆ ಮುಂದೆ ರವಿಯುದಿಸಿದೆ।।3।।

**ವಸಂತ ಬಂದನು ನಗುನಗುತ** ರಾಗ:ವಸಂತ

ವಸಂತ ಬಂದನು ನಗುನಗುತ। ಎಲೆಗಳ ಉದುರಿಸಿ ಮರಗಳ ಚಿಗುರಿಸಿ। ವಸಂತ ಬಂದನು ನಗುನಗುತ। ಚಳಿಯನು ಜಪಿಸಿ, ಹಕ್ಕಿಯ ಕೂಗಿಸಿ। ಹಾಡಲು ಕರೆವನು ಬಾರೆನುತ।।1।। ಹೂಗಳ ಅರಳಿಸಿ ಗಂಧವ ಚೆಲ್ಲಿಸಿ। ಕವಿಗಳ ಕರೆವನು ನೋಡೆನುತ। ಅಂದವ ಚೆಲ್ಲುತ ಚಂದವ ತೋರುತ। ಭೃಂಗವ ಕರೆವನು ಹಾಡೆನುತಾ।।2।। ಬಿಸಿಲನು ಏರಿಸಿ ನೀರನು ಕಾಯಿಸಿ। ಮಳೆಯನು ಸುರಿಸುವ ಭುವಿಯತ್ತ। ಬಂದನು ವಸಂತ ಕಂಡನು ಅನಂತ। ಋತುಗಳ ರಾಜ ತಾನೆನುತ।।3।।

**ವಸಂತ ಬಂದ ಋತುಗಳ ರಾಜ** ರಾಗ:ವಸಂತ

ವಸಂತ ಬಂದ ಋತುಗಳ ರಾಜ ತಾ ಬಂದ। ಚಿಗುರನು ತಂದ ಹೆಣ್ಣಳ ಕುಣಿಸುತ ನಿಂದ। ಚಳಿಯನು ಕೊಂದ, ಹಕ್ಕಿಗಳುಲಿಗಳೆ ಚೆಂದ। ಕೂವೂ ಜಗ್ ಜಗ್ ಪುವ್ವೀ ಟೂವಿಟ್ಟವೂ।। 1।। ಕುರಿನೆಗೆದಾಟ, ಕುರುಬರ

ಕೊಳಲಿನೂದಾಟ। ಇನಿಯರ ಬೇಟ। ಬನದಲಿ ಬೆಳದಿಂಗಳೂಟ ಹೊಸ ಹೊಸ ನೋಟ। ಹಕ್ಕಿಗೆ ನಲಿವಿನ ಪಾಠ, ಕೂವೂ ಜಗ್ ಜಗ್ ಪೂವ್ವೀಟೂವಿಟ್ಟವೂ॥2॥ ಮಾವಿನ ಸೊಂಪು। ಮಲ್ಲಿಗೆ ಬಯಲೆಲ್ಲಾ ಕಂಪು। ಗಾಳಿಯ ತಂಪು ಜನಗಳ ಜಾತ್ರೆಯ ಗುಂಪು। ಕಿವಿಗಳಿಗಿಂಪು ಹಕ್ಕಿಗಳುಲುಹಿನ ಪೆಂಪು ಕೂವೂ ಜಗ್ ಜಗ್ ಪೂವ್ವೀಟೂವಿಟ್ಟವೂ। ಬಂದ ವಸಂತ ನಮ್ಮ ರಾಜ ವಸಂತ॥3॥

**ಹೊಸ ವಸಂತದ ಶುಭ ಮುಂಜಾವದಿ** **ರಾಗ: ಮೋಹನ**

ಹೊಸ ವಸಂತದ ಶುಭ ಮುಂಜಾವದಿ ಮೆಲ್ಲನೆ ಬಂದಿತು ಹೊಸ ವರುಷ। ಜೀವ ಸಂಕುಲದ ಜೀವ ಜೀವಾಳದಿ ಝಿಲ್ಲನೆ ಚಿಮ್ಮಿತು ಹೊಸ ಹರುಷ॥ಪ॥ ಕೋಗಿಲೆ ಕೊರಳಿನ ಸವಿ ಇಂಚರದಲಿ ಕರ್ಣಾನಂದದ ಹೊಸಗಾನ। ಮಾವಿನ ಹೂಗಳ ತೊಂಗಲಿನೆದೆಯಲಿ ಮರಿದುಂಬಿಗಳ ಮಧುಪಾನ॥ ತರುಲತೆ ಚಿಗುರಿನ ವರ್ಣಛಾಯೆಯಲಿ ಭೂಮಿಗೊಂಡಿದೆ ಶೃಂಗಾರ। ಹೊಸ ಬೆಳಕಿನ ಹೊಂಬಣ್ಣದ ಮೆರುಗಲಿ ಬಾನು ಗೊಂಡಿದೆ ಬಂಗಾರ ॥1॥ ಬೇವಿನ ಬದುಕಿನ ಬೆಲ್ಲದೊಸುಗೆಯಲಿ ತುಂಬಿದೆ ಒಲುಮೆಯ ಸಂದೇಶ। ನೋವು ನಲಿವು ಸಮ್ಮಿಶ್ರದ ಬೆಸುಗೆಯೇ ಬಾಳ ಗೆಲುವಿನ ಯಶಸೂತ್ರ॥2॥ ಇರಲಿ ಇರಲಿ ಈ ಹೊಸತನ ಬಾಳಲಿ ಎಂದಿಗು ಅಳಿಯದೆ ಅನುಗಾಲ। ಎಲ್ಲರೆದೆಯಲು ತುಂಬಿ ತುಳುಕಲಿ ನವ ಸಂತೋಷವು ಚಿರಕಾಲ॥3॥

**ಶತಶತಮಾನದ** **ರಾಗ : ಅಮೃತವರ್ಷಿಣಿ**

ಶತಶತಮಾನದ ಜಯಜಯ ಗಾನದ। ಯಶ ಸಮ್ಮಾನದ ಪ್ರಹರಿ।ಹೃದಯಾಕಾಶದ ಉದಯಾನಲ ಭಗವಾವಿಜಯ ವಿಹಾರಿ॥ಪ॥ ದಿನದಿನದರುಣೋದಯ ರಾಗದೊಳು। ನಾಡಿಗೆ ನಡೆದಿಹ ತಪ ತ್ಯಾಗದೊಳು। ಸಿಂಧು ತೀರದ ಶತಯಾಗದೊಳು।ಘೋಷಿತಗೊಳುತಿದೆ ದೇಶದಲಿ ಓಂ(3ಸಾರಿ) ಜ್ವಾಲಾ ಜಿಹ್ವೆಯ ಘನ ಗಂಭೀರ ಸ್ವರ ಬಾಳಿನ ಗುರಿ ಬಿತ್ತರಿಸುತಲಿ। ಬಾನೆತ್ತರಕ್ಕೇರಿದೆ ಭಗವಾ ಪ್ರಖರ॥1॥ ದಿವ್ಯ ತಪೋವನದಾ ಆರಾಧನೆ। ನೃಪ ಪೀಠಂಗಳ ಚೇತನ ಪ್ರಾಣ। ತವ ದಕ್ಷಿಣ ತನುಮನಧನ ಪ್ರಾಣ। ರಾಷ್ಟ್ರಾರ್ಚನೆಗರಳುತಲಿರಲಿ॥ ಭೂಮಾತೆಯ ಒಡಲೀಯುವ ಬಹು ಜನುಮ ಪಾವನ ಕೃಪೆ ಜೀವನ ತುಂಬ। ಸಾರ್ಥಕಗೊಳುತಿರಲಿ ನವ ಪ್ರಾಣಸುಮ॥2॥ ರಾಷ್ಟ್ರೋದ್ಧಾರದ ಶತ ಸಮರದೊಳು। ನೆಲ ನುಂಗಿದ ಕಣಕಣ ರುಧಿರದೊಳು। ನಶ್ವರ ನರದೇಹದ ಹೃದಯದೊಳು। ಪ್ರಜ್ವಲಿಸುತ ಮೇಲೇಳಲಿದೆ। ಅವಿನಶ್ವರ ಯಜ್ಞೇಶ್ವರನವತಾರ। ಸ್ಫೂರ್ತಿಯ ನೆರೆಯುತ ಪ್ರೇರಿಸಿದೆ। ಪ್ರಾಚೀನ ನಿಶಾನೆಯ ನಭೋವಿಹಾರ॥3॥

**ಶ್ರಾವಣ ಬಂತು ಕಾಡಿಗೆ** **ರಾಗ: ಸಾವೇರಿ**

ಶ್ರಾವಣ ಬಂತು ಕಾಡಿಗೆ ಬಂತು ನಾಡಿಗೆ ಬಂತು ಬೀಡಿಗೆ ಓ ಬಂತು ಶ್ರಾವಣ॥ಪ॥ ಕಡಲಿಗೆ ಬಂತು ಶ್ರಾವಣ ಕುಣಿದ್ಹಾಂಗ ರಾವಣಾ। ಕುಣಿದಾವ ಗಾಳಿ ಭೈರವನ ರೂಪ ತಾಳಿ॥1॥ ಶ್ರಾವಣ ಬಂತು ಘಟ್ಟಕ ರಾಜ್ಯ ಪಟ್ಟಕ ಓ ಬಾನ ಮಟ್ಟಕ। ಏರ್ಯಾವ ಮುಗಿಲು ರವಿ ಕಾಣೆ ಹಾಡೆ ಹಗಲು॥2॥ ಶ್ರಾವಣ ಬಂತು ಈಗ ಹಾಂಗಾ ಮದುವಿ ಮಗನ್ಹಾಂಗಾ ತಲೆಗೆ ಬಾಸಿಂಗಾ। ಕಟ್ಟಿಕೊಂಡು ನಿಂತಾವ ಹರ್ಷಗೊಂಡು॥3॥

**ಶ್ರೀಗಂಧ ನಾನಾಗಿ** **ರಾಗ: ದುರ್ಗ**

ಶ್ರೀಗಂಧ ನಾನಾಗಿ ಹುಟ್ಟಿದ್ದರಾಗ। ನಿನ್ನ ಪಾದಾರ್ಚನೆಗೆ ಸವೆಯುತಿದ್ದೆ॥ ಯಾವೊಂದು ಗಿಡದಲ್ಲಿ ಹೂವಾಗಿ ಹುಟ್ಟಿದ್ದರಾಗ। ಪಾದ ಪೂಜೆಯ ಸಮಯ ಬಳಿಸೇರುತಿದ್ದೆ॥1॥ ನಿನ್ನ ಭಜಿಸುವ ದುಂಬಿ ನಾನಾಗಿ ಜನಿಸಿದರೆ। ಪದಕಮಲ ಮಕರಂದ ಹೀರುತಿದ್ದೆ। ನೀನಡೆವ ಮಾರ್ಗದಲಿ ನಾನು ಜನಿಸಿದರಾಗ। ಹುಡಿಯಾಗಿ ನಿನ್ನ ಪದಕಂಟಿಕೊಳುತಿದ್ದೆ॥2॥ ಯಾವೊಂದು ನದಿಯಲ್ಲಿ ನೀರಾಗಿ ಜನಿಸಿದರೆ। ನಿನ್ನ ಪಾದ ತೊಳೆವಲ್ಲಿ ನಾನೊದಗುತಿದ್ದೆ॥ ನಿನ್ನ ನಿಜ ಭಕ್ತನೇ ನಾನಾಗಿ ಜನಿಸಿದರೆ। ಎಡೆಬಿಡದೆ ಚರಣದಲ್ಲಿ ಹೊರಳಾಡುತಿದ್ದೆ॥3॥

**ಸುಂದರ ಮಂಗಳ ಈ ಬೈಗು** ರಾಗ: ಖರಹರಪ್ರಿಯ

ಸುಂದರ ಮಂಗಳ ಈ ಬೈಗು। ರುದ್ರ ಮನೋಹರ ಈ ಬೈಗು।।ಪ।। ನೆಚ್ಚಳಿದಳಿದಿಹ ಚೆಲುವೆಯರೆಲ್ಲರ। ಕೆನ್ನೆಗಳೆಳಗೆಂಪೀ ಬೈಗು। ರಕ್ಕಸನೂರಾದ ರುಧಿರವ ನೀಂಟಿದ। ನರಹರಿ ಕೋಪವು ಈ ಬೈಗು।।1।। ಭಾರತ ಪುತ್ರರು ಚೆಲ್ಲಿದ ಚೆಲ್ಲುವ। ಶೋಣಿತ ರಣಧುನಿ ಈ ಬೈಗು। ಹುಟ್ಟಿದ ಕೂಡಲೆ ಹಸಿದೇ ಮಡಿದಿಹ। ಹಸುಮಕ್ಕಳ ಚೆಲುವೇ ಈ ಬೈಗು।।2।। ಗೋಪಿಯರೊಡಗೂಡಾಡಿ ಹಾಡುವ। ಕೃಷ್ಣನ ಪ್ರೇಮವು ಈ ಬೈಗು। ಬರುತಿಹ ಲೋಹಿತ ವಿಪ್ಲವ ಸೂಚಕ। ರಕ್ತದ ಬುಗ್ಗೆಯು ಈ ಬೈಗು।।3।। ಪರತಂತ್ರತೆಯನು ದಹಿಸುವ ಮಸಣದ। ಸೂಡಿನ ಕೇಸರಿ ಈ ಬೈಗು। ಸ್ವಾತಂತ್ರ್ಯದ ಆರಾಧನೆಗೆತ್ತಿದ। ಕುಂಕುಮದಾರತಿ ಈ ಬೈಗು।।4।।

**ಹರಿಯುವ ನದಿಯೆ** ರಾಗ:ಕುರಂಜಿ ತಾಳ

ಹರಿಯುವ ನದಿಯೆ ಹರಿಯುತ ನೀನು। ಬದುಕನು ಸಾರ್ಥಕ ಮಾಡುತಲಿರುವೆ। ಪಾಪವ ತೊಳೆಯುವ ಗಂಗೆಯು ನೀನು। ಗುರಿಯನು ಸೇರಲು ಓಡುತಲಿರುವೆ।।1।। ದಾಹವ ನೀಗಿಸಿ ತೃಪ್ತಿಯ ತುಂಬಿ। ಮಾನವ ಕೋಟಿಗೆ ಆಸರೆಯಾಗಿಹೆ। ಹೊಸ ಹೊಸ ಭಾವನೆ ಮನದಲಿ ತುಂಬಿ। ಮಧುರ ಮೋಹಕರ ಐಸಿರಿಯಿರುವೆ।।2।। ಹುಟ್ಟಿದ ರೂಪವ ಮರೆಯುತ ನೀನು। ದೂರದ ಸಾಗರ ಸೇರುವೆ ಓಡಿ। ಪರಹಿತ ಬಯಸುವ ಪಾವನೆ ನೀನು। ಶ್ರೀಸುಧೆ ಕೊಡು ನೀ ನಮಿಪೆವು ಬಾಗಿ।।3।।

**ಹಸಿರು ಗಿಡದ ತಲೆಯನ್ನೇರಿ** ರಾಗ:ವಸಂತ

ಹಸಿರು ಗಿಡದ ತಲೆಯನೇರಿ। ಅರಳಿ ನಗುವೆ ನಿತ್ಯ। ನೋಡಿದವರ ಮನವ ಸೆಳೆದು। ಖುಷಿಯ ಕೊಡುವೆ ಸತ್ಯ।।ಪ।। ಬಿರಿದು ಅರಳಿ ನಗುವ ಹೊತ್ತು ಬೀರುತೇನೆ ಕಂಪು। ಮತ್ತೆ ಬಾಡಿ ಬೀಳುವನಕ। ತೋರುತಿರುವೆ ಸೊಂಪು।।1।। ಚಿಟ್ಟೆ ದುಂಬಿಗಳಿಗೆ ಕೊಡುವೆ। ಸವಿಯ ಜೇನಿನೂಟ। ಎಂಥ ಅಂದ ಏನು ಚೆಂದ। ನನ್ನ ಮುದ್ದು ನೋಟ।।2।। ಗುಡಿಯ ಮೂರ್ತಿ ಶೋಭಿಸುವುದು। ಶಿರದಿ ಹೊತ್ತು ನನ್ನ। ಮುಡಿದ ಹೆಣ್ಣು ನಲಿವುದಣ್ಣ। ತಣಿಸಿ ಜಗದ ಕಣ್ಣ।।3।। ಚಣದ ಬದುಕು ಆದರೇನು। ಚಿಂತೆ ನನಗೆ ಇಲ್ಲ। ನಗುತ ಮಿಂಚಿ ನಗೆಯ ಹಂಚಿ। ಬಾಳುತಿರುವೆನಲ್ಲ?।।4।।

**ಹಾಲು ಹಳ್ಳ ಹರಿಯಲಿ** ರಾಗ: ಸಾವೇರಿ

ಹಾಲು ಹಳ್ಳ ಹರಿಯಲಿ, ಬೆಣ್ಣೆ ಬೆಟ್ಟವಾಗಲಿ। ಜೇನು ಮಳೆಯು ಸುರಿಯಲಿ, ತೊಟ್ಟಿಲೊಲಿದು ತೂಗಲಿ।।ಪ।। ಪೈರು ಪಚ್ಚೆ ಬೆಳೆಯಲಿ ತೆನೆಯ ಚಿನ್ನ ಹೊಳೆಯಲಿ। ಹಕ್ಕಿ ಹೊಟ್ಟೆ ತಣೆಯಲಿ ಮಿಗವು ಸೊಗಸಿ ಕುಣಿಯಲಿ।।1।। ಮುಗಿದು ಸಮರ ನರಬಲಿ, ನರರು ನರರ ನಂಬಲೀ। ಸ್ವಾಮಿ ಅಮೃತ ಕೃಪೆಯಲಿ ಶಾಂತಿ ಜಗವ ತುಂಬಲಿ।।2।। ತರುಣಿಯಾಗೆ ತಾರಣಂ ದಡವ ಸೇರಲೀರಣಂ। ಸ್ವಾರ್ಥಮಾಗೆ ಪಾರ್ಥಿವಂ, ಪೃಥ್ವಿಗಿಳಿಯಲಾದಿವಂ।।3।।

**ಹೊತ್ತು ಹರಿವ ಮುನ್ನ ಒಂದು**

ಹೊತ್ತು ಹರಿವ ಮುನ್ನ ಒಂದು ಪುಟ್ಟಹಕ್ಕಿ ಹಾರಿಬಂದು। ಸೂರಮೇಲೆ ಕುಳಿತುಕೊಂಡು ಹಾಡಿತೊಂದು ಹಾಡನು ಹಾಡಿತೊಂದು ಹಾಡನು।।1।। ಅರುಣ ಬರುವ ಮೂಡಲಲ್ಲಿ। ಮುಂಜೆ ಬೇಗ ಎದ್ದು ಬನ್ನಿ। ಹೊಸದು ನೋಟ ನೋಡಿರಿಲ್ಲಿ। ದುಡಿಮೆ ಮಾಡಿ ಬೇಗ ಹೋಗಿ।।2।। ಮುಸುಕು ಹೋಗಿ ಬೆಳಕು ಬಂತು। ಹೊಸಜೀವ ತಳೆಯಲೆಂದು। ಹರ್ಷದಿಂದ ತುಂಬಿಕೊಂಡು। ಶ್ರೀಮಾತೆ ಕರೆಯುತಿಹಳು।।3।। ತಮ್ಮ ತಮ್ಮ ಕಾರ್ಯಯದಲ್ಲಿ ಶಾಂತಿ ಸುಖವ ಕಾಣಿರೆಂದು। ಎಲ್ಲ ಮನದಿ ಹೂವಿನಾಗಿ। ಶ್ರೀಸುಖ ಪಡೆಯಿರೆಂದು।।4।।

**ಹೋಗೋಣ ನೋಡೋಣ** ರಾಗ: ಮೋಹನ

ಹೋಗೋಣ ನೋಡೋಣ ನಮ್ಮೂರಿಗೆ। ಗಿರಿಯಾಚೆ ನದಿಯಾಚೆ ಮಲೆನಾಡಿಗೆ। ।ಪ।। ಕರೆಯುವುದು ಎಮ್ಮನು

ತೋಳಬೀಸಿ। ಪಕ್ಷಿಗಳು ಹಾರುವುವು ಸಾಲು ಸಾಲಾಗಿ। ಹಾಡುತ್ತಾ ನಲಿಯುವುವು ಗುಂಪುಗುಂಪಾಗಿ। ಕಟ್ಟುವುವು ಗೂಡನ್ನು ಜೊತೆಜೊತೆಯಾಗಿ॥1॥ ಮಲೆನಾಡ ಮಲ್ಲೆಯರು ನಗುನಗುತಲಿಹರು। ಮುಡಿದಿಹರು ನಿಡಿಜಡೆಗೆ ತರತರದ ಹೂವು। ತೆನೆತೆನೆಯ ಕೊಯ್ಯುವರು ಅಡಿಗಡಿಗೆ ಬಾಗಿ। ಅಸದಳವು ವರ್ಣಿಸಲು ಅವರ ಸೊಗಸು॥2॥

## ಚಂದ್ರ

**ಅತ್ರಿಯ ತನುಜನೆ ಬಾ** **ರಾಗ: ಜಂಜೋಟಿ**

ಅತ್ರಿಯ ತನುಜನೆ ಬಾ। ರಾತ್ರಿಯ ರಾಜನೆ ಬಾ। ಪಾತ್ರ-ಸತ್ಪಾತ್ರ ಶಾಂತ ನೇತ್ರ ಬಾ॥ಪ॥ ತಾರೆಯ ನಾಥ ಬಾ॥ಪ॥ ವಾರಿಧಿ ಜಾತಾ ಬಾ। ದೇವಾ ಚಂದ್ರಮ ಬಾ। ಚಂದದಿಂದ ಬಾ। ಭವ ಚಂದ್ರಮ ಬಾ। ಇಂದು ಇಳಿದು ಬಾ॥1॥ ಸಾಗರ ಕೆನೆಯೆ ಬಾ। ನಾಗರ ಮಣಿಯೆ ಬಾ। ಚೋರಾ ಚಂದ್ರಮ ಬಾ। ಚಂದದಿಂದ ಬಾ। ಇಂದು ಇಳಿದು ಬಾ॥2॥ ಗಂಧದ ಉರಳೆ ಬಾ। ಕುಂದದ ಹರಳೆ ಬಾ ತಂದೆ ಚಂದ್ರಮ ಬಾ। ಇಂದು ಇಳಿದು ಬಾ॥3॥

**ಅಮ್ಮಾ ಚಂದಿರ ನನ್ನವನು** **ರಾಗ:ಮಲಯಮಾರುತ**

ಅಮ್ಮಾ ಚಂದಿರ ನನ್ನವನು। ಎಲ್ಲಿಗೆ ನಾ ಹೋದರಲ್ಲಿಗೆ ಬರುವನು। ಅಮ್ಮಾ ಚಂದಿರ ನನ್ನವನು। ನಿನ್ನವನಾಗಿರುವುದರಿಂದ। ಅಮ್ಮಾ ಚಂದಿರ ನನ್ನವನು॥1॥ ಮೂಡಣ ದಿಸೆಯೊಳು। ಗಿರಿಗಳ ನೇರುತ ಓಡುತ ಬರುತಿರೆ ನನಗೂ। ಮೂಡುವನೆಂಬರು ಜನರಿಲ್ಲಮ್ಮ। ಕೂಡಲು ಬರುತಿರೆ ಮೂರ್ತಿಯನು॥2॥ ಎಲ್ಲಿಗೆ ನಮ್ಮನೆಯಂಗಳದಲ್ಲಾಡುತಿರೆ। ನೆತ್ತಿಯ ಮೇಲೆ ತೋರುವನು। ಮಾವನ ಮನೆಯಲ್ಲುಳಿಯಲು ಹೋದರು। ಅಲ್ಲಿಗೆ ಬರುವನು ಚಂದಿರನು॥2॥ ನೆರೆಮನೆ ಕಿಟ್ಟು ಕರೆದರೆ ಹೋಗಲು। ಮೂರ್ತಿಯನೆಂದು ಬಿಟ್ಟಿರನು। ಎಲ್ಲಿಗೆ ನಾ ಹೋದರೂ ಅಲ್ಲಿಗೆ ಬರುವನು। ಅಮ್ಮ ಚಂದಿರ ನನ್ನವನು॥4॥

**ಅಲ್ಲಿ ನೋಡಲ್ಲಿ ಚಂದಿರನ** **ರಾಗ: ಮೋಹನ**

ಅಲ್ಲಿ ನೋಡಲ್ಲಿ ಚಂದಿರನ ಚೆಲುವ। ಕಲ್ಲು ಮಣ್ಣಿಗು ಬಂತು ಜೀವ.... ಬಂತಣ್ಣ ಜೀವ॥ ಪ॥ ಬೆಳ್ಳಿಯ ಹೊಳೆಯನು ಸುತ್ತಲು ಹರಿಸಿ। ಬಳಲಿದ ಭೂಮಿಗೆ ತಂಪನು ಸಲಿಸಿ। ಲೋಕದ ಹೃದಯಕೆ ನೆಮ್ಮದಿ ತೋರಿ। ಹರೆಯದ ಮುದ ಬೀರಿ। ತನು ಕಣ್ಣಿಗೆ ದೀಪ್ತಿಯ ತೀಡಿ॥ ಚಕ್ಕಂದದಿ॥1॥ ತೆಂಗಿನ ಗರಿಗಳ ಕೆರೆಗಳ ತೆರೆಗಳ। ಬೆಟ್ಟದ ಮುಡಿಗಳ ಮೇಲೇರಿ। ಮನೆ ಒಳ ಹೊರಗೂ ಬೆಳಕನು ತೂರಿ। ತಾನವಾಗಿ ಗಾನದಂತೆ ಸೃಷ್ಟಿ ತೂಗಿ॥ ಕಲ್ಲು ಮಣ್ಣಿಗೂ ಬರಿಸುವುದು ಜೀವ। ಅಲ್ಲಿ ಮುಗಿಲಲ್ಲಿ ಚಂದಿರನ ಚೆಲುವ॥2॥

**ಎಳೆ ಬೆಳದಿಂಗಳು** **ರಾಗ: ಪುನ್ನಾಗವರಾಳಿ**

ಲಲಲ್ಲಲಾ ಲಾಲಾ (2ಸಾರಿ) ಲಾಲಾಲಾ। ಲಲಲ್ಲಲಾ(2ಸಾರಿ) ಲಾಲಾಲಾ॥ಪ॥ ಎಳೆ ಬೆಳದಿಂಗಳು ಮರದಡಿ ಬರೆದಿದೆ ನೆರಳಿನ ಚಿತ್ತಾರ। ಬಾನೊಳು ಚೆದುರಿದ ಕಿರುಮಿರುತೆರೆಗೆ ಇರುಳಿನ ಸಿಂಗಾರಾ....॥1॥ ಸಪ್ತಮಿ ಚಂದ್ರನ ತೃಪ್ತಿಯ ನಗೆಯಲಿ ಬಾನೆ ಬಂಗಾರಾ...। ಇರುಳಿನ ಸ್ತಬ್ಧತೆ ಬರೆದಿದೆ ಕೊರೆದಿದೆ ನಿಶ್ಚಲ ತರುನಿಕರ॥2॥ ಪ್ರಶಾಂತ ನಿರ್ಮಲ ಧ್ಯಾನ ದಿಗಂಬರ ಶಾರದ ಯೋಗಿವರ...। ಕರುಣೆಯೊಳಿತ್ತರೆ ಇರದಿನ ಭಾರವೆ ತಾನಾಗಿದೆ ಹಗುರ॥3॥

**ಎಂಥ ಚೆಂದ ಬೆಳದಿಂಗಳು** **ರಾಗ: ಶುದ್ಧಧನ್ಯಾಸಿ**

ಎಂಥ ಚೆಂದ ಬೆಳದಿಂಗಳು ಜಗದ ಜನಕೆ ಮಂಗಳ। ರಂಗೋಲಿ ಹಾಕ್ಯಾರ ಯಾರ ಹೇಳ(2ಸಾರಿ)॥ಪ॥ ಹಿಟ್ಟ ಚೆಲ್ಲಿ ಬಿಟ್ಟಾರಮ್ಮ ಬೆಣ್ಣೆಹಂಗ ಮೆದುವೇನ। ಹಾಲಿನ ಕೊಡ ಸೇರಿ ಸೋರಿ ಸೋರಿ ಬಂತೇನ॥1॥ ಮಲ್ಲಿಗಿಯ ಹೂವಿನ

ಹಾಸಿಗೆ ಹಾಸ್ಯಾರೆ। ಮುಟ್ಟಿದರೆ ಮಾಸುವ ಜೇನ॥2॥ ಅಮೃತದ ಬುರುಗೇನ ಉಕ್ಕಿದೆದೆಯ ರಸವೇನ। ಸ್ವರ್ಗದ ಹೊಳೆ ತುಳುಕ್ಯಾಡ್ತಾವೇನ॥3॥

**ಕತ್ತಲೆ ಕೋಣೆಯೊಳ್** ರಾಗ: ಶುದ್ಧಧನ್ಯಾಸಿ

ಕತ್ತಲೆ ಕೋಣೆಯೊಳ್ ಏನನು ಮಾಡುವೆ। ಮಿತ್ರನೆ ಬಾ ಹೊರಗೆ। ತಿಳಿ ಬೆಳದಿಂಗಳು ಹೊಳೆ ಹೊಳೆಯುತಲಿದೆ ಬಾಬಾಬಾ ಹೊರಗೆ॥ಪ॥ ಸುಂದರ ಮೋಹನ ಚಂದ್ರನ ಕಾಂತಿಯು ಎಲ್ಲೆಡೆ ಹಬ್ಬಿಹುದು। ಹುಣ್ಣಿಮೆ ಇರುಳಿನ ನೀರವ ಶಾಂತಿ ತಿರೆಯನು ತಬ್ಬಿಹುದು। ಬಾನ್ನೀರೆಯ ಸವಿಗನಸುಗಳಂದದಿ ಬೆಳ್ಮುಗಿಲೋಡುತಿವೆ। ಚೆನ್ನೆಯರಿಣುಕುವ ಕಣ್ಣುಗಳಂದದಿ ತಾರೆಗಳಾಡುತಿವೆ॥1॥ ಜೊನ್ನನು ಕುಡಿಯುವ ಬೆಳ್ಮುಗಿಲೊಡಲಲಿ ಮಳೆಬಿಲ್ಮೂಡುತಿದೆ। ಮಳೆ ಬಿಲ್ಲೊಡಲ ಮುಗಿಲ್‌ಗಳು ಸರಸಕೆ ಶಶಿಯನು ಕಾಡುತಿವೆ। ಬನಗಳ ತಂಪನು ತಹ ತಂಗಾಳಿಯು ತಣ್ಣನೆ ಬೀಸುತಿದೆ। ದಣಿದಿಹ ಭೂಮಿಯ ಬಾಳಿನ ಎದೆಯಲಿ ಸಯ್ಪನು ಸೂಸುತಿದೆ॥2॥ ಶಿವನೇ ಚಂದಿರ ನಂದದಿ ತೋರುತ ಬಂದನು ಬಾನೆಡೆಗೆ। ಶಿವನೇ ಜೊನ್ನಾಗಿಳಿಯುತಲಿರುವನು ಸಗ್ಗದಿನಿಳೆ ಎಡೆಗೆ। ಸೌಂದರ್ಯೋಪಾಸನೆಗಿದೆ ಪೊಳ್ತೈ ಬಾಬಾ ಸಾಧನೆಗೆ। ಸೌಂದರ್ಯದಿ ಶಿವ ಮೈದೋರಿಹನೈ ಬಾ ಆರಾಧನೆಗೆ॥3॥

**ಚಂದಕ್ಕಿ ಮಾಮಾ** ರಾಗ:ಜನರಂಜನಿ

ಚಂದಕ್ಕಿ ಮಾಮಾ ಚಕ್ಕುಲಿ ಮಾಮಾ। ಮುತ್ತಿನ ಕುಡಿಕೆ ಕೊಡುಮಾಮಾ ಕೊಡುಮಾಮಾ॥ಪ॥ ತೆಳ್ಳಗೆ ಹಪ್ಪಳದಂತಿರುವೆ। ಬೆಳ್ಳಗೆ ದೋಸೆಯ ಹಾಗಿರುವೆ। ಮೆಲ್ಲಮೆಲ್ಲಗೆ ಮುಂದಕೆ ಹೋದರು। ಕಡೆಗೆ ಇದ್ದಲ್ಲೇ ಇರುವೆ॥1॥ ಕಿತ್ತಳೆ ಕೊಡುವೆ ಬಾ ಕೆಳಗೆ। ಮುತ್ತನು ಕೊಡುವೆ ಬಾ ಬಳಿಗೆ। ಕಿಟ್ಟು ಪುಟ್ಟೂ ಆಡಲು ಬರುವರು। ನಾನು ಇರುವೆ ನಿನ್ ಜೊತೆಗೆ॥2॥

**ಚಂದಮಾಮ2 ನಮ್ಮಲ್ಲೇಕೆ**

ಚಂದಮಾಮ ಚಂದಮಾಮ ನಮ್ಮಲ್ಲೇಕೆ ಬರಲಿಲ್ಲ? ಚಂದಮಾಮ ಚಂದಮಾಮ ಹಲವು ನಿನ್ನ ನಾಮ॥ಪ॥ ಪೃಥ್ವಿಯಲ್ಲಿ ಎಲ್ಲಾ ನಿನ್ನ ಮಹಿಮಾ। ಹುಣ್ಣಿಮೆ ರಾತ್ರಿಯಲ್ಲಿ ಬೆಳಕು ಚೆಲ್ಲುತ್ತೀ। ಅಮಾವಾಸ್ಯೆ ರಾತ್ರಿ ಕಾಣದಾಗುತ್ತೀ। ದೂರ ದೂರ ಹೋಗುತೀ ಚಿಕ್ಕ ಚಿಕ್ಕದಾಗುತ್ತೀ॥1॥ ಒಂದು ದಿನ ಮೋಡದಲ್ಲಿ ಕಾಣದಾಗುತ್ತೀ। ಮತ್ತೊಂದು ದಿನ ದೊಡ್ಡದಾಗುತ್ತೀ॥ ಚಿಕ್ಕ ಮಕ್ಕಳಿಗೆ ನೀನೆ ದೋಸೆಯು। ನಿನ್ನ ಜೊತೆ ಪಡೆಯಲು ತುಂಬಾ ಆಸೆಯು॥2॥

**ಚಂದಿರನೇತಕೆ ಓಡುವನಮ್ಮ** ರಾಗ:ಕುರಂಜಿ

ಚಂದಿರನೇತಕೆ ಓಡುವನಮ್ಮ। ಮೋಡಕೆ ಹೆದರಿಹನೇ। ಬೆಳ್ಳಿಯ ಮೋಡದ ಅಲೆಗಳ ಕಂಡು ಚಂದಿರ ಬೆದರಿಹನೇ?॥1॥ ಹಿಂಜಿದ ಅರಳೆಯು ಗಾಳಿಗೆ ಹಾರಿ। ಮೋಡಗಳಾಗಿಹವೇ। ಅರಳೆಯು ಮುತ್ತಿ ಮೈಯನು ಸುತ್ತಿ। ಚಂದ್ರನ ಬಿಗಿಯುವವೆ?॥2॥ ಮಂಜಿನ ಗಡ್ಡೆಯ ಮೋಡವು ಕರಗಲು ಚಂದಿರ ನಗುತಿಹನು॥ ಕರಗಿದ ಮೋಡದ ಸೆರೆಯನು ಹರಿಯುತ ಬಾನಲಿ ತೇಲುವನು॥3॥ ಚಂದಿರನೆನ್ನಯ ಗೆಳೆಯನು ಅಮ್ಮಾ ನನ್ನೊಡನಾಡುವನು॥ ನಾನೂ ಓಡಲು ತಾನೂ ಓಡುವ ಚೆನ್ನಿಗ ಚಂದಿರನು॥4॥ ಬಾಬಾ ಚಂದಿರ ಬೆಳ್ಳಿಯ ಚಂದಿರ ನಮ್ಮಯ ಮನೆಗೀಗ। ನಿನ್ನಯ ಬೆಳಕನು ಎಲ್ಲೆಡೆ ಚೆಲ್ಲಿ ಮನವನು ಬೆಳಗೀಗ॥5॥

**ಚಂದಿರ ನೀನು ಬರಲಿಲ್ಲ ಕಾದೆನು ನಾನು** ರಾಗ: ಶಿವರಂಜನಿ

ಚಂದಿರ ನೀನು ಬರಲಿಲ್ಲ। ಕಾದೆನು ನಾನು ಇರುಳೆಲ್ಲಾ। ಮನದಲಿ ಆಸೆಯು ತುಂಬಿತ್ತು। ನೀ ಕಾಣದೆ ಹೃದಯವು ನೊಂದಿತ್ತು॥ಪ॥ ಹುಟ್ಟಿದ ಮೇಲೆ ನಾನಿಲ್ಲಿ ಬೆಳೆದೆನು ಅಮ್ಮನ ಜೊತೆಯಲ್ಲಿ। ನೋಡುತ ನಿನ್ನನ್ನು ಬಾನಿನಲ್ಲಿ। ಕಳೆದೆನು

ಪ್ರತಿದಿನ ಬಾಳಿನಲಿ॥1॥ ಜಗದಲ್ಲಿ ಹೊಳೆಯುವ ಸುಂದರನೆ। ಲೋಕವ ಬೆಳಗುವ ಚಂದಿರನೆ। ನಿನ್ನನ್ನು ಬಿಟ್ಟು ನಾನಿಲ್ಲ ಬೇರೆ। ಯಾರೂ ನನಗೆ ಗೊತ್ತಿಲ್ಲ॥2॥ ಅಮ್ಮನ ಬಾಳಿಗೆ ಆಸರೆಯು ನೀ। ಮಕ್ಕಳ ಮುದ್ದಿನ ಮಾಮನು ನೀ। ಪ್ರತಿದಿನ ಥಳಥಳ ಹೊಳೆಯುತಲಿ। ಸೇರಿದೆ ನನ್ನಯ ಹೃದಯದಲಿ॥3॥ ಜೊತೆ ಜೊತೆಯಾಗಿ ಹೋದಂತೆ। ನಗಿಸುತ್ತ ನನ್ನಯ ಮನಗೆದ್ದೆ। ನಿನ್ನನ್ನು ಕಾಯುತ ಕುಳಿತಿರಲು। ಏತಕೆ ಹೀಗೆ ದೂರಾದೆ॥4॥

**ಚಂದಮಾಮಾ ಬಾರಯ್ಯ** **ರಾಗ:ಶಂಕರಾಭರಣ**

ಚಂದಮಾಮಾ ಬಾರಯ್ಯ ನಮ್ಮಯ ಮನೆಗೆ ಬಾರಯ್ಯ। ಹಾಲು ಸಕ್ಕರೆ ಕೂಡಿಸಿ ಕೊಡುವೆ। ಕುಡಿಯಲು ಬೆಳ್ಳಿಯ ಬಟ್ಟಲು ಕೊಡುವೆ॥1॥ ಸಕ್ಕರೆ ಕಡ್ಡಿ ತರ್ತೀನಿ ಮಿಕ್ಕರೆ ನಿಂಗೂ ಕೊಡ್ತೀನಿ। ಇಬ್ಬರು ಸೇರಿ ತಿನ್ನೋಣ ಇಬ್ಬರು ಸೇರಿ ಆಡೋಣ॥2॥ ಎಲ್ಲಿಗೆ ಹೋದ್ರು ಬರ್ತೀಯಾ ಅಲ್ಲೆ ದೂರದಲ್ಲಿರ್ತೀಯಾ। ಹಿಂದೆ ಹಿಂದೆ ಬರ್ತೀಯಾ ಎಲ್ಲೆಂದ್ರಲ್ಲೆ ನಿಲ್ತೀಯಾ॥3॥

**ಚಂದಮಾಮ2 ಬಾಬಾ2** **ರಾಗ:ಮೋಹನ**

ಚಂದಮಾಮ ಚಂದಮಾಮ ಬಾಬಾ ಬಾಬಾ ಬಳಿಗೆ॥ ಅಕ್ಕನು ಕೊಟ್ಟ ನೊರೆಹಾಲು। ಕುಡಿಯಲು ತಂದಿರುವೆ॥ಪ॥ ಅಮ್ಮನು ಮಾಡಿದ ಒಬ್ಬಟ್ಟು। ತಿನ್ನಲು ತಂದಿರುವೆ। ಅಪ್ಪನು ಕೊಟ್ಟ ಹೊಸ ಸ್ಲೇಟು ಓರೀರ್ವರು ನಾವೀರ್ವರು ಶೃಂಗಾರದಿ ಕೂಡಿ॥ ನಲಿದಾಡುವ ಬಾನಲ್ಲಿ ಇಳೆ ರಸದೋಕುಳಿಯಾಡಿ॥1॥ ಮೇಲ್ಗಡೆ ಬಾನ್ ಕೆಳಗಡೆ ನಾನ್ ಜೊನ್ನದ ಜೇನ್ ನಡುವೆ।ನನ್ನೊಳು ನೀನ್ ನಿನ್ನೊಳು ನಾನ್ ನಮಗಿನ್ನೇನ್ ಗೊಡವೆ। ಹೊನ್ನೊಲುಮೆಯ ಹೊಂಬನದಲಿ ತೇಲುವ ಬಾಳ್ ನಾವೇ। ಆಲಿಂಗದಾವರ್ಧಿನಿ ಮುಳುಗಿದರೇನ್ ಸಾವೇ?॥2॥

**ಚಂದಮಾಮ ಇತ್ತ ಬಾ** **ರಾಗ:ಶಂಕರಾಭರಣ**

ಚಂದಮಾಮ ಇತ್ತ ಬಾ। ಚಂದದಿಂದ ಆಡು ಬಾ॥ಪ॥ ತಿಂಡಿ ತಿನಿಸು ಕೊಡ್ತೀನಿ। ಗಿಂಡಿ ಹಾಲು ತರ್ತೀನಿ। ಮೊಂಡುತನ ಮಾಡ್ಬೇಡ। ಚಂಡಿಯಾಗಿ ನಿಲ್ಬೇಡ॥1॥ ಓಡಿ ಓಡಿ ಕರಗ್ಬೇಡ। ಕಣ್ಣಿಗೆ ಕಾಣದೆ ಹೋಗ್ಬೇಡ। ಚಂದಮಾಮ ಇತ್ತ ಬಾ। ಚಂದದಿಂದ ಆಡು ಬಾ॥2॥

**ಚೆಂದಿರನೆಷ್ಟು ಸುಂದರನು** **ರಾಗ: ಮೋಹನ**

ಚೆಂದಿರನೆಷ್ಟು ಸುಂದರನು। ಬಾನತೆರೆಯಲಿ ತೇಲುವನು। ಮೋಹದ ಮರೆಯಲಿ ಅಡಗುತ ಕಾಣುತ। ಹುಡುಕುವ ಆಟವ ಆಡುವನು॥ಪ॥ ಹಗಲಲಿ ಏತಕೆ ಕಾಣನು ಅವನು। ನಿದ್ದೆಯ ಮಾಡಿ ಮಲಗುವನೇನು। ಅವನು ಮಲಗುವ ಮನೆಯು ಎಲ್ಲಿ। ನೋಡಲು ನಾವು ಹೋಗುವ ಅಲ್ಲಿ॥1॥ ಹೊರಟರೆ ನಾವು ಹಿಂದೆಯೆ ಬರುವನು। ಇಳಿದು ಕೆಳಗೆ ಬಾರನು ಅವನು। ಅವನೊಡನಾಡಲು ನಮಗಾನಂದ। ಅವನ ನೋಡಲು ನಮಗದು ಚಂದ॥2॥ ಒಬ್ಬನೆ ಏತಕೆ ಇರುತಿಹನವನು ಆಡಲು ಗೆಳೆಯರು ಯಾರಿಲ್ಲವೇನು। ಕರೆದೊಯ್ದರೆ ನಾವ್ ಹೋಗುವ ಮೆಲ್ಲಗೆ ಆಟವನಾಡುತ ಮರಳುವ ನಾಳೆಗೆ॥3॥

**ಚೆಂದ2 ಚೆಂದಾನಮ್ಮ** **ರಾಗ:ಕಲ್ಯಾಣಿ**

ಚೆಂದ ಚೆಂದ ಚೆಂದಾನಮ್ಮ ಚೆಂದಕ್ಕಿ ಮಾಮ ಚೆಂದಾನಮ್ಮ। ಪುಟಾಣಿ ಮಕ್ಕಳ ಪ್ರೀತಿಯ ಚಕ್ಕುಲಿ ಮಾಮ ಚೆಂದಾನಮ್ಮ॥1॥ ಹುಣ್ಣಿಮೆ ದಿನದ ರಾತ್ರಿಯಲಿ ಹೊಳೆವ ಇವನು ಚೆಂದಾನಮ್ಮ। ಭೂಮಿಗೆಲ್ಲ ಬೆಳದಿಂಗಳ ಹಾಲು ಚೆಲ್ಲಿ ಬಂದಾನಮ್ಮ॥2॥ ಮೋಡದಲ್ಲಿ ಅಡಗಿರುತ್ತಾನೆ। ಕಣ್ಣಾ ಮುಚ್ಚೆ ಆಡುತ್ತಾನೆ। ಇಣುಕಿ ಇಣುಕಿ ನೋಡುತ್ತಾನೆ।

ಜೂಜಾಟ ಆಡುತ್ತಾನೆ।।3।। ಚಂದ್ರನ್ ತೋರ್ರಿ ಕೈ ತುತ್ತು ತಿನ್ನಿಸು ಬಾರಮ್ಮ । ಚಂದ್ರ ಸುರಿಸೋ ಹಾಲು ಸೇರಿದ ತುತ್ತು ಸಿಹಿಯಮ್ಮ ।।4।।

**ತಿಂಗಳ ಬೆಳಕಿನ ಇರುಳಿನಲೊಂದು** **ರಾಗ: ಕಲಾವತಿ**

ತಿಂಗಳ ಬೆಳಕಿನ ಇರುಳಿನಲೊಂದು। ಅಮ್ಮನು ಕೆಲಸದೊಳಿರುತಿರೆ ಕಂಡು। ಗೋಪಿಯು ಪುಟ್ಟುವು ಹೊರಗಡೆ ಬಂದು। ಬಾವಿಗೆ ಇಣಿಕಿದರು।।1।। ಬಾವಿಲಿ ಚಂದ್ರನ ಬಿಂಬವ ಕಂಡು। ಚಂದ್ರನು ಬಾವಿಗೆ ಬಿದ್ದನು ಎಂದು। ಅಯ್ಯೋ ಪಾಪವೆ ಎನ್ನುತಲೊಂದು। ಕೊಕ್ಕೆಯ ಹುಡುಕಿದರು।। 2।। ಚಂದ್ರನ ಮೇಲಕೆ ಎತ್ತಲಿಕೆಂದು। ಬಾವಿಯ ಹಗ್ಗಕೆ ಕೊಕ್ಕೆಯ ಬಿಗಿದು। ದೂರದಿ ಗೋಪಿಯ ನಿಲ್ಲಿಸಿ ಪುಟ್ಟು। ಹಗ್ಗವನಿಳಿಸಿದನು।।3।। ಹಗ್ಗದ ಕೊಕ್ಕೆಯು ಕಲ್ಲಿಗೆ ಸಿಕ್ಕಿ ಪುಟ್ಟುವು ಚಂದ್ರನು ಸಿಕ್ಕೇ ಸಿಕ್ಕ। ಎನ್ನುತ ತುಂಬಾ ಬಲದಿಂದೆಳೆಯೇ। ಹಗ್ಗವು ತುಂಡಾಯ್ತು।।4।। ಎಳೆತದ ರಭಸಕೆ ಪುಟ್ಟುವು ಬಿದ್ದ। ಮೆಲ್ಲನೆ ಮನೆ ಕಡೆ ನೋಡುತಲೆದ್ದ। ತಂಗಿಗೆ ಆಗಸ ತೋರುತಲೆಂದ। ಗೋಪೀ ನೋಡಲ್ಲಿ।।5।। ಚಂದ್ರನ ಮೇಲಕೆ ಏರಿಸಿ ಬಿಟ್ಟೆ। ನಮ್ಮಯ ದೇವರ ಬದುಕಿಸಿ ಕೊಟ್ಟೆ। ಅಮ್ಮಗೆ ಗೊತ್ತಾದರೆ ನಾಕೆಟ್ಟೆ। ಎಂದೋಡಿದ ಪುಟ್ಟು।।6।।

**ತಿಂಗಳ ಮಾವಯ್ಯ ಬೇಗನೆ ಬಾರಯ್ಯ** **ರಾಗ: ಚಕ್ರವಾಕ**

ತಿಂಗಳ ಮಾವಯ್ಯ ಬೇಗನೆ ಬಾರಯ್ಯ। ತಂಪಾದ ಬೆಳದಿಂಗಳ ಭುವಿಯಲ್ಲಿ ಚೆಲ್ಲಯ್ಯ। ಬೇಗನೆ ಬಾರಯ್ಯ ಬೆಳದಿಂಗಳ ಚೆಲ್ಲಯ್ಯ। ಓಡೋಡಿ ಬಾರಯ್ಯ ತಿಂಗಳ ಮಾವಯ್ಯ। ಅಕ್ಕೀಯ ರೊಟ್ಟೀಯ ನೀ ಹೋಲುತ್ತಿರುವೇ। ಮೊಲವನ್ನು ನಿನ್ನಲ್ಲಿ ಬಚ್ಚಿಟ್ಟಿರುವೆ। ಮಕ್ಕಳಿಗೆ ಮಾವಯ್ಯ ಚಂದಿರ ಮಾವಯ್ಯ ಬೆಳಕನ್ನು ತೋರಯ್ಯ ಹಾಲಿನಂತೆ ಚೆಲ್ಲಯ್ಯ।।

**ದೇವರ ಪೆಪ್ಪರಮೆಂಟೇನಮ್ಮ** **ರಾಗ:ಕುರಂಜಿ**

"ದೇವರ ಪೆಪ್ಪರಮೆಂಟೇನಮ್ಮ, ಗಗನದೊಳಲೆಯುವ ಚಂದಿರನು? ಎಷ್ಟೇ ತಿಂದರು ಖರ್ಚೇ ಆಗದ ಬೆಳೆಯುವ ಪೆಪ್ಪರಮೆಂಟಮ್ಮಾ"।।1।। "ದಿನದಿನ ನೋಡುವೆ, ದಿನವೂ ಕರಗುತ ಎರಡೇ ವಾರದೊಳಳಿಯುವುದು। ಮತ್ತದು ದಿನ ದಿನ ಹೆಚ್ಚುತ ಬಂದು। ಎರಡೇ ವಾರದಿ ಬೆಳೆಯುವುದು"।।2।। ಅಕ್ಷಯವಾಗಿಹ ಪೆಪ್ಪರಮೆಂಟದು। ನನಗೂ ದೊರಕುವುದೇನಮ್ಮಾ? "ನೀನೂ ದೇವರ ಬಾಲಕನಾಗಲು। ನಿನಗೂ ಕೊಡುವನು ಕಂದಯ್ಯ"।।3।। "ದೇವರ ಬಾಲಕನಾಗಲು ಒಲ್ಲೆ। ಆತನ ಮೀರಿಹೆ ನೀನಮ್ಮಾ। ತಾಯಿಯನಗಲಿಸಿ ದೇವರ ಹಿಡಿಸುವ ಪೆಪ್ಪರಮೆಂಟೂ ಬೇಡಮ್ಮಾ"।।4।।

**ನೀಲಿಯ ಬಾನಲಿ ಮೋಡದ ಮರೆಯಲಿ** **ರಾಗ:ಜನರಂಜನಿ**

ನೀಲಿಯ ಬಾನಲಿ ಮೋಡದ ಮರೆಯಲಿ ಕಾಣುವುದೇನಮ್ಮಾ? ಮಿಣಿ ಮಿಣಿ ಗುಟ್ಟುವ ತಾರಾಗಣದಲಿ ಹೊಳೆಯುವುದೇನಮ್ಮಾ?।।1।। ತಟ್ಟೆಯ ಮಾದರಿ ಗುಂಡಗೆ ಕಾಣುತ ಓಡುವುದೇಕಮ್ಮಾ? ಕಣ್ಣಾ ಮುಚ್ಚೇ೧೧ ಕಾಡೇ ಗೂಡೇ೧೧ ಆಡುವುದೇಕಮ್ಮಾ?।।2।। ಬೆಳ್ಳಿಯ ಬೆಳಕಿನ ಚಂದಕ್ಕಿ ಮಾಮ ಇವನೇ ಏನಮ್ಮಾ? ಚಂದಕ್ಕಿ ಮಾಮನ ಚೆಲುವನು ನೋಡುತ ನಲಿಯುವ ಬಾರಮ್ಮಾ!।।3।।

**ಬರುವಾನು ಚಂದಿರ** **ರಾಗ: ಖರಹರಪ್ರಿಯ**

ಬರುವಾನು ಚಂದಿರ ರಾತ್ರಿಯಲಿ। ನನ್ನ ನಿನ್ನ ಮಾತಿನ ಮಧ್ಯದಲಿ। ಮನದ ಮಧ್ಯದಲಿ।।ಪ।। ಸಖಿ ನಮಗಿರಲಿ ಚಂದಿರನ ಆಸೆ। ಬಿಡು ಏಕಿನ್ನು ಚಿಂತೆ ಅಭಿಲಾಷೆ। ವನವನವೆಲ್ಲವೂ ಮನಮನವೆಲ್ಲವೂ। ಈ ಗುಂಪಾದ ಆವರಣದ ಮಧ್ಯದಲ್ಲಿ। ಮನದ ಮಧ್ಯದಲ್ಲಿ।।1।। ಆಹಾ ನೋಡಿಲ್ಲಿ ಚಂದಿರಕಾಂತಿ। ತನ್ನ ಬೆಳದಿಂಗಳ್ ಬೆಳಕಿನ ರಾತ್ರಿ। ವನವನವೆಲ್ಲವೂ ಮನಮನ ವೆಲ್ಲವೂ। ಈ ಗುಂಪಾದ ಆವರಣದ ಮಧ್ಯದಲ್ಲಿ। ಮನದ ಮಧ್ಯದಲ್ಲಿ।।2।।

**ಬಾಬಾರೋ ಚಂದ್ರಮ** **ರಾಗ: ಹಿಂದೋಳ**

ಬಾಬಾರೋ ಚಂದ್ರಮ ಬಾನಿನಲ್ಲಿ। ತೋರು ನಿನ್ನ ಬೆಳಕನ್ನು ರಾತ್ರಿಯಲ್ಲಿ॥ಪ॥ ಬಾನಿನಲ್ಲಿ ಮಿನುಗುತಿದೆ ತಾರೆ ಅದರ ಮಧ್ಯದಲ್ಲಿ ನೀನು ಬಾರೋ। ಅಂಧಕಾರವನ್ನು ದೂರ ಮಾಡೋ ನೀನು ಅಂದದಾ ಚಂದದಾ ಬೆಳದಿಂಗಳೆ॥1॥ ವನದಲ್ಲಿ ಅರಳುತಿವೆ ಹೂಗಳು। ಅಲ್ಲಿ ಬೀಳುತಿದೆ ಬೆಳದಿಂಗಳು। ಅಂಧಕಾರವನ್ನು ದೂರಮಾಡೋ ನೀನು ಅಂದದಾ ಚಂದದಾ ಬೆಳದಿಂಗಳೆ॥2॥ ಕುಣಿಯುತ್ತ ಬಂದಳೋ ರಾಧೆ। ಚಂದ ಮಾಮನ ನೋಡು ಎಂದು ಹಾಡಿ। ಕುಣಿಯುತ್ತಲಿ ಕುಣಿದು ಹಾಡುತ್ತಲಿ ಅಂದದಾ ಚಂದದಾ ಬೆಳದಿಂಗಳೆ॥3॥

**ಬಾನಿನಲ್ಲಿ ಮೂಡಿಬಂದ ಚಂದಮಾಮಾ** **ರಾಗ: ಶ್ರೀರಾಗ**

ಬಾನಿನಲ್ಲಿ ಮೂಡಿಬಂದ ಚಂದಮಾಮಾ। ಮೂಡಿಬಂದ ಮೂಡಿಬಂದ ಚಂದಮಾಮ॥ಪ॥ ಕತ್ತಲನ್ನು ದೂಡಿನಿಂದ ಚಂದಮಾಮ। ಮೋಡದೊಡನೆ ಓಡಿಬಂದ ಚಂದಮಾಮ। ಓಡಿಬಂದ ಓಡಿಬಂದ ಚಂದಮಾಮ। ನಮ್ಮನ್ನು ನೋಡಿನಿಂದ ಚಂದಮಾಮ॥1॥ ಮುಗಿಲಬೆಟ್ಟ ಏರಿಬಂದ ಚಂದಮಾಮ। ಏರಿಬಂದ ಏರಿಬಂದ ಚಂದಮಾಮ। ತಾರೆಗಳನು ಸೇರಿನಿಂದ ಚಂದಮಾಮ। ತಂಪು ಬೆಳಕು ಬೀರಿಬಂದ ಚಂದಮಾಮ॥2॥ ಬೀರಿಬಂದ ಬೀರಿಬಂದ ಚಂದಮಾಮ ಜಗಕೆ ಚೆಲುವ ತೋರಿನಿಂದ ಚಂದಮಾಮ॥3॥

**ಬಾರಣ್ಣ ಬೆಳದಿಂಗಳೇ** **ರಾಗ: ಶ್ರೀ**

ಬಾರಣ್ಣ ಬೆಳದಿಂಗಳೇ ಬಂದು ಸೇರಣ್ಣ ಬೆಳದಿಂಗಳೇ ತಿಂಗಳೇ ಬೆಳುಬೆಳುದಿಂಗಳೇ॥ಪ॥ ಹಿಂದೆ ಮುಂದೇ ನೋಡೀ ಎಂದೂ। ನಿಂದು ನಿಂಬಾ ಹಿಂದೆಂದಿನ ಸುಖ। ಇರದೆ ಏಕೋ ಎಂದು। ಮೇಲಾಡುವಂತ ತಿಂಗಳೇ। ವೋಲಾಡು ಬೆಳದಿಂಗಳೇ॥1॥ ಸೂರ್ಯನ ತೆರೆ ಮುಳುಗಿ। ಚಂದ್ರಾನ ತೆರೆಎದ್ದು। ಕ್ಷೀರಾದ ಕಡಲಿನ ಸಾರವ ತೋರುತ। ಮೇಲಾಡುವಂತ ತಿಂಗಳೇ। ವೋಲಾಡು ಬೆಳದಿಂಗಳೇ॥2॥

**ಬಾರಯ್ಯ ಬೆಳದಿಂಗಳೇ** **ರಾಗ: ಮಧ್ಯಮಾವತಿ**

ಬಾರಯ್ಯ ಬೆಳದಿಂಗಳೇ ನಮ್ಮೂರ ಹಾಲಿನಂಥ ಬೆಳದಿಂಗಳೆ॥ಪ॥ ಹೊಂದೆರೆ ಹಕ್ಕೀ ಬಂದಾವಕ್ಕಾ। ಗರಗರನಾಡೀ ನಿಂದಾವಕ್ಕಾ॥1॥ ಕಾಮನೂರಾ ಹೊಳೀಯಿಂದಾ। ಕುಂತೂ ನಿಂತೂ ಬರುತಿದ್ದಾ॥2॥ ಕಾಮನ್ಯಾರೇ ತಡಾದೋರೂ। ಭೀಮನ್ಯಾರೇ ತಡಾದೋರೂ॥3॥ ತಿಂಗ್ಳು ತಿಂಗ್ಳಿಗೆ ತಿಂಗಳು ಮಾವನ ಪೂಜೆ। ಗರುಡನಾ ಪೂಜೆ ಘನಪೂಜೆ॥4॥ ಗರುಡನಾ ಪೂಜೆ ಘನಪೂಜೆ। ತಿಂಗಳು ಮಾವ ನಿನ ಪೂಜೆ ಗಂಗೆ ದಡದಾಗೆ॥5॥

**ಬಾಬಾ ಚಂದಮಾಮ** **ರಾಗ:ಮಲಯಮಾರುತ**

ಬಾಬಾ ಚಂದಮಾಮ ಮುತ್ತುಕೊಡು ಬಾ। ಕಬ್ಬು ಹೆಚ್ಚಿ ತಿರುಳೇ ಕೊಡುವೆ ಮಾವುಹಚ್ಚಿ ವಾಟೇ ಕೊಡುವೆ। ಬಾಬಾ ಚಂದಮಾಮ। ತಿಂಡಿ ತಿನ್ನು ಬಾ॥1॥ ಕೌಲಿ ಹಾಲು ಕರೆಯಿಸಿ ಕೊಡುವೆ। ಹಾಲು ಕುಡಿಯಲು ಬಟ್ಟಲು ಕೊಡುವೆ। ಬಾಬಾ ಚಂದಮಾಮ ಹಾಲು ಕುಡಿ ಬಾ॥2॥ ತುಪ್ಪದ ದೀಪ ಹಚ್ಚಿ ಇಡುವೆ। ಪುಟ್ಟ ಪುಸ್ತಕ ಓದಲು ಕೊಡುವೆ। ಬಾಬಾ ಚಂದಮಾಮ ಪಾಠ ಓದು ಬಾ॥3॥ ಆಟದ ಸಾಮಾನೆಲ್ಲ ಕೊಡುವೆ ನಿನ್ನ ಸಂಗಡ ಆಡುತಲಿರುವೆ। ಬಾಬಾ ಚಂದಮಾಮ ಕೂಡಿ ಆಡು ಬಾ॥4॥

**ಬೆಳದಿಂಗಳು ಹಾಲ್ ಚೆಲ್ಲಿದೆ** **ರಾಗ: ಶುಭಪಂತುವರಾಳಿ**

ಬೆಳದಿಂಗಳು ಹಾಲ್ ಚೆಲ್ಲಿದೆ ಹುಣ್ಣಿಮೆ ಇರುಳಲ್ಲಿ। ಬನದಂಚಿನ ಹೊಳೆ ತುಂಗೆಯ ಸಕ್ಕರೆ ಮರಳಲ್ಲಿ॥ಪ॥ ಓರೀರ್ವರು ನಾವೀರ್ವರು ಶೃಂಗಾರದಿ ಕೂಡಿ। ನಲಿದಾಡುವ ಬಾನಲ್ಲಿ ಇಳೆ ರಸದೋಕುಳಿಯಾಡಿ॥1॥ ಮೇಲ್ಗಡೆ ಬಾನ್ ಕೆಳಗಡೆ ನಾನ್ ಜೊನ್ನದ ಜೇನ್ ನಡುವೆ।ನನ್ನೊಳು ನೀನ್ ನಿನ್ನೊಳು ನಾನ್ ನಮಗಿನ್ನೇನ್ ಗೊಡವೆ॥2॥ ಹೊನ್ನೊಲುಮೆಯ ಹೊಂಗಿರಣದಿ ತೇಲುವ ಬಾ ನಾವೇಷ ಆಲಿಂಗನದಾವರ್ತದಿ ಮುಳುಗಿದರೇನ್ ಸಾವೇ?॥3॥

**ಬೆಳಗುವ ಚಂದ್ರನ ನೋಡಣ್ಣ** ರಾಗ:ಚಂದ್ರಜ್ಯೋತಿ

ಬೆಳಗುವ ಚಂದ್ರನ ನೋಡಣ್ಣ। ರೋಹಿಣಿ ಗಂಡನು ಅವನಣ್ಣ।।ಪ।। ತೇಲುವ ದೀಪದ ಹಾಗಿಹನು। ಬೆಳ್ಳಿಯ ಬಟ್ಟಲ ಹೋಲುವನು। ಬಿಲ್ಲಿನ ಹಾಗೆ ಇದ್ದವ ಮೊನ್ನೆ। ತಟ್ಟೆಯ ರೂಪವ ತಾಳಿಹನಿಂದು।।1।। ಈ ಪರಿ ಹಿಗ್ಗುವ ಚಂದ್ರನ ನೋಡಣ್ಣ। ಹುಣ್ಣಿಮೆ ಚಂದ್ರನ ನೋಡಣ್ಣ। ಸೋಜಿಗ ನನಗಿದು ಕಾಣಣ್ಣ। ಆಯಿತು ಹೇಗಿದು ಹೇಳಣ್ಣ।।2।।

**ಬಂದಿದೆ2 ತಿಂಗಳ ರಾತ್ರಿ** ರಾಗ: ಕಮಾಚ್

ಬಂದಿದೆ ಬಂದಿದೆ ತಿಂಗಳ ರಾತ್ರಿ। ಶೀತಲ ಕಿರಣದ ಅಮೃತ ರಾಶಿ। ಬೆಳದಿಂಗಳ ಕಾಂತಿ ಸುಧೆಯ ಹರಿಸಿ।।ಪ।। ಮೋಹಕ ತಾರೆ ಚಂದ್ರಮ ಚೆಲುವು ನೀಲಿಯ ಬಾನಿನ ಶಾಂತಿಯ ಸೊಲ್ಲು। ಭುವಿಯಂಗಳದಲಿ ಧಾವಿಸಿದೊಲವು। ತಂಗಾಳಿಯು ತರುಲತೆಗಳನಪ್ಪಿ। ಭೂಮಿಯ ಮೇಲಣ ಚರ ಅಚರಕೆಲ್ಲ। ಅಮೃತಧಾರೆಯ ಬೆಳಕನು ಚೆಲ್ಲಿ।।1।। ಮುಗಿಲ ಮುಸುಕಲಿ ಮೀಯುತಲಿ ಹಾಗೊಮ್ಮೆ ಹೀಗೊಮ್ಮೆ ಕದ್ದುನೋಡಿ। ಬಾಗಿಲ ಮರೆಯ ನವ ವಧುವಂತೆ ಶಿವನು ಧರಿಸಿದ ಶಶಿಧರನಾಗಿ। ಭಾಸ್ಕರನಿಗೆ ಭವ್ಯ ತಿಲಕವಾಗಿ। ಇಂಪು ತಂಪು ಗಳ ಚೆಲ್ಲುತ ನಿಂತು।।2।।

**ಬಂದಾ2 ಚಂದ್ರ** ರಾಗ; ಯಮನ್

ಬಂದಾ ಬಂದಾ ಚಂದ್ರ ಚಂದ್ರ ಮುಗಿಲಿನ ಅಂಚಿಂದ.... ಮೋಡದ ಮರೆಯಿಂದ।।ಪ।। ಗಗನದೊಳ್ ಅವನೇ ಅಂದ ಕತ್ತಲೆ ಕಾಳನ ಕೊಂದ। ಆ....ಹೊಂಬೆಳಕನು ತಂದ.... ಚೆನ್ನಿಗನೇ ಚಂದ।।1।। ತಾರಾಗಣಗಳ ಮಾಲೆ ಹೊರಟಿದೆ ಸಾಲಿಗೆ ಸಾಲೆ।। ಮುಂಬೆಳಕನು ತಂದ... ಮಕ್ಕಳ ಮನಕೆ ಆನಂದ ತಂದ।।2।।

**ಮೂಡಲೊಳಗೆ ಚಂದ್ರನೀಗ** ರಾಗ:ಶುದ್ಧಧನ್ಯಾಸಿ

ಮೂಡಲೊಳಗೆ ಚಂದ್ರನೀಗ ಮೂಡುತಿಹನು ದೂರ ದೂರ। ಕೋಡುತಿಹುದು ಕಳ್ಳನಂತೆ ಕೂಡೆ ಕತ್ತಲೆ।।ಪ।। ನೋಡು ಮನೆಯ ಮೇಲೆ ಬೆಳಕು। ಕೂಡಿ ಬೆಳ್ಳಿಯಿಂದ ತಗಡು। ಮಾಡಿ ಹೊದಿಸಿದಂತೆ ಕಣ್ಗೆ। ಹೊಳೆಯುತಿರುವುದು।।1।। ಮೇಲೆ ಬೆಳ್ಳಿ ಬಟ್ಟಲನ್ನು ಹೋಲುತಿಹನು ಶಶಿಯು ನೆಲವು। ಹಾಲ ಮಳೆಯ ಕರೆದ ತೆರದಿ ಬೆಳಗುತಿರುವುದು।।2।। ಬಾಲರೆಲ್ಲ ಕೂಡಿ ಮುದದಿ ಬಾಲಕೇಳಿ ಯಾಡುತಿಹರು। ಮೇಲೆ ಮೇಲೆ ಹರುಷ ವುಕ್ಕುತಿಹುದು ಜನರಿಗೆ।।3।।

**ವಾವಾ2 ಅಂಬುಲಿಯೇ (ತಮಿಳು)** ರಾಗ:ಮಲಯಮಾರುತ

ವಾವಾ ವಾವಾ ಅಂಬುಲಿಯೇ ಮಗಿಳ್‌ಂದು ಆಡುವೋಂ। ಆಕಾಶ ವೀದಿಯಿಲೇ ಓಡುಂ ಪರಂ ಜ್ಯೋತಿಯೆ ನೀ। ಕೂಡಿ ಇರುವರುಮಾಯ್ ಸೇಂದು ವಿಳೈಯಾಡಿಡಲಾಮ್ ಅನ್ನೈಯಾಲೇ ಆಗಾದೆನ್ರು ಮುನ್ನಾಲೇ ಸೊಲ್ಲಿವಿಟ್ಟಾಳ್। ಅದನಾಲೇ ನಾನಳೈತ್ತೇನ್ ಸೀಕ್ಕಿರಮಾಯ್ ಓಡಿವಾರಾಯ್। ಚೆಪ್ಪು ತಂಗ ರತ್ನ ಬೊಮ್ಮೈ ಪಟ್ಟುಕುಲ್ಲಾ ನಾನ್ ತರುವೇನ್। ಕೂಡಿ ಇರುವರುಮಾಯ್ ಸೇಂದೇ ವಿಳೈಯಾಡಿಡಲಾಮ್।।

**ಸುಧೆ ಸುರಿಯುವ ತಿಂಗಳ ಕಳೆ** ರಾಗ: ಮೋಹನ

ಸುಧೆ ಸುರಿಯುವ ತಿಂಗಳ ಕಳೆ ನೀಲಿಯ ತಿಳಿ ಬಾನು। ಕೆಳಗಿದೊ ನೆರೆ ಮಲಗಿಹ ಇಳೆ ಒಬ್ಬನೇ ಸುಖಿ ನಾನು।।ಪ।। ತೀಡುತಲಿದೆ ತಂಗಾಳಿ ಮೌನವು ಹಬ್ಬುತಿದೆ। ಹಾಡುತ ಬಲು ಮುದ ತಾಳಿ। ಎನ್ನೆದೆಯುಬ್ಬುತಿದೆ।।1।। ಎನಗಮೃತ ತಿಳಿಜೊನ್ನು। ನಾನದ ಕುಡಿಯುವೇ ಅಮರತತ್ವವ ಇದೋ। ಮುನ್ನ ನಾನಿಲ್ಲಿಯೇ ಪಡೆಯುವೆನು।।2।।

**ಹುಣ್ಣಿಮೆಯ ಆಗಸದೀ** ರಾಗ: ಸಾರಂಗ

ಹುಣ್ಣಿಮೆಯ ಆಗಸದೀ ಚಂದಮಾಮ ಬಂದಿಹನು। ನಮ್ಮ ಅಂಗಳಕೆ ಬಂದಿಹನು।।ಪ।। ಬೆಳಗುತಲಿ ಜಗವೆಲ್ಲ ತೊಳಗಿಹನು। ಚಂದಿರನು ಬಂದಿಹನು ನಮ್ಮ ಚಂದಿರ ಬಂದಿಹನು ।।1।। ಮುಳುಗುತಲಿ ರವಿಯು ಮೂಡಿಹನು

ಶಶಿಯು। ಹರಡುತ್ತ ಜಗದಿ ಚೆಲುವ॥2॥ ಮರೆಯುತ್ತ ಬಂದ ಸೂಸುತ್ತ ನಿಂದ। ಜಗಕೆಲ್ಲ ಬಾಳ ಸುಧೆಯ ಜಗಕೆಲ್ಲ ಕಾಂತಿ ನಿಧಿಯ। ।3॥

# ಹೂವುಗಳು

## ಮಲ್ಲಿಗೆ

**ಅರಳು ಮಲ್ಲಿಗೆ ಅರಳು** **ರಾಗ: ಶಿವರಂಜನಿ**

ಅರಳು ಮಲ್ಲಿಗೆ ಅರಳು ಬಿರಿದು ಪರಿಮಳ ಬೀರು। ಹರಿಪಾದ ಸೇರಲು ಅರಳು ಅರಳು ಅರಳು॥ಪ॥ ಅರಳು ಸಂಪಿಗೆ ಸಿರಿಯೆ ಸೌರಭದ ಸುಮ ಬಿರಿಯೆ ಸಿರಿ ಮಾಲೆ ನೇಯಲೂ ಅರಳು(3ಸಾರಿ)॥ಅ.ಪ.॥ ವನದೇವತೆ ತಾನು ಒಲಿದಿತ್ತ ಸುಮಗಳನು। ಒಲವಿನಿಂದಲಿ ತಂದು ಚಲುವ ಬೀರುತ ನಿಂದು। ನೇಯ್ದು ಈ ಮಾಲೆಯನು ಹರಿಗೆ ನಾ ಅರ್ಪಿಸುವೆ॥1॥ ಮನದ ಮನ ಹರ ಮಾಲೆ ತುಳಸಿ ಪಾವನ ಮಾಲೆ। ಚರಣಕರ್ಪಿತವೆಂದು ಸ್ಮರಣೆಯಿಂದಲಿ ನಿಂದೆ। ಮುಕುತಿ ಮನದಲಿ ನೆನೆದೆ ಭವದಿ ಭಕುತಿಯ ತಳೆದೆ॥2॥

**ಆ ಹಾಹಾ ಮಲ್ಲಿಗೆ** **ರಾಗ: ಶಿವರಂಜನಿ**

ಆ ಹಾಹಾ ಮಲ್ಲಿಗೆ ಬರುವೆನೆ ನಿನ್ನಲ್ಲಿಗೆ। ಚುಕ್ಕಿ ಹೊಳಪು ಬೆಳಗಿದಾಗ। ಬೆಳಗು ಬೆಳ್ಳಿ ತೊಡಗಿದಾಗ। ತಿಂಗಳಿನ್ನು ಮುಳುಗದಾಗ ಬರುವೆನೆ ನಿನ್ನಲ್ಲಿಗೆ॥ಪ॥ ಹೇ ಸುಗಂಧಗಂಧ ಮೋಹನೆ ಏ ಮಂದ ಪವನ ವಾಹನೆ। ಹಾ ತಲುಪಿದೆ ಆವಾಹನೇ....॥ಅ.ಪ.॥ ನಸುಕು ಸುಸಿಲ ಸಮಯದಾಗೆ। ಸೌರವವದು ಸೂಸಿತಾಗೆ। ಕಾಣದೆ ಅದು ಬರುವ ಹಾಗೆ। ಬರುವೆನೆ ನಿನ್ನಲ್ಲಿಗೆ। ಹೇ ಚೂತಾಂಕುರ ಚಾಮರೆ। ಏನಿನ್ನಿದಿರೇ ತಾಮರೇ। ಹಾ ಬೇರೆ ಸೋಮಕಾಮರೇ॥1॥ ಸವಿಗನಸಿನ ಕಾಲದಲ್ಲಿ ಉಷೆ ಕುಣಿಯುವ ಕಾಲದಲ್ಲಿ। ನಿನ್ನ ಮೋಹ ಜಾಲದಲ್ಲಿ ಬರುವೆನೆ ನಿನ್ನಲ್ಲಿಗೆ। ಹೇ ಕೋಕಿಲ ನುಡಿಗಾಯನೆ। ಏ ಬಾನ ಬಾಯಿ ಆ ಎನೆ। ಹೇಗಾಳಿಗೊಳಲು ಹೋ ಎನೇ॥2॥ ಮೂಗಾಳಿಯು ಮೂಗುದಾರ। ಎಳೆವುದು ಹೇ ಮಧುಪ ಬಾರ। ಮಧು ಚುಂಬನ ಬೇಗ ತಾರ? ಹಾಡುವುದೀ ಗಾಳಿ। ಒಲವಿನ ಹೊಸಕಾಳೀ। ಕವಿಯ ರೂಪತಾಳಿ॥3॥

**ಇದ್ದಲ್ಲೆ ಇರು ಹೂವೆ** **ರಾಗ: ಯಮನ್ ಕಲ್ಯಾಣಿ**

ಇದ್ದಲ್ಲೆ ಇರು ಹೂವೆ ಗಾಳಿ ಹೊಳೆಯೊಳು ನಾವೆ। ತೂಗಾಡುತ್ತಿರುವಂತೆ ತೂಗುತ್ತಿರು(2ಸಾರಿ)॥ಪ॥ ಸವಿಯೆ ಚೆಲುವಿನ ಜೇನು ಹೂ ಕೀಳ ಬೇಕೇನು। ನೋಟ ಕೂಟವು ಸಾಕು ಮಾಗುತ್ತಿರು(2ಸಾರಿ)॥1॥ ಎಲೆರೆಲೆಯ ಪರಿಮಳಿಸಿ ನಾದಗೀತವನಳಿಸಿ। ಮೈಮನದಿ ನಂದನವ ಅರಳಿಸುತ್ತಿರು(2ಸಾರಿ)॥2॥ ಮೈಯ ಬಾನೊಳಗಿತ್ತು ಅಲ್ಲಿ ಬೆಳಕನು ಬಿತ್ತು। ಮಣ್ಣನ್ನು ಕಂಪುತ್ತ ಹೊರಳಿಸುತ್ತಿರು(2ಸಾರಿ)॥3॥

**ಎಲ್ಲಿಗೆ2 ಪಯಣವಿದೆಲ್ಲಿಗೆ** **ರಾಗ: ಮಲಯಮಾರುತ**

ಎಲ್ಲಿಗೆ ಎಲ್ಲಿಗೆ ಪಯಣವಿದೆಲ್ಲಿಗೆ। ಕೇಳಿದಳೆನ್ನನು ಮುದ್ದಿನ ಮಲ್ಲಿಗೆ। ಅಲ್ಲಿಗೆ ಅಲ್ಲಿಗೆ ನನ್ನವಳಲ್ಲಿಗೆ। ಹೋಗುವೆನಲ್ಲಿಗೆ ಎಂದೆನು ನಾಬಲು ಮೆಲ್ಲಗೆ॥1॥ ಮಾತಿನ ಜಾಣ ಎಲ್ಲಿಗೆ ಪಯಣ। ಕೇಳ್ದಳು ಕಣ್ಣನು ಚಿವುಟಿ ಗುಲಾಬಿ। ಮಾತಿನ ಮಲ್ಲಿ ಇರುವಳು ಅಲ್ಲಿ। ಹೋಗುವೆನಲ್ಲಿಗೆ ಎಂದೆನು ನಾ ಬಲುಮೆಲ್ಲಗೆ॥2॥ ಅನುಪಮದಾನಂದ ಸಂಭ್ರಮವಿದು ಚೆಂದ। ಅಣಕಿಸುತೆನ್ನನು ನಕ್ಕಳು ಬಕುಳ। ನಗುತಿರೆ ಬಕುಳ ಕರೆತರುವೆನವಳ। ತಕ್ಕುದಗೈಯ್ವಳು ಅವಳೆದುರು ನೀ

ನಕ್ಕರೆ॥3॥ ಬಕುಳ ಗುಲಾಬಿ ಮಲ್ಲಿಗೆ ಚಂಪಕ। ಬೀಳ್ಕೊಡಿರೆನ್ನನು ಹೋಗುವೆನಲ್ಲಿಗೆ। ಕಾದಿಹಳಲ್ಲಿ ನನ್ನವಳಲ್ಲಿ ಆನಂದವಲ್ಲಿ ಆಕಾಶದಲ್ಲಿ। ಹೋಗುವೆನಲ್ಲಿಗೆ ಎಂದೆನು ನಾ ಬಲು ಮೆಲ್ಲಗೆ॥4॥

**ಎಲೆ ಎಲೆ ಮಲ್ಲಿಗೆ ಬಳಕುವೆ** **ರಾಗ: ಕಮಾಚ್**

ಎಲೆ ಎಲೆ ಮಲ್ಲಿಗೆ। ಬಳುಕುವೆ ಮೆಲ್ಲಗೆ। ಬಳ್ಳಿಯ ಮೇಲೇರಿ। ಬೀಸುವ ಗಾಳಿಗೆ। ಸೂಸುವ ಸೌರಭ। ಅನುರಾಗವ ಬೀರಿ॥ಪ॥ ಚುಕ್ಕಿಯ ತೆರದಲಿ। ನಕ್ಕು ನಲಿವೆ ನೀ। ನಿರ್ಮಲ ಹರ್ಷದಲಿ। ನಿನ್ನೀ ತಿಳಿನಗೆ। ಸೆರೆ ಹಿಡಿಯುವ ಬಗೆ। ಅರೆ ನಿಮಿಷದಲಿ॥1॥ ಈ ಬೆಳುನಗೆಯಲಿ। ಚೆಲುವಿನ ಮೊಗದಲಿ। ತುಳುಕುವ ಆನಂದ। ಅದಾವ ಪೂರ್ವದ। ಉದಾರ ಹೃದಯವು। ಚೆಲ್ಲಿದ ಪ್ರತಿಬಿಂಬ॥2॥ ನಿನ್ನೊಳು ಸರಳತೆ। ಸೌಂದರ್ಯದ ಜೊತೆಯಲ್ಲಿ। ಬಾಳುತ್ತಲಿಹುದು। ನರುಗಂಪಿನ ಸಿರಿ। ಒಲವಿನ ನಲಿವಿನ। ಕತೆ ಹೇಳುತಿಹುದು॥3॥

**ಹೂವೇ ಭುವಿಯಲಿ**

ಹೂವೇ ಹೂವೇ ಹೂವೇ ಭುವಿಯಲಿ ಮಿಂಚುವಿಯಲ್ಲೇ। ಸಂಜೆಗೆಂಪಿನಲಿ ಹಸಿರು ಬಳ್ಳಿಯಲಿ। ಅರಳಿದೆ ಚೆಲುವಿನ ಮಲ್ಲಿಗೆ॥1॥ ಗಾವುದ ಗಾವುದ ಉದ್ದದಲು। ತಂಪು ತಣ್ಣನೆ ಗಾಳಿ ಬೀಸಲು। ನಿನ್ನ ಪರಿಮಳ ತುಂಬಿ ಹರಡಲು। ಶುಭ್ರಶ್ವೇತ ಮಲ್ಲಿಗೆ ಸೊಬಗು॥2॥ ಹೆಂಗೆಳೆಯರ ಮುಡಿ ಮಧ್ಯದಲಿ। ನೀನಿಂದಿರುವೆನಗುತ ನಗುತಲಿ। ಆ ದೇವನ ಚರಣ ಕಮಲದಲಿ। ನಿದ್ರಿಸುವೆ ನೀ ಮಲಗಿ ಹಾಯಾಗಿ॥3॥ ಸುಂದರ ಚಿತ್ರಣ ಬರೆದವನ್ಯಾರು? ಅಪ್ಸರೆ ಚೆಲುವನು ನೀಡಿದರ್‍ಯಾರು? ಘಮಿಸುವ ಅತ್ತರು ಇತ್ತವರ್‍ಯಾರು? ಬಾಳಲಿ ನಗುವನು ಕಲಿಸದರ್‍ಯಾರು?॥4॥

## ಗುಲಾಬಿ

**ಏನಿದೇನಿದು ಮಾಟ** **ರಾಗ: ಯಮನ್‌ಕಲ್ಯಾಣಿ**

ಏನಿದೇನಿದು ಮಾಟ। ನೋಡಲೆನಿತಿದಚ್ಚರಿ। ಸೊಬಗೆ ಸೂರೆ ಹೋದ ಬೇಟ। ನೋಡಿದನಿತು ಅಚ್ಚರಿ॥ಪ॥ ಅರುಣ ಮೂಡಿದೊಡನೆ ಮೂಡಿ। ಬಿಮ್ಮನೆ ಬಿರಿದರಳಿಹೆ। ಕಿರಣ ಕಾಂತಿಯೊಡನೆ ಕೂಡಿ। ಕಮ್ಮನೆ ಮಘ ಮಘಿಸಿಹೆ॥1॥ ನೆಲದ ಸಾರ ಸತ್ವರಸವೆ। ಹೂವೊಳರಳಿನಿಂದುದೆ। ಒಲುಮೆ ವೆರೆದ ಚೆಲುವೆ ಬಿರಿದ ಕೆಂಪು ಕುಸುಮವಾದುದೆ॥2॥ ಕಣ್ಣಿಗಿನಿದು ಮುಟ್ಟಲು ಮೃದು। ಅಹಹ ಏನ್ ಸುವಾಸನೆ। ಪುಳಕಗೊಂಡ ಕೆಂಪು ಮೈ। ಮಂದಹಾಸದಾನನೆ॥3॥ ದುಂಬಿಹಾಡಿ ತಾನೆ ಆಡಿ। ಒಲಿವುದನೇ ಕಾದಿಹೆ। ಮಧುರ ಮಧುವನೊಲಿದು ನೀಡಿ। ನಲಿವುದನೆ ನೋಂತಿಹೆ॥4॥ ಭೃಂಗರಾಜ ಸಂಗಸುಖಿಯೆ। ನೀನೆಧನ್ಯೆ ಧರೆಯಲಿ। ಮಧುರ ಹೃದಯೆ ಹಸನ್ಮುಖಿಯೆ।ನಿನ್ನನೆಂತು ಮರೆಯಲಿ॥5॥

**ಗುಲಾಬಿ2 ಹೇಳೆ ಗುಲಾಬಿ**

ಗುಲಾಬಿ ಗುಲಾಬಿ ಹೇಳೆ ಗುಲಾಬಿ। ಅರಳಿದೆ ಮುಳ್ಳಲಿ ಹೇಗೆ? ಗುಲಾಬಿ॥ ಕೋಮಲ ತನುವು ಸುಂದರ ಮನವು। ಗಾಯಗೊಳಿಸಿತೆ? ಮುಳ್ಳಿನ ಚೂಪು॥ ದೇಶ ವಿದೇಶದಿ ನಿನ್ನ ಪ್ರಖ್ಯಾತಿ। ರಂಗುರಂಗಿನ ಹಬ್ಬದ ಹೋಳಿ॥ ದೇವನ ಕೊಡುಗೆ ಬಣ್ಣದ ಕೊಡುಗೆ। ಹೂ ಲೋಕದಲಿ ಮೆರಗು ನಿನ್ನದೆ॥1॥ ಬಾ ಬಾ ಬಾರೆಂದು ಸನಿಹಕೆ ಕರೆದು। ಜನಮನಗೆಲ್ಲುವೆ ಗುಲಾಬಿ ಮುದ್ದು॥ ಮುಗ್ಧ ಮುಖದ ಹುಸಿನಗೆ ಚೆಂದ। ನಿನ್ನಲಿ ಅಡಗಿದೆ ಆ ಮಕರಂದ॥ ದೇವನ ಶಿರದಲಿ ಪಾದದ ಅಡಿಯಲಿ। ಎಲ್ಲೆಡೆಗಳಲೂ ನೀನೇ ಗುಲಾಬಿ॥ ಮುಳ್ಳಲಿ ನಗುವೆ ಸಹನೆಯ ಖನಿಯೆ। ಕಲಿಯಲು ಪಾಠ ಗುಣನಿಧಿ ಆಗಿಹೆ॥2॥

**ನಮ್ಮ ಅಂಗಳದಿ ನೀ ಬಂದು** **ರಾಗ: ಯಮನ್ ಕಲ್ಯಾಣಿ**

ನಮ್ಮ ಅಂಗಳದಿ ನೀ ಬಂದು। ಹೃದಯದಂಗಳದಿ ನೀ ನಿಂದು। ನೀ ಚಿಗುರಿ ಆಶಾಲತೆಯು ಚಿಗುರಿ॥ಪ॥ ದಟ್ಟಾಗಿ ನೀ ಬೆಳೆದು ಬೇರು ಕೊಟ್ಟು। ಎನ್ನಾಸೆ ಹೃದಯಕ್ಕೆ ಬೇರು ಕೊಟ್ಟು। ಹೂವಾಗಿ ನೀ ಅರಳಿ ಕಂಪಸೂಸಿ। ಎನ್ನ ಮನವರಳೀ ಕಂಪಸೂಸಿ॥1॥ ನಗುನಗುತ ಎತ್ತರದಿ ನೀ ನಿಂದು। ಗಾಳಿಯಲಿ ತೇಲಾಡಿ ನಲಿದಾಡಿ ತಲೆದೂಗಿ। ಹೃದಯವನೆ ಕದ್ದು ಕೈ ಸೇರಿ ತಲೆ ಏರಿ। ಕಂಪೆಲ್ಲ ನಾನಾಗಿ ನೀನೇ ನಾನಾಗಿ॥2॥ ಅಂಗಳಕೆ ಬಂದುದೇ ಭಾಗ್ಯವೆಂದು ನೀ ಸಿಕ್ಕಿದುದೆ ಎನ್ನ ಪುಣ್ಯವೆಂದು। ನಲಿದಾಡಿ ನೀ ಕುಣಿದು ಕುಣಿಸೆನ್ನನು ಚೆಂದುಟಿಯ ಗುಲಾಬಿ ಅವಳಿನ್ನ ರಾಣಿ॥3।

**ಸುಗಂಧ ಸೂಸುವ ಗುಲಾಬಿ**

ಸುಗಂಧ ಸೂಸುವ ಗುಲಾಬಿ ಹೂವೆ। ನಿನಗೂ ಕೂಡ ಹಿಂಸೆಯ ನೋವೆ। ಮುಸುನಗುತ ತಂಬೆಲರಲಿ ಅರಳುವೆ। ಸೌಂದರ್ಯೋಪಾಸಕ ಕಂಡಾಗ ಸಾಯುವೆ॥1॥ ಸುಂದರವಾಗಿರುವುದು ನಿನ್ನ ತಪ್ಪೇ। ಚಿವುಟಿ ಹಾಕುವರಲ್ಲೋ ಬೆಪ್ಪೇ। ಸೃಷ್ಟಿಯ ಸೊಬಗೇ ನಿನ್ನಯ ತಾಣ। ನಿನಗೂ ಇದೇ ಗ್ರಹಣ॥2॥ ಸ್ತ್ರೀಕುಲಕೆ ನೀನೆಂದರೆ ಪ್ರಾಣ। ಸೌಂದರ್ಯದಿಂದಲೇ ಕೇಡುಕಾಣ। ಸೌಂದರ್ಯಕೆ ಇನ್ನೊಂದು ಮುಖ ಹೆಣ್ಣು। ಅವಳೇ ನಿನಗೆ ಹುಣ್ಣು॥3॥ ನಿನ್ನ ಕಂಡಾಗ ಅರಳುವವು ಅವಳ ಕಣ್ಣು। ಆಗಲೇ ಮುಡಿಗೇರಿ ಮುಕ್ಕುವೆ ಮಣ್ಣು॥4॥

## ತಾವರೆ

**ಇಂದು ಕೆಂದಾವರೆಯು** **ರಾಗ: ಕಲ್ಯಾಣಿ**

ಇಂದು ಕೆಂದಾವರೆಯು ದಳದಳಿಸಿ ದಾರಿಯಲಿ ಗಂಧದೌತಣ ಹೋಗಿ ಬರುವ ಜನಕೆ। ಮಂದಮಾರುತನಿರಲಿ ಮರಿದುಂಬಿ ಇರಲಿ। ಆನಂದವಿರೆ ಅತಿಥಿಯನು ಕರೆಯಬೇಕೇ?॥1॥ ನಗುತಲಿದೆ ನೀರು ಹೊಂಬಿಸಿಲು ಕಚಗುಳಿಯಿಡಲು। ದುಂಬಿಗಳು ವನವನೆ ಗುಂಜಿಸಿರಲು। ನಾಚಿ ತಲೆಬಾಗಿಸಿತು ಕಮಲ। ದೂರದ ಬಾನ ದಾರಿಯಲಿ ಸಪ್ತಾಶ್ವವೇರಿ ಬರಲು॥2॥ ತನ್ನ ಕೈ ಕೈಯೊಳು ಒಲವು ಬಲೆಗಳನಿತ್ತು ನೀರಿನಾಳದೊಳವನ್ನು ಬಿಂಬಿಸುವನೋ। ಮೈ ಮರೆತುದಾ ಪದ್ಮ ಪರಿಮೆಗಳ ಪರಿವಾರ। ಮಂಜಾಗಿ ಕರಗಿತ್ತು ಸುತ್ತಮುತ್ತ॥3॥ ಇರುವ ದುಂಬಿಯ ಬಿಟ್ಟು ಬರುವನೇಸರ ಕರೆಗೆ। ಓ ಗೊಟ್ಟದೋ ನನ್ನ ಕೆಂದಾವರೆ ಬರುವ ಬಾಳಿನ ಕನಸು ರವಿಯಾಗ ಬಹುದೇನೋ?। ಕಾಯಬೇಕೋ ಅದಕೆ ಎಲ್ಲಿವರೆಗೆ?॥4॥

## ಕೇದಿಗೆ

**ಕೇತಕಿಯ ಬನಗಳಲಿ** **ರಾಗ: ಶಿವರಂಜನಿ**

ಕೇತಕಿಯ ಬನಗಳಲಿ ಸಂಚರಿಸದಿರು ಚೆಲುವೆ। ಸರ್ಪಮಂದಿರವಂತೆ ಕಂಪಿನೊಡಲು॥ಪ॥ ಮಧುರ ವೀಣಾಗಾನಾ ನಿರ್ಮಿಸುವ ನಾದ ಕಲೆ। ರಾಗಗಳ ಸಿಂಚಿಸುತಾ ಬಹುದು ಸಿಡಿಲು॥ ಅ.ಪ.॥ ದೇವ ಗಂಗಾ ತೀರ ಪುಷ್ಪಗಳ ಶೃಂಗಾರ। ಸುಳಿಯುವುದು ಮೃತ್ಯುವಿನ ಹಾದಿಯಾಗಿ। ಮೊಲ್ಲೆ ಮಲ್ಲಿಗೆಗಳಲೇ ಕಲ್ಲುಗಾಣವ ರಚಿಸಿ ಕೊಲ್ಲುವನು ಕಂದರ್ಪ ಕುಪಿತನಾಗಿ॥1॥ ಹೊನ್ನ ಹರಿವಾಣದಲ್ಲಿ ಪನ್ನೀರ ತುಂಬಿಹರು। ತಪ್ತಹಾಲಾಹಲವೀ ದೀಂಟಾಬೇಡ। ನಿನ್ನ ಪ್ರೇಮವೆ ನಿನ್ನಾ.. ಪಾವನ ಸಮಾಧಿಯನು। ಕಟ್ಟುತಿದೆ ಮೋಹದಲ್ಲಿ ಮುಳುಗಬೇಡ॥2॥ ಗಿರಿಶಿರದ ಸೌಧಗಳು ರತ್ನಬಂಧನಗಳಿಂದು। ಮಿಂಚುಗಳ ಹೊಂಗುರುಳು ಸಂಚುಗಳ ಚೆಂಚುವಿಂದು। ರವಿಚಂದ್ರ ತಾರೆಗಳು ರುದ್ರವಿಧಿ ಭೃತ್ಯರಿಂದು। ಹರಿಣಾಕ್ಷಿ ಬಗೆಯದಿರು। ನಿನ್ನೊಲುಮೆ ಹರ್ಷವೆಂದು॥3॥

## ಪಾರಿಜಾತ

### ಪಾರಿಜಾತ ಪಾರಿಜಾತ ನಿತ್ಯಜಾತ

**ಪಾರಿಜಾತ ಪಾರಿಜಾತ ನಿತ್ಯಜಾತ ನಿತ್ಯಯಾತ।।ಪ।। ಹಸಿರು ಮುರಿವ ಮರದ ತುಂಬ। ರಾಶಿಯಾಗಿ ಬೇಸರಿರದೆ। ದಿನದಿನವೂ ಅರಳುತಿಹವು। ಅರಳಿದಂತೆ ಉರುಳುತಿಹವು।।1।। ಮುಟ್ಟದೊಡನೆ ಮಾಸುವಂತೆ। ಸೋಂಕಿದೊಡನೆ ಸುಕ್ಕುವಂತೆ। ಬಹು ಕೋಮಲವಿವುಗಳಂದ। ಬೀರುತಿರಲು ಮಂದಗಂಧ।।2।। ನೆಲತಾಯಿಯ ಗರ್ಭ ಗೃಹದಿ। ಮಿದು ಚೆಲುವಿನ ರೂಪತಾಳಿ। ಜನಿಸಿದೊಡನೆ ಜನನಿಗೆಂದೆ। ತಮ್ಮದೆಲ್ಲ ಹೂಮಿಸುವವು।।3।। ಬಿದ್ದಲ್ಲಿಯೇ ಮುದುಡಿ ಬಾಡಿ। ಹೊಸ ಹೂವಿಗೆ ಆಸರಾಗಿ। ಸದ್ದಿಲ್ಲದೆ ಮಣ್ಣುಗೂಡಿ। ಸಫಲ ಮೌನ ತಾಳುತಿಹವು।।4।। ತಾಯಿಯೊಡಲ ಮತ್ತೆ ಸೇರಿ। ಮರಳಿ ಅರಳಿ ಬರುವೆವೆಂದು। ಹುಟ್ಟು ಹೊಂದು ಒಂದೆ ಎಂದು। ನೋವ ಮನಕೆ ಹೇಳುತಿಹವು।।5।।**

### ಪಾರಿಜಾತ ಪಾರಿಜಾತ ಪಾರಿಜಾತವೆ

ಪಾರಿಜಾತ ಪಾರಿಜಾತ ಪಾರಿಜಾತವೆ। ದೇವಲೋಕ ಸಂಜಾತೆ ಬೆಳಕಿನ ಹೂವೆ।।ಪ।। ನಕ್ಷತ್ರ ಸಾಲು ಗಿಡದ ತುಂಬ ಕೋಮಲ ಹೂವೆ। ಇಳೆಯ ಸೆರಗ ಬಯಸಿಬಂದ ಮುಗಿಲತಾರೆಯೆ। ಹೊಳೆವ ತಾರೆಗಿಂತ ಮಿಗಿಲು ನೀನೆ ಅಲ್ಲವೆ। ಅವಳಿಗಿರದ ಸೌಗಂಧ ನಿನ್ನ ಒಡಲಲಲ್ಲವೆ।। 1।। ತಾಯ ತೋಳಿನಲ್ಲಿ ವೈಯ್ಯಾರ ಬೀರುತ। ಜೊಂಪೆ ಜೊಂಪೆ ಬಳ್ಳಿಯಾಗಿ ಅರಳಿ ತೂಗುತ। ಮತ್ತ ಬರಸಿ ಹೊತ್ತ ಮರೆಸಿ ಮನವ ತೂಗಿದೇ। ಮನಸು ಕನಸು ಚಂದ್ರಿಕೆಯಲಿ ಮಿಂದಹಾಗಿದೇ।। 2।। ಪುಟ್ಟ ಹೂವು ಅಳಿವೆ ಬೇಗ ಸೌಂಗಧ ರಾಣಿಯೇ। ಆದರೇನು ಸೊಗವಸುರಿದು ಧನ್ಯಳಾಗಿಹೆ। ಮೌನದೊಳಗೆ ಮಾತು ಸುರಿದು ಪ್ರೀತಿ ಕಲಿಸುವೆ। ಚಣಕಾಲದ ಬದುಕಿನೊಳಗೂ ಅನನ್ಯಳೆನಿಸುವೆ।।3।।

## ಶಂಖಪುಷ್ಪ

### ಗಿಡದೊಳಗೆ ಅರಳಿ ಗುಡಿಯೊಳಗೆ ತೆರಳಿ

ಗಿಡದೊಳಗೆ ಅರಳಿ ಗುಡಿಯೊಳಗೆ ತೆರಳಿ। ಮನವ ಸೆಳೆಯುತಲಿರುವೆ ಎಂಥ ರೂಪಸಿ ನೀ।।ಪ।। ರಸಬಳ್ಳಿ ಒಡಲಿನಲಿ ಹಾಲ್ನೊರೆಯ ಬಣ್ಣದಲಿ। ಚೆಲುವ ಕೃಷ್ಣನ ಕೈಯ್ಯ ಶಂಖದಂತೆ। ಹಸಿರಿಂದ ನಿನ್ನಂದ। ನಿನ್ನಿಂದ ಹಸಿರಂದ। ಕಾಣ್ಹೋ ಕಂಗಳಿಗೆಂಥ ಭಾಗ್ಯ ಸುರಿವೆ।।1।। ತನುವೆನಿತು ಕೋಮಲವು ಸೋಕಿದರೆ ಎದೆಹದವು। ಎಳೆಯ ಕಂದನ ಅಪ್ಪಿ ಸುಖಿಸಿದಂತೆ। ನಗುತಿರೂ ನೀನಲ್ಲೆ ತಾಯ್ಬಳ್ಳಿ ಒಡಲಿನಲೆ। ಚೆಲ್ವ ಕೆಡಿಸೆವು ನಾವು ಸುಖಿಸುವೆವು ಕಂಗಳಲೆ।।2।।

## ಹೂವು

### ಅಂದ ಚಂದದ ಬೆಡಗಿನ

ಅಂದ ಚೆಂದದ ಬೆಡಗಿನ ಹೂವೇ। ಬಣ್ಣವ ಸೂಸುತ ನಗುತಿಹೆ ಏಕೆ? ಚಿಟ್ಟೆಯು ಬರಲು ದಳಗಳ ಅರಳಿಸಿ। ಮಧುರಸ ಹೀರಲು ಬಿಡುತಿಹೆ ಏಕೆ?।।1।। ನಿನ್ನಯ ಅಮೃತ ಅದ್ಭುತ ಪ್ರೀತಿ। ನಿನ್ನಯ ಸ್ನೇಹವ ನೆನೆಸುವುದೇಕೆ? ಸುಧೆಯನು ಸುರಿಸಿ ಸಂತಸ ಬೀರುವೆ। ತಾಯಿಯ ಮಡಿಲಲಿ ಶ್ರೀ ಧನ್ಯಳಿರುವೆ।।2।।

### ಚಂದದಿ ನಗುವ ಹೂಗಳನು

ಚಂದದಿ ನಗುವ ಹೂಗಳನು ಒಂದೊಂದಾಗಿ ಆರಿಸಿ ತಂದು। ಮಾಲೆಯಲಿ ಪೋಣಿಸಿಕೊಂಡು। ನಿನಗಾಗಿ ಅರ್ಪಿಸ ಬಂದಿಹೆನು।।ಪ।। ಬಣ್ಣಕ್ಕೆ ಬಣ್ಣದ ಮೋಹ ತೋರುವ। ಪ್ರೀತಿಯಲಿ ಜೋಡಿಸಿ ಹೂಗಳ। ಮನಸಿಗೆ ಬೇಗನೆ ಹೊಂದಲು ತೃಪ್ತಿಯ। ಬಯಸಿಹೆ ನಿನ್ನಯ ಕೃಪಾ ಕಟಾಕ್ಷವ।।1।। ಕ್ಷಣಕಾಲದ ಹೂಗಳ ಬದುಕು। ಸ್ನೇಹದ ಅರ್ಪಣೆ

ತೋರುವುವು। ಎಲ್ಲರ ಮನಸು ಹೂವಂತಾಗಲು। ಶ್ರೀ ಭಾವನೆಯೆಲ್ಲವ ನೀ ಕಾಣು॥2॥

### ಜೀವನವಾಗಲಿ ವಿಕಸಿತ

ಜೀವನವಾಗಲಿ ವಿಕಸಿತ ಸುಮನಾ। ಎಲ್ಲೆಡೆ ಹರಡಲಿ ಪರಿಮಳ ಮಧುರಾ॥ಪ॥ ಕಣ್ಣಲಿ ತುಂಬಲಿ ಬಣ್ಣದ ಸೊಬಗು। ಮನದಲಿ ನಿಲ್ಲಲಿ ರೂಪದ ಮೆರುಗು। ಇಬ್ಬನಿ ಕಣಗಳು ಮೊಗ್ಗಿಗೆ ತಾಗಿ। ಕೋಮಲ ದಳಗಳು ಬಣ್ಣವ ತುಂಬಲಿ॥1॥ ಸುಮಧುರ ಗಂಧವು ಸೂಸುತಲಿರಲು। ಚಿಮ್ಮುತ ಬರಲಿ ಹರುಷದ ಹೊನಲು। ಮಿನುಗುತ ದಿನಮಣಿ ಬೇಗನೆ ಬಂದು। ಜಗದಲಿ ಹೊಳಪನು ತುಂಬಿದ ನಿಂದು॥2॥ ಇಂಪಲಿ ಹಾಡುವ ಹಕ್ಕಿಯ ರಾಗ। ಎಳೆಗಳ ತಾಳದ ನಾದದ ಯೋಗ। ಜುಳುಜುಳು ಹರಿವ ನೀರಿನ ವೇಗ। ಶ್ರೀಸನ್ನಿಧಿ ತುಂಬಿದ ಅನುರಾಗ॥3॥

### ತುಂಬು ಪರಿಮಳ ಚೆಲ್ಲುತಿರುವ

ತುಂಬು ಪರಿಮಳ ಚೆಲ್ಲುತಿರುವ। ಬಗೆ ಬಗೆಯ ಹೂಗಳ ಆಯ್ದು। ಪ್ರೀತಿ ತುಂಬಿದ ಹನಿ ಚುಮುಕಿಸಿ। ತೃಪ್ತಿ ಎಲೆಯ ಮೇಲೆ ತಂದಿದೆ॥1॥ ಅರಳಿದ ಹೂಗಳು ಬಾಡಿದರೇನಂತೆ। ಪೋಣಿಸಿದ ಸಂಬಂಧ ಕಡಿಯುವುದೇ। ಧರಿಸಿದ ಮಾಲೆ ಕಳಚಿದರೂ। ಅಂಟಿದ ಸುಗಂಧದ ನೆನಪಿರದೆ॥2॥ ಹೂಗಳ ಬದುಕು ಕ್ಷಣಕಾಲವು। ಸ್ನೇಹದ ಅರ್ಪಣೆ ಶಾಶ್ವತವೂ। ಎಲ್ಲರ ಮನಸು ಹೂವಂತಾಗಲು। ಶ್ರೀಸುಗಂಧವಾ ನೀ ಸವಿಯುತಿರು॥3॥

### ನೂರು ಹೂವು ಅರಳಲಿ — ರಾಗ: ಬೃಂದಾವನಸಾರಂಗ

ನೂರು ಹೂವು ಅರಳಲಿ ಒಂದೆ ವನದಲೀ.... ನೂರು ಹಕ್ಕಿ ಉಲಿಯಲಿ ಒಂದೆ ಮರದಲೀ॥ಪ॥ ಅರಳುವ ಹೂವನು ಕಂಡು ಹಕ್ಕಿ ಹಿಗ್ಗಲೀ। ಹಕ್ಕಿಯದ್ವನಿ ಹನಿಮಳೆಯಲಿ ಹೂ ಕಂಪಿಡಲೀ॥ಅ.ಪ॥ ಅದಕೆ ಇದು ಇದಕೆ ಅದು ಒಂದಕ್ಕೊಂದಾಸರೇ। ತನು ಒಂದೇ ಮನವೊಂದೇ ನುಡಿತ ಮಿಡಿತ ಬೇರೇ। ಹೂವು ನೂರಕಿರಲಿ ನೂರು ಬಣ್ಣದಾ ಮೆರುಗು। ಹಕ್ಕಿಯ ದ್ವನಿ ಹಲಕಿಂಚರ ತೋರುವ ಬೆಡಗು॥ಚರಣ॥

### ಫುಲ್ಲ ಕುಸುಮ ಫಣಾಜಟಿ — ರಾಗ: ಶುಭಪಂತುವರಾಳಿ

ಫುಲ್ಲ ಕುಸುಮ ಫಣಾಜಟಿ ಪವನಲೀಲ ಲೋಲಕಟಿ। ಕುಣಿಯುತಿಹಳು ಲತಾನಟಿ ಪ್ರೇಮಮದೋನ್ಮಾದಿನಿ॥ಪ॥ ಮಲೆನಾಡ ಬಾನಾಡುಂಬೊಲ ಕವಿಯೋರ್ವನೆ ರಸಿಕ ಕುಲಂ ನವರಸಂಗಳೆ ಕುತೂಹಲ ನಂದನವಾಯ್ತು ಮೇದಿನೀ॥ಅ.ಪ॥ ಪ್ರತಿಕಂಪಿತ ಖಗಗಾನಂ ನಗನಿರ್ಝರ ಜಲತಾನಂ। ಹಿಮ್ಮೇಳದ ಸಮ್ಮಾನಂ ಭುವಿಯ ಭರತ ಬೋಧಿನಿ॥ ತೈತಕತ್ಯೆ ತೈತಕತ್ಯೆ ನರ್ತಿಸುತಿರೆ ಹೂವಿನ ಕೈ। ವರ್ತಿಸುತಿರೆ ಹಸುರಿನ ಮೈ ಚಲನಕಲೋನ್ಮಾದಿನೀ.....॥1॥ ಅತ್ತಲೊಮ್ಮೆ ಇತ್ತಲೊಮ್ಮೆ ನೆತ್ತಿಗೊಮ್ಮೆ ಪಾದಕೊಮ್ಮೆ। ಮಣಿವ ಕುಣಿವ ತಣಿವ ಹೆಮ್ಮೆ, ನಾಟ್ಯರಸಾರಾಧಿನೀ....॥ ರಸತರಂಗ ದುಯ್ಯಾಲೆಯಲಿ ಲತಾನಟಿಯ ಬಾಹುಗಳಲಿ। ರಿಂಗಣ ಕುಣಿವುದಂಗಳದಲ್ಲಿ ಕವಿಯ ಮನೋನ್ಮಾದಿನಿ॥2॥

## ಪರಿಸರ

### ಅಡವಿಯೊಳಗೆ ಒಂದು ಮರದಿ

ಅಡವಿಯೊಳಗೆ ಒಂದು ಮರದಿ। ವಾಸವಿದ್ದ ಗಿಳಿಯ ಹಿಂಡು। ಹಸಿರು ಉಸಿರು ನಾಶವಾಗಿ। ಪಯಣ ಹೊರಟವು॥ಪ॥ ಅದರಲೊಂದು ಹಿರಿಯ ಗಿಳಿಗೆ ಮರವ ತೊರೆಯೆ ಮೋಹ। ಒಡನಾಡಿ ಹಕ್ಕಿಗಳಲಿ ತುಂಬಿದ ಸ್ನೇಹ। ಹೋಗಬೇಡ ಎಂಬ ಕರೆಗೆ ಅಲ್ಲೆ ನಿಂತಿತು। ಒಂಟಿ ಬದುಕು ಹೇಗೆ ಎಂಬ ಚಿಂತೆ ಮಾಡಿತು॥1॥ ಹೊರಟುನಿಂತ ಬಳಗ ಕಂಡು। ದುಃಖ ಉಕ್ಕಿತು। ಹಾರಲಾರೆ ನಿಮ್ಮ ತೊರೆದು ಬದುಕಲಾರೆನು॥ ಎತ್ತ ಹೋಗುವಿರಿ ನನ್ನ ಗೆಳೆಯರೇ ಬಾನಂಚಿನ ಎಡೆಗೆ। ಎಲ್ಲಿಯೂ-ಹಸುರು ಇಲ್ಲ ಹಸುರು ಈ ಧರೆಯೊಳಗೆ॥2॥ ಹಸಿರು ಮರವ

ಕಡಿಯುತಿಹರು ಹಣದ ದಾಹಕೇ। ಹರಿವ ನದಿಯ ನೀರು ಬತ್ತಿರೆ ನೆಲದ ದಾಹಕೇ। ಹೂಗಳಿಲ್ಲ ಹಣ್ಣುಗಳಿಲ್ಲ ಬದುಕು ಎಲ್ಲಿದೆ? ಕಾಡು ಇರೆ ನಾಡ ಬದುಕು ಹಸುರು ಬಯಸದೆ॥3॥ ಗಿಳಿಯ ಹಿಂಡು ಹುಡುಕುತಿಹವು ನೆಮ್ಮದಿಯ ತಾಣಾ। ದೇಶಗಳನೆ ದಾಟುತಿಹವು ಹಸುರೇ ಕಾಣಾ। ಕಾಡಿನೊಳಗೆ ಹಿರಿಯ ಗಿಳಿಯು। ಅಳುತ ಸೊರಗಿದೇ। ಬಂಧುಬಳಗ ತೊರೆದ ಬದುಕು ಶಾಪವಾಗಿದೆ॥4॥

## ಎತ್ತೆತ್ತ ನೋಡಿದರು

ಎತ್ತೆತ್ತ ನೋಡಿದರು ಮಾಲಿನ್ಯ ತುಂಬಿಹುದು। ಹೇಗೆ ಬಾಳುವೆ ಮಗುವೆ ಈ ಜಗದೊಳು। ಹಸಿರು ಉಸಿರಿನ ಕಾಡು ತಿಳಿನೀರ ಕೊಳೆಬೀಡು। ಮಾಯವಾಗಿವೆ ಇಂದು ಈ ಜಗದೊಳು॥1॥ ಬಯಲೆಲ್ಲ ಬರಿಧೂಳು ಹಸಿರು ಬಾಡಿದ ಕಾಡು। ಬೆಟ್ಟಗುಡ್ಡವು ಬೋಳು ಬರಿಯ ಗೋಳು ನೀಲ ಆಕಾಶದಲ್ಲಿ ಕೆಂಪು ಧೂಳಿನ ಛಾಯೆ। ಹೂವು ಹಣ್ಣುಗಳೊಳು ಮಾಲಿನ್ಯ ಮಾಯೆ॥2॥ ಸ್ವಚ್ಛ ಪರಿಸರ ಬೇಕು ಶುದ್ಧ ಬಾಳ್ವೆಯು ಬೇಕು। ರೋಗರುಜಿನಗಳಿರದೆ, ರೋಗರುಜಿನ ಗಳಿರದೆ ಬಾಳಬೇಕು॥3॥

## ಕಲ್ಪವೃಕ್ಷ ನಿನ್ನ ನೋಡಲು

ಕಲ್ಪವೃಕ್ಷ ನಿನ್ನ ನೋಡಲು। ನಮ್ಮ ಬದುಕಿದು ಅಲ್ಪವು। ನಾರುಬೇರು ಕಾಯಿ ಎಲೆಗಳು। ಎಲ್ಲ ಕಾಲಕು ಬೇಕೆ ಬೇಕು॥1॥ ಶುಭಕಾರ್ಯಕ್ಕೆ ಮೊದಲು ನೀನು। ವ್ರತದ ಸತ್ಯ ದೇವ ದೇವನು। ಪೂಜೆ ನೇಮಕೆ ಮೊದಲು ನೀನು। ಎಲ್ಲ ಭಕ್ಷ್ಯದ ರುಚಿಯು ನೀನು॥2॥ ನಿಷ್ಕಂಳಕದ ತೀರ್ಥ ನೀನು। ಅಮೃತ ಸವಿಯ ರುಚಿಯು । ಬಾಳ ಸುಖದ ತೋರಿತಿರುಳನು। ಶ್ರೀ ಸುಖವನು ಹರಡುತಿರು॥3॥

## ಕಾಡನಾಶವೆ ನಮ್ಮ ನಾಶವು

ರಾಗ: ಶಿವರಂಜನಿ

ಕಾಡ ನಾಶವೆ ನಮ್ಮ ನಾಶವು। ಕಾಡಕಡಿಯಲು ಬೇಡಿರೋ। ಕಾಡಿನಿಂದಲೆ ಮಳೆಯು ಬೆಳೆಯು। ಕಾಡನುಳಿಸಿ ಬೆಳೆಸಿರೋ॥1॥ ಹಸಿರೇ ನಮ್ಮಯ ಬಾಳಿನುಸಿರು। ಹಸಿರೇ ನಮ್ಮಯ ಅನ್ನವು॥ ಹಸಿರೆ ನಮ್ಮಯ ಬಟ್ಟೆಬರೆಯು ಹಸಿರೇ ನಮಗಾಧಾರವು॥2॥ ಹಸಿರೆ ಇಲ್ಲದ ಮರಳುಗಾಡು। ಉರಿವ ಬಿಸಿಲಿನ ಬೆಂಕಿಯೋಡು। ನೀರಿನೊರತೆಯೆ ಇರದ ನಾಡು। ಬರದ ಕ್ಷಾಮದ ಬೋಳು ಬೀಡು॥3॥ ಮರದ ಬುಡಕೆ ಕೊಡಲಿ ಹಾಕುತ ಕಾಡ ನಾಶವ ಮಾಡಬೇಡಿರಿ। ಕಾಡನುಳಿಸಿ ನೀವು ಉಳಿಯಿರಿ ಸುಖಶಾಂತಿಯ ಪಡೆಯಿರಿ॥4॥ ಕಾಡಬೆಳಸಿರಣ್ಣ ನೀವು ನಾಡ ಉಳಿಸಿರಣ್ಣ। ಕಾಲುವೆ ತೊರೆಗಳು ತುಂಬಿ ಹರಿಯಲು ಮರಗಿಡ ಬೇಕಣ್ಣಾ। ಸತ್ಯ ತಿಳಿಯಿರಣ್ಣಾ ಇದನು ನಿತ್ಯ ನೆನೆಯಿರಣ್ಣಾ। ವಿಜ್ಞಾನ ಜ್ಞಾನವ ದೇಶಕ್ಕೆ ಹರಡಲು ಮುಂದೆ ಬನ್ನಿರಣ್ಣಾ॥5॥ ಬರಗಾಲ ತಡೆಯಣ್ಣಾ ಅದಕ್ಕೆ ಪರಿಸರ ಬೇಕಣ್ಣಾ। ಮಣ್ಣಿನ ಸವಕಳಿ ತಪ್ಪಿಸಲು ನೀ ಜಾಗೃತಿಯಾಗಣ್ಣಾ। ಪ್ರಾಣಿ ಪಕ್ಷಿಯಣ್ಣಾ। ಅವಕೆ ದಾರಿ ಯಾವುದಣ್ಣಾ ಮೂಕಪ್ರಾಣಿಗಳ ಅಳಿವು ಉಳಿವುಗಳ ಯಾರು ಕೇಳ್ವರಣ್ಣಾ॥6॥

## ನಮ್ಮ ಮನೆಯ ಮಾವು

ರಾಗ:ಹಿಂದೂಸ್ಥಾನಿಕಾಪಿ

ನಮ್ಮ ಮನೆಯ ಮಾವು ಮರವು। ನೋಡಲೆಷ್ಟು ಚೆಂದವು। ಅದರ ತುಂಬ ಹಸಿರು ಚಿಗುರು। ಕಾಣಲೆಷ್ಟು ಅಂದವು॥1॥ ಅದರ ಹಣ್ಣು ತುಂಬ ಸಿಹಿಯು। ತಿನ್ನಲೆಷ್ಟು ರುಚಿಕರ। ಹಳದಿ ಕೆಂಪು ಅದರ ಬಣ್ಣ। ಎಲ್ಲರಿಗೂ ಮನೋಹರ॥2॥ ಅದರ ಕೆಳಗೆ ನೆರಳು ತಂಪು। ಅದರ ಮೇಲೆ ಹಕ್ಕಿ ಗುಂಪು। ಅದರ ಸುತ್ತಮುತ್ತ ನೆರೆದು। ಹಾಡಿ ಪಾಡಿ ನಲಿವೆವು॥3॥

## ನಾಡಿನ ಗಣ್ಯರು ಗ್ರಾಮದಿ ನೆರೆದರು

ನಾಡಿನ ಗಣ್ಯರು ಗ್ರಾಮದಿ ನೆರೆದರು। ಗಿಡಗಳ ನೆಟ್ಟರು ಉತ್ಸವದಿ। ಪರಿಸರ ನಾವು ಸರಿಪಡಿಸೋಣ। ಬನ್ನಿರಿ ಎಂದರು ಭಾಷಣದಿ॥ ಅಡವಿಯ ಕಡಿದೆವು ಅರಿಯದೆ ನಾವು। ಕೆಟ್ಟಿತು ಪರಿಸರ ಅದರಿಂದ। ಮಳೆಯೂ ಹೋಯ್ತು ಬೆಳೆಯೂ

ಹೋಯ್ತು। ಹವೆಯಲಿ ಹೆಚ್ಚಿದ ಬಿಸಿಯಿಂದ। ನೀರಿನ ಬರವೇ ಬಂದಿತು ಕೊನೆಗೆ। ಕೆರೆ-ತೊರೆ ಸೊರಗುತ ನಾಡಿನಲಿ। ಸಾಲದೆ ಯಂತ್ರದ ರಕ್ಕಸ ಕುಡಿದನು ಬಿಟ್ಟನು ಕೊಳೆಯನು ಹೊಳೆಗಳಲಿ।। ಹೊಗೆಯನು ಉಗುಳಲು ಹವೆ ಹಳಾಯಿತು। ಆತನ ಹೊಟ್ಟೆಗೆ ಕಟ್ಟಿಗೆಯು। ವಿಜ್ಞಾನದ ಹೊಸ ಗುಂಗಿಗೆ ಸೋತೆವು। ಸೃಷ್ಟಿಯ ಸೊಬಗಿದು ಅಳಿಯುವುದು।। ತಿಳಿಯದೆ ಮಾಡಿದ ತಪ್ಪಿಗೆ ಶಿಕ್ಷೆಯ। ಭೋಗಿಸಿ ಸಹಿಸಿರಿ ಈಗಿಷ್ಟು। ನನ್ನನ್ನು ರಕ್ಷಿಸಿ ನೀವೂ ಉಳಿಯಿರಿ। ಎನುತಿದೆ ಪರಿಸರ ಬಾಯ್ಬಿಟ್ಟು।।

**ಪ್ರಕೃತಿಯ ಮಡಿಲಿಂದ** **ರಾಗ: ಕಲ್ಯಾಣಿ**

ಪ್ರಕೃತಿಯ ಮಡಿಲಿಂದ ನೀನು ಬಂದೆಯೊ ಮನುಜ। ನಿನಗೇಕೊ ವಿಕೃತಿಯ ಮಾಡೊ ಬಯಕೆ।।ಪ।। ನೀನು ನಿಂತಿರೊ ನೆಲವ ನೀನೆ ನಡುಗಿಸುತಿರುವೆ। ನಿನ್ನ ಮೇಲಿನ ನಭವ ನಾಶಗೊಳಿಸುತಲಿರುವೆ। ನಿನಗಲ್ಲ ನಿನಗಲ್ಲ ಯಾರಿಗೂ ಇದು ಸಲ್ಲ। ನೀ ಅರಿತು ನೀ ಬೆರೆತು ಮರೆಯಾಗು ಮೆಲ್ಲ।।1।। ನಿನ್ನ ತಂದೆಯು ಯಾರೊ ನಿನ್ನ ತಾಯಿಯು ಯಾರೋ। ನಿನ್ನ ಬಂಧು ಬಳಗವು ಯಾರು ನೀ ಹೇಳೋ। ತಿಳಿಯದೆಯೆ ಮಾಡಿದರೆ ಕ್ಷಮಿಸುವುದು ಧರೆಯು। ತಿಳಿ ತಿಳಿದು ಮಾಡಿದರೆ ಕ್ಷಮಿಸದೊ ಭುವಿಯು।।2।।

**ಬನ್ನಿ2 ಗೆಳೆಯರೆಲ್ಲರೂ** **ರಾಗ:ಶಂಕರಾಭರಣ**

ಬನ್ನಿ ಬನ್ನಿ ಗೆಳೆಯರೆಲ್ಲರೂ ನದಿಯ ದಂಡೆಗೆ। ಮರಳಿನಾಟ ವಾಡಲು ಕಪ್ಪೆಗೂಡು ಕಟ್ಟಲು। ಎದ್ದು ಕುಳಿತು ಬಿದ್ದು ಹೊರಳಿ। ಕೈ ತಟ್ಟಿ ಕುಣಿಯಲು।।ಪ।। ಒಂದಾಗಿ ಸಾಗುವಾ ಮುಂದೆ ಮುಂದೆ ನಡೆಯುವಾ। ಹೆಜ್ಜೆ ಹೆಜ್ಜೆ ಜೋಡಿಸಿ ಜೊತೆಗೂಡಿ ನಡೆಯುವಾ। ಗೆಳೆಯರೆಲ್ಲ ಸೇರುವಾ ಹಕ್ಕಿಯಂತೆ ಹಾರುವಾ। ಚಿಟ್ಟೆಯಂತೆ ಹಾರಿ ಹಾರಿ ಊರನೆಲ್ಲ ಸುತ್ತುವಾ।।1।।

**ಬನ್ನಿ2 ಗೆಳೆಯರೆ ಜೋಡಿಯಾಗಿ** **ರಾಗ:ಮೋಹನ**

ಬನ್ನಿ ಬನ್ನಿ ಗೆಳೆಯರೆ ಜೋಡಿಯಾಗಿ ಆಡುವಾ। ಕೂಡಿ ಆಡಿ ಹಾಡಿ ನಾವು ಹರುಷದಿಂದ ಕುಣಿಯುವಾ।।1।। ನೀರಿನಲ್ಲಿ ಇಳಿದು ಜಿಗಿದು ಮೀನಿನಂತೆ ಈಜುವಾ। ಗಿಡಗಳಿಗೆ ನೀರ ನೆರೆದು ಹೂವು ಹಣ್ಣು ಬೆಳೆಸುವಾ।।2।। ಮಣ್ಣು ನೀರ ಸೇರಿಸಿ। ಕಲಸಿ ಮುದ್ದೆ ಮಾಡುವಾ। ಮಡಿಕೆ ಕುಡಿಕೆಯನ್ನು ಮಾಡಿ ಅಮ್ಮನಿಗೆ ತೋರುವಾ।।3।। ಗೆಳೆಯರೆಲ್ಲ ಕೂಡುವಾ ಮರಳ ಮನೆಯ ಕಟ್ಟುವಾ ಕುಣಿದು ಕುಣಿದು ಕುಪ್ಪಳಿಸಿ ಜಗದಿ ಹರುಷ ಬೀರುವಾ।।4।।

**ಬಿದಿರಮ್ಮ ತಾಯಿ ಕೇಳೆ**

ಬಿದಿರಮ್ಮ ತಾಯಿ ಕೇಳೆ। ನೀನಾರಿಗಲ್ಲದವಳೆ। ಹುಟ್ಟುತ್ತ ಹುಲ್ಲು ಆದೆ। ಬೆಳೆಯುತ್ತಾ ಬಿದಿರು ಆದೆ।।ಪ।।ಬೆಟ್ಟದ ಕೆಳಗೆ ಇದ್ದೆ। ಅದರುದ್ದ ಬೆಳೆದಿದ್ದೆ।।ಅ.ಪ।। ರಂಗನಿಗೆ ಕೊಳಲು ಆದೆ। ಕಂದನಿಗೆ ತೊಟ್ಟಿಲಾದೆ। ಆಡುವ ಮಕ್ಕಳಿಗೆ ಓಡುವ ಕುದುರೆ ಆದೆ।।1।। ಮದುವೆಯಾಡಂಬರಕೆ ಚಪ್ಪರದ ಕಂಬವಾದೆ। ಮೈ ದುಂಬುವ ಕುಣಿತಕ್ಕೆ ನಂದೀಯ ಕೋಲಾದೆ।।2।। ಅತ್ತೆ ಮನೆಯ ಸೊಸೆಯರಿಗೆ ಬೀಸುವ ಕುಕ್ಕೆಯಾದೆ। ಮುತ್ತೈದೆ ಮಕ್ಕಳಿಗೆ ಬಾಗಣದ ಮರಗಳಾದೆ।।3।। ಆಡು ಕಾಯೋ ಮಕ್ಕಳಿಗೆ ಸೆಣೆಯೆಂಬ ಜವಳಿಯಾದೆ। ಕಾಳುಗಳ ಕೂಡಿಯಿಡಲು ಕಟ್ಟಿದ ಕಣಜವಾದೆ।।4।। ಊರೂರು ಸೂರು ಆದೆ। ಕೂರಿಗೆಯ ಕೊಳವೆಯಾದೆ। ಮುಪ್ಪಿನ ಮುದುಕರಿಗೆ ಊರಂಬೊ ದೊಣ್ಣೆಯಾದೆ।।5।। ಅಂಬಿಗನಿಗೆ ಹುಟ್ಟು ಆದೆ। ಮ್ಯಾದಾರ ಬುಟ್ಟಿಯಾದೆ। ಹತ್ತುವವಗೆ ಏಣಿಯಾದೆ। ಸತ್ತವರಿಗೆ ಚಟ್ಟವಾದೆ।।6।।

**ಬೆಳೆಸ ಬನ್ನಿ ಕಾಡ ನೀವು** **ರಾಗ: ಕರ್ಣರಂಜನಿ**

ಬೆಳೆಸ ಬನ್ನಿ ಕಾಡ ನೀವು ಉಳಿಸಿ ನಿಮ್ಮೀ ನಾಡ॥ ಬದುಕಿ ಬಾಳಿ ಬೆಳೆಯೆ ಮಾನವ। ಉಳಿಸಿ ನಮ್ಮ ಪ್ರಾಣವ॥ಪ॥ ಜಗಕೆ ಮಳೆಯನು ಕರೆಯಲೆಂದು। ಭುವಿಯ ಮೇಲ್ಗಡೆ ಬಂದೆವು। ಬರಿಯ ಮರಗಳು ಅಲ್ಲ ನಾವು। ಹರಿಯು ನೀಡಿದ ವರಗಳು॥1॥ ಹಸಿದ ಒಡಲಿಗೆ ಅನ್ನ ನಾವು। ರೋಗ ರುಜಿನಕೆ ಮದ್ದು ನಾವು। ದಣಿದ ಬಾಯಿಗೆ ತಂಪು ನಾವು। ಬಳಿಗೆ ಬಂದರೆ ನೆರಳು ನಾವು॥2॥ ಕಳೆವಿರೇತಕೆ ನಮ್ಮ ಉಸಿರ। ನಮ್ಮ ಉಪಕೃತಿ ಸಾಸಿರ॥ ನಮ್ಮ ತಲೆಯನು ಬಿಸಿಲಿಗೊಡ್ಡಿ ನಿಮಗೆ ನೆರಳನು ನೀಡುತ॥3॥ ಕಡೆಯ ತನಕ ನಿಮ್ಮನುಳಿಪೆವು। ಆಮ್ಲಜನಕವ ನೀಡುತ ನೀರನೆರೆದು ಸಲಹಿದಾ ಋಣ। ತೀರಿತೆನ್ನುತ ಹಿಗ್ಗುವ॥4॥ ನಮ್ಮ ಒಡಲಿಗೆ ನೀನು ಮಾನವ। ಉರಿಯ ನಿಕ್ಕುವಿ ಏನು। ನಿನ್ನ ಕುಲಕೆ ನೀನು ಮಾನವ। ಕೊಡಲಿಯಾಗುವಿ ಏನು॥5॥ ಮರವೆ ಮರವೆ ಎಂದು ನಮ್ಮನು। ಮರೆವೆ ನಿನ್ನನೆ ನೀನು(2ಸಾರಿ)॥6॥

## ಬೆಟ್ಟದ ಮರೆಯಿಂದ

ಬೆಟ್ಟದ ಮರೆಯಿಂದ ಮುಂಜಾನೆಯಲಿ ಎದ್ದು। ಸಾಗರದೊಳಗೆ ಮುಸ್ಸಂಜೆಯಲಿ ಮಲಗಿ। ಹಗಲೆಲ್ಲ ಬೆಳಕನು ನೀಡುವವನು। ಮಟ್ಟ ಮಟ ಮಧ್ಯಾಹ್ನ ಜಗಮಗ ಹೊಳೆದು। ಬಾನಲಿ ಬೆಳಕಾಗಿ ಓಡುವವನು। ಚುರುಕನು ನಮಗೆ ಕಲಿಸುವವನು॥

## ಬಂತು2 ಮಳೆ ಬಂತು — ರಾಗ:ಅಮೃತವರ್ಷಿಣಿ

ಬಂತು ಬಂತು ಮಳೆ ಬಂತು ಅಂಗಳವೆಲ್ಲ ನೀರಾಯ್ತು।ಷುಷಷ ಗೆಳೆಯರನೆಲ್ಲ ಕರೆಯೋಣ। ಕಾಗದ ದೋಣಿಯ ಮಾಡೋಣ॥1॥ ಅಂಗಳದಲ್ಲಿ ಸೇರೋಣ। ದೋಣಿಯ ತೇಲಿಸಿ ಆಡೋಣ॥2॥ ದೋಣಿಯು ಹೋಯಿತು ನೀರಿನಲಿ। ಮೋಟಾರ ಗಾಡಿಯ ರೀತಿಯಲಿ॥3॥ ಕೈಕೈ ಹಿಡಿದು ನಡೆಯೋಣ। ಕೇಕೆ ಹಾಕುತ ಕುಣಿಯೋಣ॥4॥ ಬಂದಿತು ಮಳೆಯು ರಭಸದಲಿ। ಮುಳುಗಿತು ದೋಣಿಯು ನೀರಿನಲಿ॥5॥

## ಮನೆಯ ಮುಂದೆ

ಮನೆಯ ಮುಂದೆ ಪುಟ್ಟ ಗಿಡವ ಪುಟ್ಟಿ ನೋಡಿ ನಕ್ಕಳು। ದಿನವು ನೀರ ಉಣಿಸಿ ಅವಳು ಗಿಡವ ನೋಡಿ ನಲಿದಳು॥1॥ ಪುಟ್ಟ ಗಿಡವು ದೊಡ್ಡದಾಯ್ತು ಹೂವುಹಣ್ಣು ಬಿಟ್ಟಿತು। ಕೋಗಿಲೆಯ ಮರಿಯು ಬಂದು ಕುಹೂ ಕುಹೂ ಎಂದಿತು। ಹೂವು ಹಣ್ಣು ತಿಂದಿತು ಕುಹೂ ಕುಹೂ ಹಾಡಿತು॥2॥

## ಮಲೆ ಮೇಲಿಂದ ಮಳೆರಾಯ ಬಂದ

ಮಲೆ ಮೇಲಿಂದ ಮಳೆರಾಯ ಬಂದ। ಜನಮನಕೆಲ್ಲ ತಣಿವನು ಕೊಟ್ಟ। ಜೀವಕೋಟಿಗೆ ಸಂತಸ ತಂದು। ಭೂಮಿಗೆ ಹಸಿರು ಹಚ್ಚಡ ಕೊಟ್ಟ॥1॥ ಗುಡುಗು ಮಿಂಚಿನ ಆರ್ಭಟ ಮಾಡಿ। ಕುಣಿಯುವ ನವಿಲೆಗೆ ಮೋದವ ಕೊಟ್ಟ। ಹರಿಯುವ ನದಿಗೆ ನಾದವ ತುಂಬಿ। ಗಾಳಿಯ ಜೊತೆಗೆ ತೇಲುತ ಹೋದ॥2॥ ಬೆಟ್ಟದ ಮೇಲಿಂದ ಕೆಳಗೆ ಧುಮುಕಿ। ಭಾರೀ ಶಕ್ತಿಗೆ ಸಾಧನೆ ಕೊಟ್ಟ। ಸಾಹಸ ಕಾರ್ಯವ ಎಲ್ಲೆಡೆ ತುಂಬಿ। ಶ್ರೀಧಾಮಗಳಿಗೆಲ್ಲಾ ಬೆಳಕಾ ಕೊಟ್ಟ॥3॥

## ಮಳೆ ಬಂತು ಮಳೆ ಭಾರಿ ಹನಿಯ — ರಾಗ:ಅಮೃತವರ್ಷಿಣಿ

ಮಳೆ ಬಂತು ಮಳೆ ಭಾರಿ ಹನಿಯ ಮಳೆ। ಬಂತು ನಮ್ಮ ಅಂಗಳಕ್ಕೆ। ನುಗ್ಗಿ ನೀರ ಹೊಳೆ॥1॥ ಫಳ ಫಳ ಮಿಂಚು ಗುಡು ಗುಡು ಗುಡುಗು। ಢಂ ಢಮಾರ್ ಸಿಡಿಲು। ಸುಂಯ್ ಸುಂಯ್ ಗಾಳಿ॥2॥ ಮಳೆ ಬರಲು ನಾವು। ಇಳಿದೆವಂಗಳಕ್ಕೆ। ಆಯ್ತು ಬಟ್ಟೆ ಚಂಡಿ। ಮೈ ಆಯ್ತು ಥಂಡಿ॥3॥ ಅಷ್ಟರಲ್ಲಿ ಒಂದು ಬಂತು ಭಾರಿ ಸಿಡಿಲು। ಹೆದರಿ ನಾವು ಓಡಿದೆವು ಅಮ್ಮನಿದ್ದ ಕಡೆಗೆ॥4॥

**ಮಳೆಯಪ್ಪಾ ಮಳೆರಾಜ** **ರಾಗ : ಪುನ್ನಾಗವರಾಳಿ**

ಮಳೆಯಪ್ಪಾ ಮಳೆರಾಜ ಕರೆಯುತ್ತಾರೊ ನಿನ್ನ (2) ಮೊದಲು ಕೂರಿಗೆ ರೈತರು (2ಸಾರಿ) ಹೊಲದಾಗ ಫಲನೆದ್ದು ಕೈಯ್ಯ ಮುಗಿದಾರಾ। ಮಳೆಯಪ್ಪಾ ಮಳೆರಾಜ ಕರೆಯುತಾರೋ ನಿನ್ನ। ಹೋ ಹೋ ಕರೆಯುತಾರೋ ನಿನ್ನ ಹೇಹೇ ಕರೆಯುತ್ತಾರೋ ನಿನ್ನ।।ಪ।। ಭತ್ತ ಬಂತಣ್ಣ ಮುತ್ತಿನ ಕಂಬವನೇರಿ ಬಿತ್ತಿಬಂದೆ ಶಿವನೆ। ಮಳೆಯಿಲ್ಲ(2) ಅಂದಾರ ಮುತ್ತಿನ ಮಂಜು ಸುರಿದಾವೊ ಸುರಿದಾವೋ।।1।। ಮೂಡಲ ಸೀಮೆಗೆ ಹೋಗಿಬಾರೋ ಮಳೆರಾಯ ।ಕಗ್ಗಲ್ಲಿ ನನ್ನಾ ತವರಿಗೆ ಜಗ್ಗೀಸಿ ಹೊಯ್ಯೋ ಮಳೆರಾಯ ಮಳೆರಾಯ।।2।। ಹತ್ತೇರು ಕಟ್ಟಿ ಮತ್ತೆ ಮಳೆರಾಜ ಬಂದು ಮುತ್ತು ಚೆಲ್ಲಯ್ಯಾ। ಹೊಲಕೆಲ್ಲಾ ಅಣ್ಣಯ್ಯ ಮತ್ತೆ ಧಾನ್ಯವು ಬೆಳೆಯಲೀ ಬೆಳೆಯಲಿ ಅಣ್ಣಯ್ಯ।।3।।

**ಮುತ್ತಿನ ಮಳೆಹನಿ ನಭದಿಂ ಬೀರುತ** **ರಾಗ:ಶ್ರೀ**

ಮುತ್ತಿನ ಮಳೆಹನಿ ನಭದಿಂ ಬೀರುತ। ನೆಲವನು ತಣಿಸಿ ಕಂಪನು ಸೂಸುತ। ಬೀಸುವ ಗಾಳಿಗೆ ತಂಪನು ಎರೆಯುತ। ಬಂದಾ ಬಂದಾ ಮಳೆರಾಯ।।1।। ಎಲೆಗಳ ತೋಯಿಸಿ ಹೂಗಳ ಚುಂಬಿಸಿ। ಓಡುವ ಜನರಿಗೆ ಜಳಕವ ಮಾಡಿಸಿ। ಕಲ್ಗಳ ಬೀಸುತ ಮಕ್ಕಳ ನಗಿಸುತ। ಬಂದಾ ಬಂದಾ ಮಳೆರಾಯ।।2।। ಪಟ ಪಟ ಸದ್ದನು ವೇಗದಿ ಮಾಡುತ। ದಪದಪ ಸೂರನು ಬಲದಿಂ ಕುಟ್ಟುತ। ಮನೆ ಮನೆ ಬಾಗಿಲ ಭರದಿಂ ತಟ್ಟುತ। ಬಂದಾ ಬಂದಾ ಮಳೆರಾಯ।।3।। ರಸ್ತೆಯ ಉದ್ದಕೆ ನೀರನು ಹರಿಸುತ। ಹಳ್ಳವ ಕೊಳ್ಳವ ಭರದಲಿ ತುಂಬುತ। ಮಕ್ಕಳ ಕುಣಿತಕೆ ತಾಳವ ಹಾಕುತ। ಬಂದಾ ಬಂದಾ ಮಳೆರಾಯ।।4।।

**ಮೋಡ ಮೋಡ ಆಗಸ ತುಂಬಿತು**

ಮೋಡ ಮೋಡ ಆಗಸ ತುಂಬಿತು ನೋಡಾ। ಗಗನಕೆ ಏರಿತು ಬಿಳಿ ಮೋಡಾ। ಸುತ್ತಲು ಕವಿಯಿತು ಕರಿಮೋಡಾ। ಮೋಡ ಮೋಡ ಆಗಸ ತುಂಬಿತು ನೋಡಾ।।1।। ಉದುರಿತು ಮುತ್ತಿನ ಮಳೆ ಹನಿ ನೋಡಾ। ಬೆಳಗಿತು ಮಿಂಚು ಬಾನಿನಲಿ। ಮೊಳಗಿತು ಗುಡುಗು ನಭದಲ್ಲಿ। ಮೋಡ ಮೋಡ ಆಗಸ ತುಂಬಿತು ನೋಡಾ।।2।। ಆಕಾಶದಿ ಸುರಿಯಿತು ನೀರು ನೋಡಾ। ಭೂಮಿಯು ಸಾಗರವಾಯಿತು। ವರ್ಷವು ಹರ್ಷವ ತಂದಿತು ಮೋಡ ಮೋಡ ಆಗಸ ತುಂಬಿತು ನೋಡಾ।।3।। ಓಡುವ ಮೋಡವ ನೋಡುವೆ ಬಾರಾ। ಕಾಮನ ಬಿಲ್ಲನು ಕಾಣುವೆ ಬಾರಾ। ರೈತರ ಸಿರಿಮೊಗ ನೋಡುವೆ ಬಾರಾ। ವರ್ಷವುತಂದಿಹ ಸಂತಸ ಅಪಾರ।।4।। ಮರದೆಲೆಗಳ ನರ್ತನ ನೋಡುವ ಬಾರಾ। ಗಾಳಿಯ ಕಂಪನು ಹೀರುವ ಬಾರಾ। ಹಕ್ಕಿಗಳುಲಿತವ ಆಲಿಪ ಬಾರಾ। ವರ್ಷವು ತಂದಿಹ ಸಂತಸ ಅಪಾರ।।5।। ತಾರಾಮಂಡಲ ತೋರುವೆ ಬಾರಾ। ಚಂದ್ರನ ದರ್ಶನ ಮಾಡುವೆ ಬಾರಾ। ನೀಲಾಕಾಶವ ಕಾಣುವೆ ಬಾರಾ। ವರ್ಷವು ತಂದಿಹ ಸಂತಸ ಅಪಾರ।।6।।

**ಮೋಡದ ಮರೆಯಿಂದ** **ರಾಗ:ಬೃಂದಾವನಿ**

ಮೋಡದ ಮರೆಯಿಂದ ಓಹೋ ಮೋಡದ ಮರೆಯಿಂದಾ। ಇಳಿದನು ಮಳೆರಾಯ ನೆಲಕೆ, ಇಳಿದನು ಮಳೆರಾಯಾ।।ಪ।। ಅಂಗಳ ತುಂಬಿದಾಽಽ ತಾನು ತೊಟ್ಟಿಯ ತುಂಬಿದಾಽಽ। ಕಟ್ಟೆಯ ಮೇಲೆ ಹರಿದೇ ಬಿಟ್ಟನು ಲೋಕಕೆ ತಂಪನು ಎರದೇ ಬಿಟ್ಟನು। ಇಳಿದನು ಮಳೆರಾಯಾ ನೆಲಕೆ ಇಳಿದನು ಮಳೆರಾಯಾ।।1।। ಫಳ ಫಳ ಮಿಂಚಿಸಿದಾಽಽ ತಾನು ಗುಡುಗುಡುಗೀದಾಽಽ। ಸುಂಯ್ ಸುಂಯ್ ಎನ್ನುವ ಗಾಳಿಯ ಜೊತೆಗೆ ಆಲಿಯ ಕಲ್ಲಿನ ಏಟಿನ ಜೊತೆಗೆ। ಇಳಿದನು ಮಳೆರಾಯಾ ನೆಲಕೆ ಇಳಿದನು ಮಳೆರಾಯಾ।।2।। ಮೈಯ್ಯನು ತೋಯಿಸಿದಾಽಽ ತಾನು ಮನವನು ಹಿಗ್ಗಿಸಿದಾಽಽ। ಗದ್ದೆಗೆ ತೋಟಕೆ ನೀರನು ಉಣಿಸಿ ಸುಂದರ ಹಸಿರಿನ ಪೈರನು ಬೆಳೆಸಲು। ಇಳಿದನು ಮಳೆರಾಯಾ।। ನೆಲಕೆ ಇಳಿದನು ಮಳೆರಾಯಾ।।3।।

### ಹಗಲಲಿ ಬೆಳ್ಳಗೆ

ಹಗಲಲಿ ಬೆಳ್ಳಗೆ ಇರುಳಲ್ಲಿ ಕರ್‍ರಗೆ। ಸಂಜೆಯ ವೇಳೆಗೆ ಬಗೆಬಗೆ ಬಣ್ಣ। ನಾಯಿ ಕ್ತತೆ ಕುದುರೆ ರೂಪ। ರಾಕ್ಷಸ ರಾಜ ಸೈನಿಕ ವೇಷ ಬದುಕಿನ ಪಾಠ ಕಲಿಸುವುದು॥

### ಹೇಳಿಕೇಳಿ ಬರುವುದಿಲ್ಲ — ರಾಗ: ಬೃಂದಾವನಿ

ಹೇಳಿಕೇಳಿ ಬರುವುದಿಲ್ಲ ಮೇಲಿನಾ ಮಳೆ। ಬಂದ ಮೇಲೆ ಹರಿವುದೆಲ್ಲ ಬೆಳ್ಳಿಯಾ ಹೊಳೆ। ಮಣ್ಣ ತಾಕಿ ಬಣ್ಣವಾಗಿ ಕಣ್ಣಿಗೆ ಹಬ್ಬ। ವರುಣರಾಯ ಗುನ್ನ ಹಾಕಿ ಕರಗಿದೆ ದಿಬ್ಬ ॥ಪ॥ ಮೂಕವಾದ ಮರಗಳೆಲ್ಲ ಗೀತೆ ಹಾಡಿವೆ। ಬಿಸಿಗೆ ಬೆಂದಗಿರಿಗಳೆಲ್ಲ ಸ್ನಾನಮಾಡಿವೆ। ಮುನಿಸಿಕೊಂಡ ಮನೆಗಳೆಲ್ಲ ಮಾತಾನಾಡಿವೆ। ನೀರ ಮರೆತ ನದಿಗಳೆಲ್ಲ ಚಾಡಿ ಹೇಳಿವೆ ॥1॥ ಜಲವ ಕಂಡ ಕೆರೆಗಳೆಲ್ಲ ಕೋಡಿ ಹರಿದಿದೆ। ಮಲವ ತಿಂದ ಹೊಲಗಳೆಲ್ಲ ಸಸಿಯ ಕೊಟ್ಟಿವೆ। ಸದ್ದು ಮಾಡೊ ಹಾದಿಬೀದಿ ಮೌನವಾಗಿದೆ ನಿದ್ದೆ ಕಂಡ ರಾಸುಕೂಡ ನೋಟ ಬೀರಿದೆ ॥2॥ ಹಿತ್ತಲಲ್ಲಿ ಕತ್ತು ಚಾಚಿ ಮಕ್ಕಳಾಡಿವೆ। ಕತ್ತಲಲ್ಲಿ ಮೈಯ್ಯ ಮುದುಡಿ ಜೀವ ಮುಲುಕಿದೆ। ಭೂಮಿತಾಯಿ ಕದಪಿನಲ್ಲಿ ಲಾಸ್ಯಮೂಡಿದೆ। ಬಾನದೇವಿ ಒಡಲಿನಲ್ಲಿ ಗುಡುಗು ನಿಂತಿದೆ ॥3॥

# ಖಗ-ಮೃಗ ಗೀತೆ

## ಕೋಗಿಲೆ

### ಈಗ ತಾನೆ ಬಂದಿತೇನೆ — ರಾಗ:ಕಲ್ಯಾಣಿ

ಈಗ ತಾನೆ ಬಂದಿತೇನೆ ಮಧುರಕಂಠ ಕೋಗಿಲೆ? ಜಗದ ಬನದಿ ನಿನ್ನ ಮುದದ ಗಾನವಾಯ್ತೆ ಒಮ್ಮೆಲೇ॥1॥ ಕೆಂಪು ತಳಿರು ಕಂಪಿನಲರು ಸೂಸುತಿಹುದು ಮಾಮರಾ। ಅಲ್ಲಿ ಕುಳಿತು ಎಲ್ಲ ಮರೆತು ಉಲಿಯುತಿರುವೆ ಸುಮಧುರಾ॥2॥ ಗಾನ ಕೇಳಿ ಮೌನ ತಾಳಿ ಮೂಕವಾಯ್ತು ಭಾವನಾ। ಮನುಜ ಲೋಕ ದಿವಿಜ ನಾಕ ಗೈದು ಕುಹೂ ಕೂಜನಾ॥3॥ ಎದೆಯ ಮಿಡಿದು ತಾಳ ಹಿಡಿದು ಕುಣಿಯುತಿಹುದು ಈ ಕ್ಷಣಾ। ರಸದ ಕಡಲು ಹಿಗ್ಗಿದೊಡಲು ತರತರಂಗ ಬಾಜನಾ॥4॥ ರಸದ ಚಿಲುಮೆ ಹರಿಸಿ ಒಲುಮೆ ಸುಧೆಯ ನೀಡು ಕೋಗಿಲೆ। ಮೌನ ಧ್ಯಾನ ನಿನಗೆ ಊನ ಕುಕಿಲು ಜಾಣ ಕೋಗಿಲೆ॥5॥

### ಉದಯ ಗಗನದಲಿ — ರಾಗ: ಮೋಹನ

ಉದಯ ಗಗನದಲಿ ಅರುಣನ ಛಾಯೆ। ಜಗದ ಜೀವನಕೆ ಚೇತನವೀಯೆ। ನಿನ್ನಯ ಗಾನದ ಸುಮಧುರ ಮಾಯೆ। ಬನದಿಂದಂಬರಕೇರುವುದು ಕೋರಿಕೆಗಳ ಬಾಯಾರುವುದು॥1॥ ಪ್ರಭಾತ ಮೌನವನೆಚ್ಚರ ಮಾಡಿ। ಕಾಡುನಾಡುಗಳ ತುಂಬಿ ತುಳುಕಾಡಿ। ಜಗನ್ನಿದ್ರೆಗೆ ಜೋಗುಳ ಹಾಡಿ। ಬ್ರಹ್ಮವನೇ ತೂಗಾಡುವುದು ಕ್ರಾಂತಿಗೆ ಶಾಂತಿಯ ನೀಯುವುದು॥2॥ ಕೇಳಿದವರಲ್ಲದೆ ತಿಳಿಯದು ನಿನ್ನ ಕಂಠದ ವೈಖರಿ ತುದಿಯಲಿ ನಿನ್ನ। ಬಾಳಿನ ಬಯಕೆಯು ನಿನ್ನಯಗಾನ। ನಿನಗೆ ನಮೋ .... ಓ ಕಾಜಾಣ॥3॥ ಓ ವನಗಾಯ ವಾಗೀಶಾ। ನಿನ್ನಯೆ ಕಾನನ ಕೂಜನ ಪಾಶಾ। ಕಬ್ಬಿಗನಿಗೆ ಮುತ್ತಿನ ವೇಶಾ। ಸ್ಮರಥಾಪಕೆ ನೀ ಸ್ಮರಣಬಾಣ॥4॥

### ಎನಗಿಲ್ಲ ನನಗೊಂದು

ಎನಗಿಲ್ಲ ನನಗೊಂದು ಗೂಡು ಈ ಭುವನದಲಿ। ಎನ್ನ ತತ್ತಿಗಳನ್ನು ಇಡುವೆನು ಅನ್ಯರ ಗೂಡಿನಲಿ। ಎನ್ನ ಮರಿಗಳು

**ಬೆಳೆಯಲಿ ಅವರ ಲಾಲನೆ ಪಾಲನೆಯಲಿ। ಅವರಿಗಾಗಿ ಹಾಡುವುದು ಎನಗೆ ನಿತ್ಯವಾಗಲಿ॥**

**ಎಲ್ಲಿರುವೆ ಕಾಣಿಸದೆ** **ರಾಗ: ಗೌರಿಮನೋಹರಿ**

ಎಲ್ಲಿರುವೆ ಕಾಣಿಸದೆ ಕರೆವ ಕೊರಳೆ। ಎಲ್ಲಿರುವೆ ಹೇಳು ನೀ ನಿಜವೆ ನೆರಳೆ॥ಪ॥ ಮಂಜು ಕಾಣುವ ಸಂಜೆಗನಸಿನಂತೆ। ಸಂಜೆ ಬಿಸಿಲಿನ ಮಳೆಯ ಮನಸಿನಂತೆ। ನಿಂತ ಎದೆಗೊಳದಲ್ಲಿ ಚಿಂತೆ ಬರೆಯುವರಾರೋ। ಎಸೆದ ಕೋಗಿಲೆಯ ದನಿ ಸರಳಿನಂತೆ॥1॥ ನಿನಗೆಂದೆ ನೆಲಬಾನು ಕೂಗಿ ಕರೆದೆ। ಹೊಲ, ಕಾಡು ಬನವೆಲ್ಲ ತಿರುಗಿ ನವೆದೆ। ಓಡಿ ಬಂದೆನು ಇದೋ ಪರಿವೆಯಿರದೆ। ಓಡಿ ಬರುವಂತೆ ನದಿ ಕಡಲಕಡೆಗೆ॥2॥

**ಕತ್ತಲು ಕಳೆದಿದೆ ಮೂಡಲು ಬೆಳಗಿದೆ** **ರಾಗ: ಶುದ್ಧಧನ್ಯಾಸಿ**

ಕತ್ತಲು ಕಳೆದಿದೆ ಮೂಡಲು ಬೆಳಗಿದೆ। ಹಾಡೆಲೆ ಕೋಗಿಲೆ ಕುಹೂ ಕುಹೂ। ತಳಿರಿನ ಮರದಲಿ ಹಸುರಿನ ಮರೆಯಲಿ ಕೂಗೆಲೆ ಕೋಗಿಲೆ ಕುಹೂ ಕುಹೂ॥1॥ ಗಾಳಿಯು ಬೀಸಿದೆ ತಂಪನು ಸೂಸಿದೆ। ಹಾಡೆಲೆ ಕೋಗಿಲೆ ಕುಹೂ ಕುಹೂ। ಹೂಗಳು ಅರಳಿವೆ ಪರಿಮಳ ಹರಡಿವೆ। ಕೂಗೆಲೆ ಕೋಗಿಲೆ ಕುಹೂ ಕುಹೂ॥2॥ ಸುತ್ತಲು ಚೆಲುವಿದೆ। ಎತ್ತಲು ಗೆಲುವಿದೆ ಹಾಡೆಲೆ ಕೋಗಿಲೆ ಕುಹೂ ಕುಹೂ। ಜನ ಮನ ಕುಣಿಯಲಿ। ಜಗವಿದು ತಣಿಯಲಿ। ಕೂಗೆಲೆ ಕೋಗಿಲೆ ಕುಹೂ ಕುಹೂ॥3॥

**ಕಳೆದ ವರುಷ ಚೈತ್ರದಲ್ಲಿ** **ರಾಗ: ಅಮೃತವರ್ಷಿಣಿ**

ಕಳೆದ ವರುಷ ಚೈತ್ರದಲ್ಲಿ ಮನೆಗೆ ಬರುವ ಹಾದಿಯಲ್ಲಿ। ನಾನು ಕಂಡ ಮಾವಿನಲ್ಲಿ ಹಕ್ಕಿಯೊಂದು ಹಾಡಿತು॥ಪ॥ ಹಾಡಿಹಾಡಿಹಾಡಿ ಕೊನೆಗೆ ಹಾಡು ಮುಗಿಯಿತೆಂದು ತನಗೆ। ತೋರಿದಾಗ ಬೇರೆ ಕಡೆಗೆ ಹಕ್ಕಿ ಹಾರಿ ಹೋಯಿತು॥ ಹಕ್ಕಿ ಹೀಗೆ ಹಾಡಿತೆಂದು ನುಡಿದೆ ನಾನು ಮನೆಗೆ ಬಂದು। ಅಷ್ಟೆತಾನೆ ಎಂದರವರು ನನ್ನ ಬಲ್ಲ ಗೆಳೆಯರು॥1॥ ಹಕ್ಕಿ ತನ್ನ ಖುಷಿಗೆ ತಾನೆ ಪಾಡಿತೇನೋ ಎಂದನೊಬ್ಬ। ಅದನು ಕೇಳುವಷ್ಟು ಬಿಡುವು ತನಗೆ ಸಿಕ್ಕದೆಂದನೊಬ್ಬ॥ ಇಷ್ಟು ಸರಳವಾದ ಹಾಡು ತನಗೆ ಹಿಡಿಸದೆಂದ ನೊಬ್ಬ। ರಾಗ ತಾಳ ಗೊತ್ತೆ ಅದಕೆ ಕೇಳಿನೋಡು ಎಂದನೊಬ್ಬ॥2॥ ಹಾಗೆ ಹೀಗೆ ಚರ್ಚೆ ನಡೆದು। ಎಲ್ಲ ಚರ್ಚೆಯಲ್ಲೆ ಮುಗಿದು। ಮೂಲ ವಿಷಯ ಮರೆಗೆ ಸರಿದು। ಹೇಗೋ ಸಂಜೆಯಾಯಿತು॥ ಮತ್ತೆ ಬಂದ ಚೈತ್ರದಲ್ಲಿ ಮನೆಗೆ ಬರುವ ಹಾದಿಯಲ್ಲಿ। ತಳಿತ ಅದೇ ಮಾವಿನಲ್ಲಿ ಅದೇ ಹಕ್ಕಿ ಹಾಡಿತು॥3॥

**ಕುಹೂ ಕುಹೂ ಕುಕಿಲದೆದೆಯ**

ಕೂಹೂ ಕುಹೂ ಕುಕಿಲದೆದೆಯ ಕೂಜನ। ತುಂಬಿ ಒಳಗೆ ಬೀಗುತ್ತಿತ್ತು ಕಾನನ। ಎನಿತೊ ಕಾಲ ತಣಿಸಿ ವನದ ಜೀವನ। ನೋಡೀಗ ನಾಡ ತುಂಬಿ ಆಯ್ತು ಪಾವನ॥1॥ ಧರೆಗೆ ಉಸಿರ ಕೊಡುವ ಚೈತ್ರ ಬಂದನು। ಹಸಿರ ತುಂಬಿ ಚೆಲುವ ಮೊಗೆದು ಇಟ್ಟನು। ಬನದಲಾಡಿ ಬಂದ ಗಾಡಿ ಪಲುಕಿತು। ಕುಹೂ ಎನುವ ಕುಕಿಲ ಓಡಿಬಂದಿತು॥2॥ ಹೊಂಗೆ ಮಾವು ಮರದಲಡಗಿ ಕುಳಿತಿತು। ಹೂವು ಹಸಿರ ಕಂಡು ಮರುಳೆ ಆಯಿತು। ಜೀವದೆದೆಯ ಪ್ರೀತಿ ಕಂಡು ಅರಳಿತು। ಮುಕ್ತವಾಗಿ ಕೊರಳು ಬಿಚ್ಚಿ ಉಲಿಯಿತು॥3॥ ಚೈತ್ರ ಸೊಗಕೆ ನಿನ್ನ ಕೊರಳ ಗಾಯನ। ಇದು ಯಕ್ಷಲೋಕ ನಿನಗೆ ಕೋಟಿ ನಮನ। ಯುಗದ ಆದಿ ಸಾರೆ ಬರುವ ಸಾರಥಿ। ಮತ್ತೆ ಮರಳಿ ಬಾ ಪ್ರೀತಿ ಅತಿಥಿ॥4॥

**ಕುಹೂ ಕುಹೂ ಕೋಕಿಲವಾಣಿ** **ರಾಗ: ಅಭೇರಿ**

ಕುಹೂ ಕುಹೂ ಕೋಕಿಲವಾಣಿ। ಜಗಜುಮ್ಮೆಂದುದು ಅದ ಕೇಳಿ। ನೀರವ ಪರ್ವತ ಕಾನನ ಶ್ರೇಣಿ। ಮರುದನಿ ಗೈದಿತು ಮುದತಾಳಿ॥ಪ॥ ಗಾನವ ಕೇಳಿ ಮಹಾಂಬರ ಸುಮ್ಮನೆ। ಮಾತಾಡದೆ ಬಣ್ಣಿಸುತಿತ್ತು। ಕಂದರದಲ್ಲಿದ್ದೊಂದು ಸರೋವರ। ತೆರೆಗಳ ಕೈ ಪರೆಯಿಕ್ಕಿತು॥1॥ ಮಾಧುರ್ಯದಿ ಪಿಕ ತನ್ನನೆ ಮರೆಯುತೆ। ಕುಹೂ ಕುಹೂ ಕೂಗಿತ್ತು। ಆಲಿಸಿದೋರ್ವನು

ಗಾನಕೆ ನೊಂದು। ಸೂಚನೆ ಕೊಟ್ಟನು ಇಂತೆಂದು।।2।। ಮಲೆಗಳಲುಲಿಯುವ ಓ ಕೋಗಿಲೆಯೆ। ಬಲು ಚೆಲುವಿದೆ ನಿನ್ನೀಗಾನ। ಇಂಗ್ಲೀಷಿಗೆ ತರ್ಜುಮೆ ಮಾಡಿದರೆ। ದೊರೆವುದು ನೋಬೆಲ್ ಬಹುಮಾನ।।3।। ಅರಣ್ಯರೋಧನ ಸುಮ್ಮನೆ ಹಾಡುವೆ। ಕೇಳುವರ್ಯಾರಿಲ್ಲಿ? ಕೂಗಿತು ಕೋಗಿಲೆ ಕುಹೂ ಕುಹೂ ಎಂದು। ತಲ್ಲಣಿಸಿತು ಜಗ ಜುಮ್ಮೆಂದು।।4।।

**ಕುಹೂ ಕುಹೂ ಹಾಡುವ ಕೋಗಿಲೆ** **ರಾಗ:ಕಲ್ಯಾಣಿ**

ಕುಹೂ ಕುಹೂ ಹಾಡುವ ಕೋಗಿಲೆ। ನಿನ್ನೊಡನಿದ್ದು ಕೇಳುವೆ ಈಗಲೆ। ಮಧುರ ಕಂಠದ ರಾಗವ ಕಲಿಸು। ನಾನೂ ನಿನ್ನಂಥಾಗಲು ಹರಸು।।1।। ಹೋಗೋ ಹೋಗೋ ಅಮ್ಮನ ಕಂದ ಕಲಿಯ ಬೇಕು ತಾಳ್ಮೆಯಿಂದ ಚೈತ್ರದ ಕಾಲ ಬರಲಿ ತಾಳು। ಮೈತ್ರಿಯ ಬೆಳೆಸಿ ಈಗ ಕೇಳು।।2।। ಯಾರನು ಕೇಳಲಿ ಯಾರನು ಬಿಡಲಿ। ಯಾರು ನನ್ನ ಪ್ರಶ್ನೆಗೆ ತಿಳಿಸರು। ಇವರನು ಕೇಳಿ ಬದುಕಲೇನು ?। ನನ್ನ ಹಾಗೆ ನಾನಿರಬೇಕೆ ?।।3।।

**ಕುಹೂ ಕೂಹೂ ಕೋಗಿಲೆ ಇಂಪಾಗಿ**

ಕುಹೂ ಕುಹೂ ಕೋಗಿಲೆ ಇಂಪಾಗಿ ಹಾಡೆಲೆ। ಮುದ್ದು ಮುದ್ದು ಕೋಗಿಲೆ ಹಾಡು ನೀ ಈಗಲೆ।।ಪ।। ಮರಗಿಡಗಳ ಮರೆಯಲ್ಲೆ ಕಾಗೆ ಕಣ್ಣ ಭಯದಲ್ಲಿ। ಎದೆಯು ಢವಢವ ಎನ್ನದೆ ಹಾಡು ಹಾಡು ಬಾರೆಲೆ। ನನ್ನ ಹತ್ತಿರ ಕೂಗೆಲೆ ಕುಹೂ ಕುಹೂ ಕೋಗಿಲೆ।।1।।

**ಕುಹೂ ಕುಹೂ ಎನ್ನುತ ಹಾಡುವ** **ರಾಗ:ಅಭೇರಿ**

ಕುಹೂ, ಕುಹೂ... ಎನ್ನುತ ಹಾಡುವ। ಕಿನ್ನರ ಕಂಠದ ಕೋಗಿಲೆಯೇ। ಮಾವಿನ ತಳಿರೊಳು ದೇವತೆವೃಂದ। ನೀನನಗೇನನು ಹಾಡುತಿಹೆ। ನಲ್ಲನ ಕೂಡುವ ನಲ್ಲೆಯ ಕರೆಯೈ। ಕಳಿತಿಹ ಮಾಮರದುಯ್ಯಾಲೆಗೆ।।1।। ನವ ಚೈತನ್ಯದ ನವ ಸೌಂದರ್ಯದ। ನವಮಧು ನಿಧುವನ ದುಹೋಲೆಗೆ।। ಬೆಡಗಿನ ಬಿಂಕದ ಹುಡುಗಿಯ ತೆರದಲಿ। ಬನವಿರೆ ಹೊಸ ವಯ್ಯಾರದಲಿ। ಮಧುರ ವಿಹಂಗಮ ಕವಿಯೆ ಕೋಗಿಲೇ। ಕವಿಯನ್ನು ಕರೆ ಸುರಗಾನದಲಿ।।2।।

**ಕೂಕೂಕೂಯೀ ಕೋಗಿಲೆಯೆ** **ರಾಗ: ಅಭೇರಿ**

ಕೂಕೂಕೂಯೀ ಕೋಗಿಲೆಯೆ। ನಾ ಹಾಡುವ ಹಾಡೊಂದ ಹಾಡುವೆಯಾ। ನಾ ಹೇಳುವ ಮಾತೊಂದ ಕೇಳುವೆಯಾ। ನಾ ಹಾಡುವ ಹಾಡೊಂದ ಹಾಡುವೆಯಾ।।1।। ಚಿಗುರಿದ ಬನದಲಿ ನೀ ನಿರುವೆ। ನೀ ಕೂಗುವ ದನಿಯಲಿ ನಾನಿರುವೆ। ಹಾಡುತ ಕುಳಿತರೆ ದಿನವೆಲ್ಲಾ। ನಾ ನೋಡುತ ನಲಿವೆನು ಬನವೆಲ್ಲಾ।।2।। ಭಾರತದೇಶದ ಬಾನಿನಲಿ। ನಿನ್ನೀ ದನಿಯು ಮೊಳಗಿರಲಿ। ಅಂಧಕಾರವನು ತೊಲಗಿಸಲು। ನೀ ಅಮೃತ ವಾಣಿಯ ನುಡಿಯು ವೆಯಾ।।3।।

**ಕೋಗಿಲೆ2 ನೀನೆಲ್ಲಿರುವೆ**

ಕೋಗಿಲೆ ಕೋಗಿಲೆ ನೀನೆಲ್ಲಿರುವೆ। ಕಣ್ಣಿಗೆ ಕಾಣದೆ ನೀನೆನಗೆ। ಆದರು ನಿನ್ನಯ ಗಾನವು। ಇಂಪು ಈ ಕಿವಿಗಳಿಗೆ।।1।। ನಿನ್ನಯ ರಾಗಕೆ ಮರುಳಾಗಿಹ ಎನಗೆ। ನೀ ಒಂದೇ ಸಲ ಕಾಣಿಸಿಕೊಂಡರೆ। ಪ್ರೀತಿಸಿ ನೋಡುವೆನು।।2।।

**ಕೋಗಿಲೆ ಹಾಡಿದೆ ಕೇಳಿದೆಯಾ** **ರಾಗ:ಶುಭಪಂತುವರಾಳಿ**

ಕೋಗಿಲೆ ಹಾಡಿದೆ ಕೇಳಿದೆಯಾ। ಹೊಸ ರಾಗವ ಹಾಡಿದೆ ಆಲಿಸೆಯಾ। ಹೊಸ ಹೊಸ ಭಾವ ಕುಣಿಸುತ ಜೀವ। ಮರೆಸುತಾ ನೋವಾ ಪ್ರೇಮವಾ ತುಂಬುವಾ।।ಪ।। ಅಮ್ಮನು ಕಂದನ ಕೂಗುವ ಹಾಗೆ। ತಂಗಿಯು ಅಣ್ಣನ ಹುಡುಕುವ ಹಾಗೆ। ಪ್ರೀತಿಯ ಚಿಲುಮೆ ಉಕ್ಕುವ ಹಾಗೆ। ಕಾತುರದಿಂದ ಪಂಚಮ ಸ್ವರದಿ। ಕೊಳಲಿಂದ ಹೊರಬಂದ ಸಂಗೀತದಂತೆ।।1।। ಕಾಣದ ಸಿರಿಯ ನೋಡಿದ ಹಾಗೆ। ದೊರಕದ ಮಾಣಿಕ್ಯ ದೊರಕಿದ ಹಾಗೆ। ಬಾಳಲಿ ಬೆಳಕು

ಮೂಡಿದ ಹಾಗೆ। ಸಡಗರ ಬದುಕಲಿ ತುಂಬುವ ಹಾಗೆ। ಸವಿಯಾಗಿ ಇಂಪಾದ ಆನಂದದಿಂದ। ಕಂಗಳು ಕನಸು ಕಾಣುವ ಹಾಗೆ ತಿಂಗಳ ಬೆಳಕು ತುಂಬಿದ ಹಾಗೆ॥2॥ ಹೃದಯದಿ ನೈದಿಲೆ ಅರಳಿದ ಹಾಗೆ। ಹರುಷದ ಹೊನಲು ಹೊಮ್ಮಿದ ಹಾಗೆ। ನೆನಪಿನ ಅಲೆಯಲಿ ತೇಲಿದ ಹಾಗೆ। ನೋವೋ ನಲಿವೋ ತಿಳಿಯದ ಹಾಗೆ ಸಂಗೀತದ ಸುಧೆಯಿಂದ ಸುಖನೀಡುವಂತೆ॥3॥

**ತುಂಬು ತಿಂಗಳಿನ ಮಲ್ಲಿಗೆ ಹಂಬಿನ** **ರಾಗ: ಶುದ್ಧಧನ್ಯಾಸಿ**

ತುಂಬು ತಿಂಗಳಿನ ಮಲ್ಲಿಗೆ ಹಂಬಿನ ನಂದದ ಬೆಳಕಿನ ಸೆರಗಿನಲಿ। ತುಂಬಿ ತುಂಬಿ ಬಹುನಾಡಿನ ಪಾಡಿನ ತುಂಬದಾಸೆಗಳ ಕೊರಗಿನಲಿ॥ ಅಕ್ಕ ಓ ಕೋಗಿಲೆ ಚಿಕ್ಕ ಓ ಕೋಗಿಲೆ॥ಪ॥ ಮರದ ಮೇಲೆ ಕೂಗಾಡುವ ಕೂಗಿಗೆ ಹೆಸರು ಬಂದಿತೇ ಕೋಗಿಲೆ। ಸೊಕ್ಕಿ ಬರುವ ಸುಮ್ಮಾನದ ಕೂಗಿಗೆ। ಸುಖದ ಊರು ಹೆಬ್ಬಾಗಿಲೆ। ತೆರೆದುದೇ ಈಗಲೆ ಹಾಡಿದೇ ಕೋಗಿಲೆ॥ ಅಕ್ಕ ಓ ಕೋಗಿಲೆ ಚಿಕ್ಕ ಓ ಕೋಗಿಲೆ॥1॥ ಅಲ್ಲೇ ಇರು ನೀ ಇಲ್ಲೇ ಇರುನೀ। ಎಲ್ಲೇ ಇರುನೀ ಬರಿಯದನಿ। ಎಲ್ಲೊ ನಾದದ ತುಷಾರ ವಾಹಿನಿ। ಎತ್ತರದುತ್ತರ ನಿನ್ನದನಿ॥ ಬಾನಹೂ ಕೋಗಿಲೆ ಮುಗಿಲೇ ಮುತ್ತಾಗೆಲೆ॥ ಅಕ್ಕ ಓ ಕೋಗಿಲೆ ಚಿಕ್ಕ ಓ ಕೋಗಿಲೆ॥2॥ ಹೂವು ಅಲ್ಲದ ಎಲೆಯು ಅಲ್ಲದ। ಬನದ ಹುಟ್ಟು ಈ ಕೋಗಿಲೆ। ಎದೆಯ ಭಾಗದಲಿ ಮೆಲ್ಲನೆ ಸುಳಿಯುವ। ದನಿಯ ನೇಗಿಲೇ ಕೋಗಿಲೆ। ಹಾಡಿತೆ ಕೋಗಿಲೆ ಇಲ್ಲವೆ ಹಸುರೆಲೆ। ಅಕ್ಕ ಓ ಕೋಗಿಲೆ। ಚಿಕ್ಕ ಓ ಕೋಗಿಲೆ॥3॥

**ಬಾ3 ಲಲನಾಮಣಿಯೇ** **ರಾಗ: ವಸಂತ**

ಬಾ ಬಾ ಬಾ ಲಲನಾಮಣಿಯೇ। ಕೋಮಲಗಾಯನ ಶೃತಿ ನುಡಿಮಣಿಯೇ॥ಪ॥ ವಸಂತಮಾಸದಾ ಶಾಂತಿಯ ರಮಣಿ। ಪ್ರಶಾಂತಮಹಿ ಕರುಣಾಕರಳೇ॥1॥ ಪ್ರಕೃತಿ ಧ್ಯಾನಾಳೇ ಪ್ರೀತಿಯ ನೇಹಳೇ। ಒಲವಿನ ಗೆಳೆಯಳೇ ಬಾ ಬೇಗನೆ॥2॥ ಪ್ರಕೃತೀ ಪ್ರೇಮಾ ಸುಕೀರ್ತಿ ಪಥವಾ। ತೋರುತಿಹಾ ಗಾನಾ ಪ್ರಿಯೇ॥3॥

**ಭಾವನಾಂತರಾಳದಲ್ಲಿ** **ರಾಗ: ಶುದ್ಧಧನ್ಯಾಸಿ**

ಭಾವನಾಂತರಾಳದಲ್ಲಿ ನಲಿವ ಚೆಲುವ ಹಕ್ಕಿ ನೀನು। ನಿನ್ನ ದನಿಯು ಇಂಪು ನನ್ನ ಮನಕೆ ತಂಪು। ಹಾಡಿ ನಲಿವ ಚೆಲುವ ಕೋಗಿಲೆ॥1॥ ವಸಂತ ಕಾಲದಲ್ಲಿ ಮಾವಿನ ಚಿಗುರು ತಿಂದು। ಇಂಪಾಗಿ ಹಾಡಿ ಗಗನದಲ್ಲಿ ತೇಲಿ। ಮತ್ತೆ ಹಾಡ ಕೇಳ ಬಯಸುವೆ॥2॥ ನನಗೆ ಎರಡು ರೆಕ್ಕೆ ಇದ್ದರೆ। ಜಿಗಿದು ಬರುವೆ ನಿನ್ನ ಜೊತೆಗೆ ನಿನ್ನೊಡನೇ ಹಾಡಿ ನಿನ್ನೊಡನೇ ಕೂಡಿ। ಮತ್ತೆ ಮಧುರ ಗಾನ ಕೇಳ ಬಯಸುವೆ॥3॥ ಮುಂಜಾನೆ ಮುಸುಕಿನಲ್ಲಿ। ಹೊಂಗೆಯ ಚಿಗುರ ತಿಂದು। ಇಂಪಾಗಿ ಹಾಡಿ ಗಗನದಲೀ ತೇಲಿ। ಮತ್ತೇ ಹಾಡ ಕೇಳ ಬಯಸುವೆ॥4॥

## ಗುಬ್ಬಚ್ಚಿ

**ಗುಬ್ಬಿ3 ಪುಟ್ಟ2 ಗುಬ್ಬಿ**

ಗುಬ್ಬಿ ಗುಬ್ಬಿ ಗುಬ್ಬಿ ಪುಟ್ಟ ಪುಟ್ಟ ಗುಬ್ಬಿ। ಹಾರಿ ಬಂದ ಗುಬ್ಬಿ। ಪುಟಾಣಿ ಗುಬ್ಬಿ। ಮುದ್ದು ಮುದ್ದು ಗುಬ್ಬಿ॥

**ಗುಬ್ಬಿ2 ಚೀಂವ್2 ಎಂದು**

ಗುಬ್ಬಿ ಗುಬ್ಬಿ ಚೀಂವ್ ಚೀಂವ್ ಎಂದು ಕರೆಯುವೆ ಯಾರನ್ನು। ಆಚೆ ಈಚೆ ಹೊರಳಿಸಿ ಕಣ್ಣು ನೋಡುವೆ ಏನನ್ನು?॥1॥ ಮೇಲೆ ಕೆಳಗೆ ಕೊಂಕಿಸಿ ಕೊರಳನು ಹುಡುಕುವೆ ಏನಲ್ಲಿ? ಕಾಳನು ಹುಡುಕುತ ನೀರನು ನೋಡುತ। ಅಲೆಯುವೆ ಏಕಲ್ಲಿ?॥2॥ ಕಾಳನು ಕೊಟ್ಟು ನೀರನು ಕುಡಿಸುವೆ ಆಡಲು ಬಾ ಇಲ್ಲಿ॥ ಹಣ್ಣನು ಕೊಟ್ಟು ಹಾಲನು

ನೀಡುವೆ ನಲಿಯಲು ಬಾ ಇಲ್ಲಿ॥3॥

**ಗುಬ್ಬಿ2 ತಾಳಿಲೆ ಗುಬ್ಬಿ**

ಗುಬ್ಬಿ ಗುಬ್ಬಿ ತಾಳಿಲೆ ಗುಬ್ಬಿ। ಕಾಳನುಕೊಡುವೆ ತಿನ್ನಲು ಗುಬ್ಬಿ। ನಿನ್ನ ಜೊತೆಗೆ ಆಡುವೆ ಗುಬ್ಬಿ। ನನಗೂ ಕಲಿಸು ಹಾರಲು ಗುಬ್ಬಿ॥1॥ ಹೋಗೋ ಹೋಗೋ ಅಮ್ಮನ ಕಂದ। ನಿನಗೆ ಕಲಿಸಲೇನು ಚಂದ। ಹಾರುತಿರುವುದು ಹಕ್ಕಿಗೆ ಚಂದ। ನಿನಗೆ ಯಾಕೇ ಬೇಕು ಕಂದ॥2॥

**ನಮ್ಮ ಮನೆಯಲೊಂದು ಗುಬ್ಬಿ** ರಾಗ:ಆನಂದಭೈರವಿ

ನಮ್ಮ ಮನೆಯಲೊಂದು ಗುಬ್ಬಿ ಗೂಡು ಕಟ್ಟಿತು। ಗೂಡಿನೊಳಗೆ ಹುಲ್ಲು ಹಾಸಿ ಮೊಟ್ಟೆ ಇಟ್ಟಿತು। ಮೊಟ್ಟೆಯೊಡೆದು ಒಳಗಿನಿಂದ ಮರಿಯು ಬಂದಿತು। ಮರಿಯ ಕೂಗು ಕೇಳಿ ತಾಯಿ ಹೊರಗೆ ಹಾರಿತು॥1॥ ತಿರುಗಿ ಬಂದು ಮರಿಗೆ ಅದು ಗುಟುಕು ಕೊಟ್ಟಿತು। ಗುಟುಕು ನುಂಗಿ ಮರಿಯ ರೆಕ್ಕೆ ಬಲಿಯತೊಡಗಿತು। ರೆಕ್ಕೆ ಬಲಿತ ಪುಟ್ಟ ಮರಿ ಹೇಳತೊಡಗಿತು। ಬಲಿತ ಮರಿ ಒಂದು ದಿನ ಮೇಲೆ ಮೇಲೆ ಹಾರಿತು॥2॥

**ಪುಟ್ಟ ಗುಬ್ಬಿಯೊಂದು** ರಾಗ:ಆನಂದಭೈರವಿ

ಪುಟ್ಟ ಗುಬ್ಬಿಯೊಂದು ಅಂಗಳಕ್ಕೆ ಬಂದಿತು। ಅಂಗಳದಿ ಕುಳಿತು ಮುಂದೆ ಕುಪ್ಪಳಿಸಿತು। ಮುಂದೆ ಮುಂದೆ ಕುಪ್ಪಳಿಸಿ ಕಾಳು ಹೆಕ್ಕಿ ತಿಂದಿತು। ಕಾಳು ಹೆಕ್ಕಿ ತಿಂದು ಪುರ್ರನೆ ಹಾರಿತು॥1॥ ಪುರ್ರನೆ ಹಾರಿ ಗೂಡನ್ನು ಸೇರಿತು। ಗೂಡನ್ನು ಸೇರಿ ಚೀಂವ್ ಚೀಂವ್ ಎಂದಿತು। ಚೀಂವ್ ಚೀಂವ್ ಕೇಳಿ ಮರಿಯು ಹೊರಗೆ ಬಂದಿತು॥2॥ ಮರಿಯು ಹೊರಗೆ ಬರಲು ಅಮ್ಮ ಗುಟುಕು ಕೊಟ್ಟಿತು। ಅಮ್ಮ ಗುಟುಕು ಕೊಟ್ಟು ಮರದ ಮೇಲೆ ಹಾರಿತು। ಮರದ ಮೇಲೆ ಕುಳಿತು ಕುಳಿತು ಅಂಗಳವ ಕಂಡಿತು॥3॥

**ಬಾ2 ಗುಬ್ಬಚ್ಚಿ** ರಾಗ: ಶುದ್ಧಸಾವೇರಿ

ಬಾಬಾ ಗುಬ್ಬಚ್ಚಿ ತಿನ್ನಲು ಕೊಡುವೆ ಅಪ್ಪಚ್ಚಿ। ಬಿಸಿ ಬಿಸಿಯಾಗಿದೆ ಅಪ್ಪಚ್ಚಿ। ಅಮ್ಮನು ಮಾಡಿದ ಅಪ್ಪಚ್ಚಿ। ಹೆದರುವೆ ಏಕೆ ಗುಬ್ಬಚ್ಚಿ॥1॥ ಮನೆಯೊಳಗಿಲ್ಲ ನಮ್ಮಜ್ಜಿ। ಬಿಟ್ಟರೆ ಸಿಗದು ಅಪ್ಪಚ್ಚಿ। ತಿನ್ನಲು ಬಲುರುಚಿ ಅಪ್ಪಚ್ಚಿ। ನಗೆಯುತ ಬಾಬಾ ಗುಬ್ಬಚ್ಚಿ॥2॥ ಬಾರೋ ಬಾರೋ ಗುಬ್ಬಚ್ಚಿ। ಕಾಳನು ಹಾಕುವೆ ಗುಬ್ಬಚ್ಚಿ। ಕಾಳನು ತಿಂದು ರೆಕ್ಕೆಯ ಬಿಚ್ಚಿ। ಫುರ್ ಫುರ್ ಎಂದು ಹಾರಿತು ಗುಬ್ಬಚ್ಚಿ॥3॥

**ಬಾ ಬಾರೆ ಗುಬ್ಬಿಮರಿ** ರಾಗ:ಶಂಕರಾಭರಣ

ಬಾ ಬಾರೆ ಗುಬ್ಬಿ ಮರಿ ತಂದಿರುವೆ ಕಡ್ಲೆಪುರಿ। ಇಬ್ಬರೂ ತಿನ್ನೋಣ ಬಾಬಾಬಾ॥1॥ ಅವಲಕ್ಕಿ ಹುರಿಗಾಳು ತಂದಿರುವೆ ಸ್ವಲ್ಪ ಕಾಳು। ಇಬ್ಬರೂ ತಿನ್ನೋಣ ಬಾಬಾಬಾ॥2॥ ಅಮ್ಮನ್ನ ಕೇಳ್ತೀನಿ ಕೊಡ್ದಿದ್ರೆ ಅಳ್ತೀನಿ। ಹೇಗೋ ತರ್ತೀನಿ ಬಾಬಾಬಾ॥3॥ ಪುರ್ರ್ ಪುರ್ರ್ ಎಂದು ಹಾರಿಕೊಂಡು। ಅತ್ತ ಇತ್ತ ನೋಡಿಕೊಂಡು। ಕೀಚ್ ಕೀಚ್ ಎಂದು ಕೂಗಿಕೊಂಡು। ಗರಿಗರಿ ಕಡ್ಲೆಪುರಿ ತಿನ್ನುಬಾ ಜಾಣಮರಿ॥4॥

**ಬಾರೋ2 ಗುಬ್ಬಚ್ಚಿ**

ಬಾರೋ ಬಾರೋ ಗುಬ್ಬಚ್ಚಿ। ಕಾಳನು ಕೊಡುವೆ ಪಾಪಚ್ಚಿ। ಕಾಳನು ಕಚ್ಚಿ ರೆಕ್ಕೆಯ ಬಿಚ್ಚಿ ಪುರ್ರನೆ ಹಾರೋ ಗುಬ್ಬಚ್ಚಿ॥

# ನವಿಲು

**ಆಡಾಡು ಬಾ ನವಿಲೆ** **ರಾಗ: ನೀಲಾಂಬರಿ**

ಆಡಾಡು ಬಾ ನವಿಲೆ ತೆರೆದೆರಡು ಸಾವಿರದೆರಡು ಕಣ್ಣ। ಪಚ್ಚೆ ಗರಿಗಳ ನಡುವೆ ರತ್ನದೆಳೆಯಿಟ್ಟ ಕಣ್ಣ।।1।। ತೆರೆದು ಆಡಾಡು ಬಾ ನವಿಲೆ। ತೋಟ ಸಿರಿವಂತನದು ಹೂವು ಬಳ್ಳಿಯದು। ನಾನು ಮಾತ್ರವೆ ಇಲ್ಲಿ ನನ್ನದಾಗಿಹೆನು। ಆಡು ಬಾ ನವಿಲೆ। ಈ ಹೂ ಬನದ ನಡುವೆ।।2।। ಕೇಳಿಸಿತು ದೂರದಲಿ ನಿನ್ನ ಕೇಕೆ। ನಾ ನಿಲ್ಲದಾಗುವೆನು ಬಾ ಬಗೆಯ ನವಿಲೆ। ಒಲುಮೆ ಬಣ್ಣದ ನವಿಲೆ ಘನಿದನಿಯ ನವಿಲೆ ಬಡತನವ ತೊಡೆವ ಸರಸತಿಯ ಸಿರಿನವಿಲೆ।।3।।

**ಕುಣಿ4 ನೀ ನವಿಲೆ** **ರಾಗ: ಹಿಂದೋಳ**

ಕುಣಿ ಕುಣಿ ಕುಣಿ ಕುಣಿ ಕುಣಿ ನೀ ನವಿಲೆ। ಕುಣಿ ಕುಣಿದಾಡುತ ಹರುಷದಲಿ। ಅಂದಚಂದದ ಗರಿಗಳ ತೆರೆಯುತ। ಪರಿಪರಿಯಿಂದಲಿ ಕುಣಿಯುತಲಿ।।ಪ।। ಜಾಗರವಾಡುತ ತೂಗುತ ಗರಿಗಳ। ಹರುಷೋಲ್ಲಾಸದ ಸೊಬಗಿನಲಿ ।।ಅ.ಪ.।। ಗರಿಗಳು ನಿನ್ನಯ ಹಿರಿಮೆಯ ಸಾರುತ। ಕೃಷ್ಣನ ತಲೆಯಲಿ ಕಂಗೊಳಿಸುತಿದೆ। ರಾಸಕ್ರೀಡೆಯ ನರ್ತನದಿಂದಲಿ। ಲೋಕವೆ ಹರ್ಷವಗೈಯುತಿದೆ ।।1।। ನಾಟ್ಯ ಮಯೂರಿ ನಟನ ವಿಶಾರದೆ। ನಟಿಸುತ ಕುಣಿಯುತ ನೀ ಕುಣಿಯೇ। ನಟನ ಸಾಮ್ರಾಜ್ಯದ ನಟರಾಜನ ಕೃಪೆ। ನಿನಗಿದೆ ನಟಿಸುತ ನೀ ಕುಣಿಯೇ।।2।। ತೋಂ ತೋಂ ತೋಂ ಎಂದು ಧೀಮಂತ। ಕುಣಿತದಿ ತಕಧಿಮಿ ಧಿಮಿಕಿಟ ತಾಳ ಮೃದಂಗಕೆ। ಗೆಜ್ಜೆಯ ಝಣಝಣ ಝೇಂಕಾರದಲಿ। ನಾರದ ತುಂಬುರ ಗಾಯನಕೆ।।3।।

**ಗಗನದೊಡಲು ಗುಡುಗು ಸಿಡಿಲುಗಳನು** **ರಾಗ: ಖರಹರಪ್ರಿಯ**

ಗಗನದೊಡಲು ಗುಡುಗು ಸಿಡಿಲುಗಳನು ಎಸೆದು ಬೆಳೆಸಿತು। ತಲೆಯ ಮೇಲೆ ಮಾಲೆ ಮಾಲೆಯಾಗಿ ಮಿಂಚು ಥಳಿಸಿತು। ಕಾಡಿನೊಂದು ನವಿಲಿಗಂದು ಬಹಳ ಹರುಷ ಬೆಳೆಯಿತು। ಮಳೆಯ ಕಾಲ ಬಂತು ಭಲಾ। ಎಂದು ರಾಗ ಎಳೆಯಿತು।।1।। ಚಾಚಿ ಎದೆಯ ತಲೆಯ ತುದಿಯ ಜುಟ್ಟನೊದರಿ ಕುಣಿಸಿತು। ಕಾಲ ನೂಕಿ ತಾಳ ಹಾಕಿ ಒಂದು ಎರಡು ಎಣಿಸಿತು। ಗರಿಯ ಬಿಚ್ಚಿ ದನಿಯ ಹೆಚ್ಚಿ ಸುತ್ತ ಕುಣಿದು ಮೆರೆಯಿತು। ಅದನು ಕಂಡು ಮುಗಿಲ ಹಿಂಡು ಹಿಗ್ಗಿ ಮಳೆಯ ಕರೆಯಿತು।।2।।

**ಚಿಕ್ಕ2 ನವಿಲೆ ಪುಟ್ಟ2 ನವಿಲೆ** **ರಾಗ: ಖರಹರಪ್ರಿಯ**

ಚಿಕ್ಕ ಚಿಕ್ಕ ನವಿಲೆ ಪುಟ್ಟ ಪುಟ್ಟ ನವಿಲೆ। ಎಲ್ಲಿಗೆ ನೀ ಹೊರಟಿರುವೆ? ಅಂದ ಚೆಂದ ತೋರುತ್ತಾ ಬಳ್ಳಿ ಹಾಗೆ ಬಳುಕುತ್ತ। ಯಾರ ನೀ ಹುಡುಕುತ್ತಿರುವೇ?।।1।। ಮಳೆರಾಯ ಬಂದಾಗ। ಮಳೆಯನ್ನು ತಂದಾಗ। ಗರಿ ಬಿಚ್ಚಿ ನೀ ಕುಣಿವೆ।। ಪುಟ್ಟ ಮಕ್ಕಳು ನಾವೆಲ್ಲ ಬಂದಾಗ। ನಮ್ಮೊಡನೆ ಆಡಿ ಕುಣಿ ಬಾ।।2।।

**ನನ್ನ2 ನನ್ನ ನವಿಲೆ ಬಾರೆ ಇಲ್ಲಿಗೆ** **ರಾಗ: ಕಲ್ಯಾಣಿ**

ನನ್ನ ನವಿಲೆ ನನ್ನ ನವಿಲೆ ಬಾರೆ ಇಲ್ಲಿಗೆ। ಅಂಕುಡೊಂಕು ಹೆಜ್ಜೆ ಹಾಕಿ ಹೊರಟೆ ಎಲ್ಲಿಗೆ?।।ಪ।। ನಿನ್ನ ನಾಟ್ಯ ಎಂಥ ಸೊಗಸು ಏನುಹೇಳಲಿ। ನಿನ್ನ ರೂಪ ಎನಿತು ಚೆಂದ ಹೇಗೆ ಹೊಗಳಲಿ। ಹಲವು ಬಗೆಯ ಬಣ್ಣದಿಂದ ನಿನ್ನ ಗರಿಗಳು। ಮುತ್ತು ರತ್ನ ಹವಳದಂತೆ ಹೊಳೆಯುತಿರುವುವು ।।1।। ನಿನ್ನ ಕಣ್ಣ ರೇಖೆ ಚೆನ್ನ ಚಿನ್ನದುಂಗುರ। ತಲೆಯ ಮೇಲೆ ತೆನೆ-ತುರಾಯಿ ಬಹಳ ಸುಂದರ। ಮೇಘಮಾಲೆ ತಿರುಗುತಿರಲು ಕೇಕೆ ಹಾಕುವೆ। ಮಣಿದು ಕುಣಿದು ಹರುಷದಿಂದ ಹಾಡಹಾಡುವೆ।।2।। ನಿನಗೆ ತಿನಲು ಕಾಳ ಕೊಡುವೆ ಬಾರೆಇಲ್ಲಿಗೆ। ಪ್ರೀತಿಯಿಂದ ಮುದ್ದನೊಂದ ಕೊಡುವೆ ಮೆಲ್ಲಗೆ।

ನಿನಗೆ ಅಂದ ಚೆಂದದೊಂದು ಮನೆಯ ಕಟ್ಟುವೆ। ಪ್ರೇಮದಿಂದ ನಿನ್ನ ನಾನು ಸಾಕಿ ಸಲಹುವೆ॥3॥

### ನವ್ವಾಲೆ ಬಂತಪ್ಪ ನವ್ವಾಲೆ — ರಾಗ: ಮಾಂಡ್

ನವ್ವಾಲೆ ಬಂತಪ್ಪ ನವ್ವಾಲೆ। ಸೋಗೆಯ ಬಣ್ಣದ ನವ್ವಾಲೆ। ಭತ್ತವ ಮೇಯೋದು ನವ್ವಾಲೆ। ಭತ್ತದ್ಹೊಟ್ಟೊಂದ ಮೇಯೋದು ನವ್ವಾಲೆ॥ ಭತ್ತವ ಕಾಯ್ವರು ಓಡಿಸ ಬಂದರೆ। ಭರಭರ ಹಾರಿತು ನವ್ವಾಲೆ॥1॥ ರಾಗಿಯ ಮೇಯೋದು ನವ್ವಾಲೆ। ರಾಗಿ ಹೊಟ್ಟೊಂದು ಮೇಯೋದು ನವ್ವಾಲೆ। ರಾಗಿಯ ಕಾಯ್ವರು ಓಡಿಸ ಬಂದರೆ। ರಾಗವ ಪಾಡಿತು ನವ್ವಾಲೆ॥2॥ ಜೋಳವ ಮೇಯೋದು ನವ್ವಾಲೆ। ಜೋಳದ್ಹೊಟ್ಟನ್ನು ಮೇಯೋದು ನವ್ವಾಲೆ। ಜೋಳವ ಕಾಯ್ವರು ಓಡಿಸ ಬರುವಾಗ। ಜೋಗುಳ ಹಾಡಿತು ನವ್ವಾಲೆ॥3॥ ಸರಸತಿ ಏರೋದು ನವ್ವಾಲೆ। ಅದು ಸಾಸಿರ ಕಣ್ಣೀನ ನವ್ವಾಲೆ। ಸರಸತಿ ಏರಿಕೊಂಡ್ ನಲಿದಾಡಿ ಬರುವಾಗ। ಸರಸವನ್ನಾಡೀತು ನವ್ವಾಲೆ॥4॥

### ನವಿಲೆ ನವಿಲೆ ಆಡುವ ನವಿಲೆ

ನವಿಲೆ ನವಿಲೆ ಆಡುವ ನವಿಲೆ। ಆಡುತ ಆಡುತ ಕುಣಿಯೇ ನವಿಲೆ॥ಪ॥ ಕತ್ತನು ಕೊಂಕಿಸಿ ಕಣ್ಣನು ತಿರುಗಿಸಿ। ಕಾಲಿನ ಗೆಜ್ಜೆಯ ಆಡಿಸು ನವಿಲೆ॥ ನಗುತ ನಗುತ ನೃತ್ಯ ಭಂಗಿಯಲಿ। ನೆತ್ತಿಯ ಮಕುಟವ ತಿರುಗಿಸು ನವಿಲೆ॥1॥ ಜಾಗರವಾಡು ಜನಮನ ತಣಿಸು। ಜಗವೇ ನಿನ್ನದು ಕುಣಿಯೇ ನವಿಲೆ॥ ಕಲಾಕಾರನ ಕುಂಚದ ಕುಸುರಿ। ಕಂಡೆನು ನಿನ್ನಲಿ ಬಣ್ಣದ ನವಿಲೆ॥ ಅಷ್ಟ ಸೌಭಾಗ್ಯದ ಅಮ್ಮ ಸರಸ್ವತಿ। ಆದರಿಸು ಬಾ ಅಂದದ ನವಿಲೆ॥2॥ ಬಾಬಾ ನವಿಲೆ ಬಂಗಾರದ ನವಿಲೆ। ಬಾಗುತ ನವಿಲೆ ಬರುವೆಯ ನವಿಲೆ॥3॥

### ನವಿಲೇ ನವಿಲೆ ನಲಿದಾಡು ನವಿಲೇ — ರಾಗ: ಸುನಾದವಿನೋದಿನಿ

ನವಿಲೇ ನವಿಲೇ ನಲಿದಾಡು ನವಿಲೇ। ಸುಳಿ ಸುಳಿ ನವಿಲೆ। ಮಳೆ ಬಂದರೆಲ್ಲಿಹೆ॥ಪ॥ ಹಲಸಿನ ಮರದ ಹೊಲದೊಳಗಿರುವೆ। ಊಟ ಮಾಡುವುದೆಲ್ಲಿ ಆಟವಾಡುವುದೆಲ್ಲಿ। ಕೂಟ ಕೂಡುವುದೆಲ್ಲಿ। ನೀಟಾದ ನವಿಲೆ॥1॥ ಕೋಟೆಯ ರಾಯನ ತೋಟಗಳಲ್ಲಿಯೆ। ಕೂಟವ ಕೂಡುತ-ಲೂಟಿ ಮಾಡುವೆನು। ಚಿಕ್ಕ ಚಿಕ್ಕ ನವಿಲೆ ಸೊಕ್ಕಿನ ನವಿಲೆ। ಪುಕ್ಕವ ಕೆದರುವ ರೆಕ್ಕೆಯ ನವಿಲೆ॥2॥

### ನವಿಲೇ ನವಿಲೇ ಝುಮ ಝುಮ ನವಿಲೇ

ನವಿಲೇ ನವಿಲೇ ಝುಮ ಝುಮ ನವಿಲೇ। ಮರದಿಂ ಇಳಿದು ಬಾಬಾ ನಲಿದು। ಸಕ್ಕರೆ ಬೆಲ್ಲ ಚಕ್ಕುಲಿ ಕೊಡುವೆ। ಬರದಿದ್ದರೆ ನಾನೇ ತಿನ್ನುವೆ। ಬಾರೋ ಬೇಗ ಕುಣಿ ಕುಣಿದು। ನವಿಲೇ ನವಿಲೇ ಬಾ ನವಿಲೆ॥

### ಬಣ್ಣ ಬಣ್ಣದ ನವಿಲು ಗರಿ

ಬಣ್ಣ ಬಣ್ಣದ ನವಿಲು ಗರಿ ಹಾಕಿದೆ ಪುಸ್ತಕದಲ್ಲಿ ಮರಿ॥ಪ॥ ನವಿಲೇ ನೋಡೋಕೆ ಬಲುಚೆಂದ। ನವಿಲಿನ ನಾಟ್ಯವು ಇನ್ನೂ ಅಂದ॥1॥ ಬೆಳೆದು ಬೆಳೆದು ನವಿಲು ಗರಿ। ಕೊನೆಗಾಗುವುದೇ ನವಿಲು ಮರಿ?॥2॥

### ಬಣ್ಣದ ಗರಿಯಿದು ಮಣ್ಣೊಳು — ರಾಗ: ಸಾರಂಗ, ಏಕತಾಳ

ಬಣ್ಣದ ಗರಿಯಿದು ಮಣ್ಣೊಳು ದೊರೆಯಿತು। ಅಣ್ಣಗೆ ಆಟದಿ ನೋಡಮ್ಮ। ಚಿಣ್ಣರ ಚೆನ್ನರ ಕಣ್ಣನು ತಣಿಸುವ। ಬಣ್ಣಗಳಂತಿವೆ ನೋಡಮ್ಮ॥1॥ ಹೊಳೆಯುವ ದೇಟು ಎಳೆಗಳ ಥಾಟು। ಥಳಥಳ ಹೊಳೆಯುವ ಬಣ್ಣಗಳಮ್ಮ। ಚೆಲುವಿನ ಚವರಿ ನನ್ನಯ ಈ ಗರಿ। ಮುದ್ದಿನ ತುರಾಯಿ ಅಲ್ಲೇನಮ್ಮ॥2॥ ನಡುವಿದೆ ಬೊಟ್ಟು ಕೊನೆಗಿದೆ ಜುಟ್ಟು। ಸುತ್ತಲು ಝುಲ್ಲರಿ ಹೇಗಿದೆಯಮ್ಮ। ತಲೆಗಿದ ಕಟ್ಟು ಕೊಳಲನು ಕೊಟ್ಟು। ನಾನು ಕೃಷ್ಣನೆ ಆಗುವೆನಮ್ಮ॥3॥ ಗೋಪಿಯ

ಬೇಡದ ಹೆಂಗಳ ಕಾಡದ ನಂದಕಿಶೋರ ನಾನಾಗುವೆನಮ್ಮ। ಬೆಣ್ಣೆಯ ಕದಿಯದ ಮಾವನ ಸದೆಯದ। ಮುರಲೀ ಮೋಹನ ನಾನಾಗುವೆನಮ್ಮ।।4।।

**ಬಾರೆಲೆ ನವಿಲೆ** **ರಾಗ:ಕುರಂಜಿ**

ಬಾರೆಲೆ ನವಿಲೆ ಬಣ್ಣದ ನವಿಲೆ।। ಹಸುರಿನ ಬನದಲಿ ಹುಲ್ಲಿನ ಮೇಲೆ। ಹಸುರಿನ ಗರಿಗಳ ಪಸರಿಸಿಕೊಂಡು। ಕೇಕೆಯ ಹಾಕುತ ಕುಣಿಯುವ ನವಿಲೆ। ನಾನು ಬರುವೆನು ನಿಲ್ಲು ನವಿಲೆ।।1।। ನಾನು ಕುಣಿಯುವೆ ಕುಣಿಯೆಲೆ ನವಿಲೆ।। ಬಗೆಬಗೆ ಬಣ್ಣದ ಗರಿಗಳ ಹರವುತ ಬಗೆಬಗೆ ಭಾವವ ತೋರುವ। ನೀನು ಹರುಷದಿ ಕುಣಿಕುಣಿ। ಕುಣಿಯೆಲೆ ನವಿಲೆ।।2।।

## ಗಿಣಿ

**ಒಂದು ಗಿಣಿಯು** **ರಾಗ:ಮೋಹನ**

ಒಂದು ಗಿಣಿಯು ಒಂದು ಸಣ್ಣ ಹಣ್ಣು ಕಚ್ಚಿ ತಂದಿತು। ಮರದ ಮೇಲೆ। ಕುಳಿತು ಅದರ ಅರ್ಧಭಾಗ ತಿಂದಿತು।।1।। ಆಗ ಅಲ್ಲಿಗೊಂದು ಹಸಿದ ಕಾಗೆ ಹಾರಿ ಬಂದಿತು। "ಗಿಣಿಯೆ ಗಿಣಿಯೆ ನಿನ್ನ ಬಾಯಲ್ಲಿರುವುದೇನು?"।।2।। ಎಂದಿತು। ಗಿಣಿಯು ಮಾತನಾಡಲೆಂದು ತನ್ನ ಬಾಯ ಬಿಟ್ಟಿತು। ಹಣ್ಣು ಕೆಳಗೆ ಜಾರಿಬಿದ್ದು ಅದರ ಕೆಲಸ ಕೆಟ್ಟಿತು।।3।। ಒಡನೆ ಕಾಗೆ ಹಾರಿ ಹೋಗಿ ಅದನು ಕಚ್ಚಿಕೊಂಡಿತು। ಕುಕ್ಕಿ ಕುಕ್ಕಿ ತಿಂದು ತನ್ನ ಹೊಟ್ಟೆ ತುಂಬಿ ಕೊಂಡಿತು।।4।।

**ಕೆಂಪು ಕೊಕ್ಕಿನಾ ಗಿಣಿ**

ಕೆಂಪು ಕೊಕ್ಕಿನಾ ಗಿಣಿ। ಹೇಳುವುದು ಭವಿಷ್ಯವಾಣಿ। ಹಸಿರು ರತುನದಾ ಗಣಿ। ಧನ್ಯ ಪಡೆದುದು ಧರಣಿ ನನ್ನಂತುಲಿವ ಗಿಣಿ।।

**ಗಿಣಿ ಬಂತು ಗಿಣಿ**

ಗಿಣಿ ಬಂತು ಗಿಣಿ। ಬಾಯಲೊಂದು ಮಣಿ। ಹೇಳಿತೊಂದು ಕಣಿ। ಕೆಳಗೆ ಬಿತ್ತು ಮಣಿ। ಹಾರಿ ಹೋಯಿತು ಗಿಣಿ।।

**ಗಿಡಗಿಡದಲಿ ಹಾರಾಡುವ ಗಿಳಿಯೇ** **ರಾಗ: ಸರಸ್ವತಿ**

ಗಿಡಗಿಡದಲಿ ಹಾರಾಡುವ ಗಿಳಿಯೇ। ನುಡಿನುಡಿ ಕನ್ನಡವಾ।।ಪ।। ಪಂಚಮದಲಿ ಇಂಚರಿಸುವ ಕೋಗಿಲೇ। ಪಾಡೆಲೆ ನೀ ಕನ್ನಡವಾ ನುಡಿನುಡಿ ಕನ್ನಡವಾ।।ಅ.ಪ।। ಹೇ ಭೃಂಗ ಕುಲವೇ ಬಂಧುರ ಸ್ವರವೇ। ಕರುನಾಡಿನ ನುಡಿಕೇಳಿ। ವಾಣಿ ಸರಸ್ವತಿ ವೀಣೆಯ ನುಡಿಸೌ। ಕನ್ನಡ ಕನ್ನಡ ವೆಂದೇ ನುಡಿನುಡಿ ಕನ್ನಡವಾ।।ಚ।।

**ಗಿಳಿಯೇ ನೀನು ಸುಂದರಿ**

ಗಿಳಿಯೇ ನೀನು ಸುಂದರಿ। ಡೌಲು ಎಷ್ಟು ವೈಯ್ಯಾರಿ। ಪೇಟೆಗ್ಹೋಗಿ ಬಂದಿ। ಬೀಡ ಕದ್ದು ತಿಂದಿ। ಅದಕೆ ಬಾಯಿ ಕೆಂಪಾಯ್ತು। ಬಂಧಿವಾಸ ನಿನಗಾಯ್ತು।।1।। ಕಾಡಿಗೆ ಹೋಗಿ ಬಂದಿ। ಹಸಿರು ಬಣ್ಣ ತಿಂದಿ। ಅದಕೆ ಮೈ ಹಸಿರಾಯ್ತು। ಬಂಧಿವಾಸ ನಿನಗಾಯ್ತು। ನೀನು ಇರುವೆ ಸುಳ್ಳಿ। ನೋಡಕ್ ಬಲು ಮಳ್ಳಿ।।2।।

**ಪುಟ್ಟ2 ಗಿಳಿಯೇ ಪುಟ್ಟಾಣಿ**

ಪುಟ್ಟ ಪುಟ್ಟ ಗಿಳಿಯೇ। ಪುಟ್ಟಾಣಿ ಗಿಳಿಯೇ। ಮಾತನಾಡೊ ಗಿಳಿಯೇ। ಮುದ್ದಿನ ಗಿಣಿಯೇ। ಹಣ್ಣನ್ನು ತಿನ್ನೊ ಗಿಣಿಯೇ।

ಹಸುರಿನ ಗಿಣಿಯೇ॥

**ಬಾ2 ಗಿಳಿಯೆ** **ರಾಗ:ಕುರಂಜಿ**

ಬಾ ಬಾ ಗಿಳಿಯೆ ಬಣ್ಣದ ಗಿಳಿಯೆ ಹಣ್ಣನು ಕೊಡುವೆನು ಬಾಬಾ॥ ಹಸಿರು ಪುಕ್ಕದ ಚೆಂದದ ಗಿಳಿಯೆ ನನ್ನೊಡನಾಡಲು ಬಾಬಾ॥1॥ ಕೆಂಪು ಮೂಗಿನ ಮುದ್ದಿನ ಗಿಳಿಯೆ ಹಾಡನು ಕಲಿಸುವೆ ಬಾಬಾ। ಮರದಲಿ ಕುಳಿತು ನೋಡುವೆ ಏಕೆ ಹಾರುತ ಹತ್ತಿರ ಬಾಬಾ॥2॥ ಠಕ್ಕಿನ ಟಾಮಿ ಮನೆಯೊಳಗಿಲ್ಲ ಹೆದರುವೆ ಏತಕೆ ಬಾಬಾ। ಸೊಕ್ಕಿನ ಟಾಮಿ ಹತ್ತಿರವಿಲ್ಲ ಕುಣಿ ಕುಣಿದಾಡುತ ಬಾಬಾ॥3॥ ಹಾಡುವುದನ್ನು ಕಲಿಸುವೆ ನಿನಗೆ ಹಾರಲು ಕಲಿಸಲು ಬಾಬಾ। ಹಣ್ಣನು ತಿಂದು ಹಾಲನು ಕುಡಿದು ಮುಗಿಲಿಗೆ ಹಾರುವ ಬಾಬಾ॥4॥

**ಬಾ2 ಗಿಣಿಯೇ ಬಾರೆನ್ನ**

ಬಾ ಬಾ ಗಿಣಿಯೇ ಬಾರೆನ್ನ ಗಿಣಿಯೇ॥ ಹಸಿರು ಬಣ್ಣದ ಗಿಣಿಯೇ। ಹಣ್ಣು ತಿಂಬೋ ಗಿಣಿಯೇ। ಮಾವ ತಂದ ಗಿಣಿಯೇ। ಮಾತಾಡೋ ಗಿಣಿಯೇ॥

**ಬಾ2 ಗಿಣಿಯೇ ನನ್ನರಗಿಣಿಯೆ** **ರಾಗ:ಮಲಯಮಾರುತ**

ಬಾ ಬಾ ಗಿಣಿಯೇ ನನ್ನರಗಿಣಿಯೆ ಮುದ್ದಿನ ಗಿಣೆಯೆ ಬಾ। ಆಟಕ್ಕೊಮ್ಮೆ ಬಂದು ಹೋಗು ರಂಗಿನ ಗಿಣಿಯೇ ಬಾ॥1॥ ಕುಡಿಯಲು ಹಾಲು ತಿನ್ನಲು ಹಣ್ಣು ಕೊಡುವೆ ನಿನಗೆ ಬಾ॥ ಕಾಲಿಗೆ ರಿಂಗು ತಲೆಗೆ ರಿಬ್ಬನ್ ಕೊಡುವೆ ಪುಟಾಣಿ ಬಾ॥2॥ ಮರದಲಿ ಏಕೆ ಪಂಜರ ನಿನಗಿದೆ। ಕೆಳಗೆ ಇಳಿದು ಬಾ॥ ಹಸುರಿನ ರಂಗು ಕೆಂಪನೆ ಮೂತಿಯ ಚೆಂದದ ಗಿಣಿಯೆ ಬಾ॥3॥ ಓದಲು ಪುಸ್ತಕ ಬರೆಯಲು ಸ್ಲೇಟು ಕೊಡುವೆ ನಿನಗೆ ಬಾ। ಹೊಸ ನುಡಿ ಕಲಿಸುವೆ ನಿನ್ನೊಡನಾಡುವೆ। ಮಾತಿನ ಮಲ್ಲಿ ಬಾ॥4॥

## ಪಾರಿವಾಳ

**ದಟ್ಟವಾದ ಕಾಡಿನಲ್ಲಿ (ಕಥನ ಕವನ)** **ರಾಗ:ಖರಹರಪ್ರಿಯ**

ದಟ್ಟವಾದ ಕಾಡಿನಲ್ಲಿ ಗಟ್ಟಿಯಾದ ಬಲೆಯ ಬೀಸಿ।ಬೇಟೆಗಾರನೊಬ್ಬ ಅಡಗಿ ಕುಳಿತುಬಿಟ್ಟನು॥ ಹಕ್ಕಿಗಳನು ಹಿಡಿಯಲೆಂದು ಲೆಕ್ಕತಪ್ಪಿ ಕಾಳು ಚೆಲ್ಲಿ। ಮರೆಗೆ ಕುಳಿತು ಕಳ್ಳನೋಟ ಬೀರುತಿದ್ದನು ॥ ಪಾರಿವಾಳ ದಂಡು ಒಂದು ತನ್ನ ಆಹಾರ ಹುಡುಕಲೆಂದು। ಬರ್‍ರನೆಂದು ಹಾರಿ ಬಂದು ಬೀಡುಬಿಟ್ಟಿತು॥ ತಮಗೆ ಆಹಾರ ಸಿಕ್ಕಿತೆಂದು ಹಿಗ್ಗಿನಿಂದ ಕುಣಿದು ಕುಣಿದು। ಸುಲಭವಾಗಿ ಬಲೆಯ ಮೇಲೆ ಜಿಗಿದು ಬಿಟ್ಟವು॥ ಕುಕ್ಕಿ ಕುಕ್ಕಿ ಕಾಳು ತಿಂದು। ಹಕ್ಕಿ ಬಳಗ ಹರುಷಗೊಂಡು। ತನ್ನ ಬಳಗ ಕೂಡಿಕೊಂಡು ನಲಿಯುತ್ತಿದ್ದವು॥ ಹೊಟ್ಟೆ ತುಂಬ ಕಾಳು ತಿಂದು। ಮೇಲೆ ಹಾರಲು ಬಾರದಾಗಿ। ಬಲೆಯ ಒಳಗೆ ಸಿಕ್ಕಿಕೊಂಡು ಮರುಗುತಿದ್ದವು॥ ದಿಕ್ಕು ತಪ್ಪಿ ಅವಕೆ ಆಗ ಬೇರೆ ದಾರಿ ತಿಳಿಯದಾಗಿ। ದುಃಖದಿಂದ ಬಿಕ್ಕಿ ಬಿಕ್ಕಿ ಅಳುತಲಿದ್ದವು॥ ಆಗ ಹಿರಿಯ ಪಾರಿವಾಳ ಅಳುವ ಸಮಯವಲ್ಲವೆಂದು। ಥಟ್ಟನೆ ಒಂದು ಹಂಚಿಕೆಯನು ಅವಕೆ ಹೇಳಿತು॥ ನಾವೆಲ್ಲರೂ ಒಟ್ಟು ಸೇರಿ ಒಂದೇ ಕಾಲಕೆ ಮೇಲೆ ಹಾರಿ। ಕಷ್ಟ ಕಾಲದಿಕಡೆಗೆ ಆಗುವ ಎಂದು ಅಂದಿತು॥ ನುಡಿದ ಹಾಗೆ ಮಾಡಲಾಗಿ ಬಲೆಯು ಕಿತ್ತು ಮೇಲೆ ಬರಲು। ಒದಗಿ ಬಂದ ಕುತ್ತಿನಿಂದ ಉಳಿದುಬಿಟ್ಟವು॥ ಜೀವ ಉಳಿಯಿತೆಂದು ಹಿಗ್ಗಿ ಬಲೆಯ ಜೊತೆಗೆ ಮೇಲೆ ಹೋಗಿ। ಗಗನದಲ್ಲಿ ಸ್ವೇಚ್ಛೆಯಾಗಿ ಹಾರಿಹೋದವು॥ ಬೇಟಗಾರ ಇದನು ಕಂಡು ಅಯ್ಯೋ ನನ್ನ ಬಲೆಯು ಹೋಯ್ತು। ಹೇಗೆ ಮಾಡಲೆಂದು ಮನದಿ ಮರುಗುತಿದ್ದನು॥ ನಾವು ನೀವು ಎಲ್ಲರೀಗ ಒಂದೇ ಮನದಿ ಕೂಡಿದಾಗ। ಎಂಥ ಕಠಿಣ ಕೆಲಸವೇನು ಸುಲಭವಾಯಿತು ॥ ಒಡಕಿನಲ್ಲಿ ಕೆಡಕು ಉಂಟು। ಒಗ್ಗಟ್ಟಿನಲ್ಲಿ ಒಳಿತು ಉಂಟು ಎಂಬ ನೀತಿ ಅವಕೆ ಈಗ ತಿಳಿದು ಹೋಯಿತು॥

### ನಮ್ಮ ಮನೆ ಪಾರಿವಾಳ

ನಮ್ಮ ಮನೆ ಪಾರಿವಾಳ। ತಿನ್ನುವುದು ಕಡ್ಡಿಕಾಳ। ಹಾರದು ದೂರ ಬಹಳ। ಸಾಕುವುದು ಅತಿಸರಳ॥1॥ ಬಿಳಿ ಬಣ್ಣದ ಪಾರಿವಾಳ। ನೋಡಲು ಸುಂದರ। ಇದರ ನಡೆ ರಾಜ ಗಂಭೀರ॥2॥ ಗುಟುರ್ ಹಾಕುತ। ರೆಕ್ಕೆ ಬಡಿಯುತ ಗಾಳಿ ಬೀಸುತ। ಆರೋಗ್ಯವ ಸುಧಾರಿಸಲು ಹಾರುವುದು॥3॥

### ಪುಟ್ಟಿ ಸಾಕಿದ್ದಳು ಪಾರಿವಾಳ

ಪುಟ್ಟಿ ಸಾಕಿದ್ದಳು ಪಾರಿವಾಳ ಹಕ್ಕಿ। ಕಾಳುಗಳನ್ನು ತಿನ್ನುತಿತ್ತು ಹೆಕ್ಕಿ ಹೆಕ್ಕಿ। ಒಂದು ದಿನ ಹಕ್ಕಿ ಸತ್ತಿತು ಬೆಕ್ಕಿನ ಕೈಗೆ ಸಿಕ್ಕಿ। ದುಃಖಿಸಿ ಅತ್ತಳು ಪುಟ್ಟಿ ಬಿಕ್ಕಿ ಬಿಕ್ಕಿ॥1॥

## ಕೊಕ್ಕರೆ

### ಕೊಕ್ಕರೆ2 ನನ್ನ ಕೈಗೆ

ಕೊಕ್ಕರೆ ಕೊಕ್ಕರೆ ನನ್ನ ಕೈಗೆ ಸಿಕ್ಕರೆ। ಬಾಯಿ ತೆಗೆದು ನಕ್ಕರೆ ಹಾಕುವೆ ಸಕ್ಕರೆ॥

### ಗೆಳೆಯರ ಬಳಗದ

ಗೆಳೆಯರ ಬಳಗದ ಬೆಳ್ಳಕ್ಕಿ। ತಿಳಿಯಾಗಸದಲಿ ಹಾರುವುದು। ಮಿರಮಿರ ಮಿರುಗುವ ಮೈ ಬಣ್ಣ। ನೋಡಲು ತಣಿಸುವುದು ನಮ್ಮ ಕಣ್ಣ॥1॥ ಕೆಂಪನೆ ಕಾಲು ಕೆಂಪನೆ ಕೊಕ್ಕು। ಫಳ ಫಳ ಹೊಳೆಯುವ ಕಪ್ಪನೆ ಕಣ್ಣು। ಸುಂದರ ಅದರ ಹಾರಾಟ। ಎಲ್ಲರ ಕಣ್ಣಿಗು ಸವಿಯೂಟ॥2॥

### ಬಾರೆ2 ಬೆಳ್ಳಕ್ಕಿ ಪುರ್ರನೆ

ಬಾರೆ ಬಾರೆ ಬೆಳ್ಳಕ್ಕಿ। ಪುರ್ರನೆ ಹಾರುವ ಬೆಳ್ಳಕ್ಕಿ। ನಾನು ನೀನೂ ಸೇರೋಣ। ತಿಂಡಿಯ ಹಂಚಿ ತಿನ್ನೋಣ। ಕೈ ಕೈ ಹಿಡಿದು ಆಡೋಣ। ಬಾನೊಳು ಜೊತೆಯಲಿ ತೇಲೋಣ॥

### ಬೆಳ್ಳಕ್ಕಿ ಹಿಂಡು ಹಾರ್‍ಯಾವೋ — ರಾಗ: ಬೃಂದಾವನಿ

ಬೆಳ್ಳಕ್ಕಿ ಹಿಂಡು ಹಾರ್‍ಯಾವೋ ಬಾನಲ್ಲಿ ಚಿತ್ತಾರ ಬರೆದಾವೊ। ಚಿಲಿಪಿಲಿ ಮೇಳವ ಹರಿಸುತ್ತಾ ಸೃಷ್ಟಿಗೆ ಸಂಭ್ರಮ ತಂದಾವೊ॥ಪ॥ ದಂಡು ಕಾರ್ಮೋಡ ಮುಟ್ಯಾವೊ ನೀಲದಂಬರವ ತಟ್ಯಾವೊ। ಬೆಳ್ಳಿ ನೇಸರನ ಸೆಳೆತಕ್ಕೆ ಆಗಸದಂಚಲಿ ಹರಿದಾವೊ॥1॥ ರೆಕ್ಕೆಯ ಪಟಪಟ ಬಡಿದಾವೊ ಢಮರುಗ ನಾದವು ಮೊಳಗ್ಯಾವೊ। ಉಲ್ಲಾಸದಿ ತಾ ಹಾರುತ್ತಾ ಐಕ್ಯ ಭಾವವ ಮೆರೆಸ್ಯಾವೊ॥2॥

## ಕಾಗೆ

### ಕರ್ರಗಿರುವ ಕಾಗೆಯೊಂದು

ಕರ್ರಗಿರುವ ಕಾಗೆಯೊಂದು। ಸರ್ರೆಂದು ಮೇಲೆಹಾರಿ। ಗಿರ್ರೆಂದು ಸುತ್ತಿ ತಿರುಗಿ। ಕೆಳಗೆ ಜಾರಿತು॥1॥ ಕರ್ರೆಂದು ಕೂಗಿಕೊಂಡು। ಜರ್ರೆಂದು ಜಾರುವಾಗ। ಪರ್ರೆಂದು ಅದರ ರೆಕ್ಕೆ। ಹರಿದು ಹೋಯಿತು ॥2॥

### ಕಾಗೆ2 ಕವ್ವ ಕಾಳ್ ಕೆಂಡ್ಯೇನವ್ವ

ಕಾಗೆ ಕಾಗೆ ಕವ್ವ ಕಾಳ್ ಕಂಡ್ಯೇನವ್ವ? ಯಾರ್ ಬಂದಾರವ್ವ? ಬಳಗವ ಕರೆವೇನವ್ವ? ತಿರುಗಿಸುತ್ತ ಕತ್ತ। ನೋಡುತಿರುವೆ ಎತ್ತ?॥1॥ ಕೊಕ್ಕನು ಉಜ್ಜುತ್ತಾ ಹುಡುಕುವೆ। ಹಾರುತ್ತಾ ಸಂಚುಗಾರನಾಗಿ ನೋಡುವೆ। ಹೊಂಚುಹಾಕಿ ಕದಿಯುವೆ॥

ಇಲಿಯು ಇಷ್ಟ ನಿನಗೆ। ಕುಕ್ಕಿ ಕುಕ್ಕಿ ತಿನ್ನುವೆ॥2॥

**ಕಾಗೆಯೊಂದು ಮರದ ಮೇಲೆ** **ರಾಗ:ಖರಹರಪ್ರಿಯ**

ಕಾಗೆಯೊಂದು ಮರದ ಮೇಲೆ ಕೂಗು ಕೊಟ್ಟಿತು। ಬೇರೆಯೊಂದು ಕಾಗೆ ಅದಕೆ ಬದಲು ಕೊಟ್ಟಿತು॥ಪ॥ ಮೊದಲ ಕಾಗೆ ಕೂಗಿತಿಂತು "ಕಾ। ಕಾ। ಕಾ।" ಬದಲು ಕೂಗಿತೆರಡನೆಯದು "ಕಾ! ಕಾ! ಕಾ!" ಕಾಗೆ ಏನೊ ಕೂಗಹೋಗಿ "ಕಾ" ಎಂದಿತು। "ಕಾ" ಎಂಬ ದನಿಯು ಮಾತ್ರ ಹೊರಗೆ ಬಂದಿತು॥1॥ ಕಾಗೆಯೆರಡು ತಾವು ಬಹಳ ಹೇಳಿ ನುಡಿದೆವು। ಎಂದುಕೊಂಡು ಜಂಬದಿಂದ ರೆಕ್ಕೆ ಬಡಿದುವು॥ ಕಾಗೆಗೇನು ಮಾತೆ ಬರದು ಹ್ವ। ಹ್ವ। ಹ್ವ। ಅದಕೆ ಬರುವುದೊಂದೆ ಮಾತು "ಕಾ। ಕಾ। ಕಾ।" ಕಾಗೆ ಅತ್ತರದೇ ಸದ್ದು "ಕಾ। ಕಾ। ಕಾ।"॥2॥ ಕಾಗೆ ನಕ್ಕರದೇ ಸದ್ದು "ಕಾ। ಕಾ। ಕಾ।" ಆದರದಕೆ ಬಹಳ ಜಂಬ ತಲೆಯೆ ನಿಲ್ಲದು। ತನಗೆ ಮಾತು ಬಾರದೆನಲು ಕೇಳಲೊಲ್ಲದು॥3॥

**ಕಾಗೆ ಕೂಗಿತಲ್ಲ (ದೇವರನಾಮ)** **ರಾಗ: ಪೂರ್ವಿಕಲ್ಯಾಣಿ-ಆದಿತಾಳ**

ಕಾಗೆ ಕೂಗಿತಲ್ಲ। ಈಗ ಒಂದು ಕಾಗೆ ಕೂಗಿತಲ್ಲ॥ಪ॥ ಎಲ್ಲರೇಳದ ಮುನ್ನ ಗುಲ್ಲು ಮಾಡುತಲೆದ್ದು। ಚೆಲ್ಲಿದ ಧಾನ್ಯವ ಮೆಲ್ಲುತ॥ ಮಲ್ಲಿಗೆ ಮುಡಿಯುವರು ಮರೆದೊರಗಲು ಬೇಡಿ। ಫುಲ್ಲನಾಭನ ಪೂಜಾ ಸಮಯವಿದೆಂದು॥1॥ ಯಾರೂ ಏಳದ ಮುನ್ನ ಓರಂತೆ ತಾನೆದ್ದು। ಕೇರಿ ಕೇರಿಯಲ್ಲಿ ಸಂಚರಿಸುತ॥ ಓರೆ ಮೋರೆಯ ಮೂರುಕಡೆ ತಿರುಗಿಸುತ್ತ। ಊರಿಂದ ಬರುವ ನೆಂಟರು ಬರುವುದ ಹೇಳ್ವ॥2॥ ಪಿತೃಗಳ ಕಾರ್ಯಕ್ಕೆ ಅಗತ್ಯವಾಗೋದು। ಹತವಾದವರಾಕಾಂಕ್ಷಾ ತಿಳಿಸುವುದು। ಅತಿ ಹೇಯವಸ್ತು ಈ ಕಾಗೆಯೆನಲು ಬೇಡಿ। ಹಿತವಾದ ಶಕುನವ ನುಡಿವುದೀ ಕಾಗೆ॥3॥ ಕಷ್ಟವ ಇಷ್ಟವನಿಷ್ಟವ ಸಾರುತ್ತ। ಸೃಷ್ಟಿ ಸಂಪದವ ಕೈಗೂಡಿಸುತ್ತ। ಶ್ರೇಷ್ಠ ಬ್ರಾಹ್ಮಣರ ಬಲಿಹರಣ ತಿಂದು। ಪಟ್ಟಸಾಲೆ ಮೇಲೆ ಕೂಗುವ ಕಾಗೆ॥4॥ ಮಂಗಳ ಮಹಿಮೆಗೆ ಮಹಲಕ್ಷ್ಮೀಯರಸಗೆ। ಹಿಂಗದೆ ಮಾನ ಪ್ರೀಯನಿಗೆ। ಗಂಗೆಯ ಪಿತ ಶ್ರೀ ಪುರಂದರ ವಿಠಲನ್ನ ಸಿಂಗಾರದ ಪೂಜೆ ಸಮಯವೆಂದು॥5॥

## ಕೋಳಿ

**ಕೊಕ್2 ಎನ್ನುತ್ತಾ ಕೆದಕಿ ಕುಕ್ಕಿ**

ಕೊಕ್ ಕೊಕ್ ಎನ್ನುತ್ತಾ। ಕೆದಕಿ ಕುಕ್ಕಿ ತಿನ್ನುತ್ತಾ। ಅತ್ತ ಇತ್ತ ನೋಡುತ್ತಾ। ಕಾಲನೆತ್ತಿ ನಿಲ್ಲುತ್ತಾ॥1॥। ಬಣ್ಣದ ಬೆಡಗಿಂಬೀಗುತ್ತಾ। ಜಂಭದ ನಡಿಗೆಯಿಂ ಓಡುತ್ತಾ। ತಲೆಎತ್ತಿ ತಿರುಗುವ ಹೆಂಟೆಯೆ। ತಿಪ್ಪೆಯೆ ನಿಮಗೆ ಭಂಡಾರ॥2॥ ಕೆಂಪು ಟೋಪಿ ಹುಂಜ। ಅದುವೆ ನಿನಗೆ ಅಂದ। ಹೆಂಟೆಯು ಕೊಡುವುದು ತತ್ತಿ। ಅದರಿಂ ಬರುವುದು ಶಕ್ತಿ॥3॥

**ಕೊಕ್2 ಕೋಳಿ ತಿಪ್ಪೆ**

ಕೊಕ್ ಕೊಕ್ ಕೋಳಿ ತಿಪ್ಪೇ ಕೆದರೋ ಚಾಳಿ ಇಟೀಟ ಬುತ್ತಿ ದಿನಾ ಒಂದು ತತ್ತಿ॥

**ಜಂಭದಿಂದ ಕೊರಳನೆತ್ತಿ**

ಜಂಭದಿಂದ ಕೊರಳನೆತ್ತಿ ಕೋಳಿ ತಾನು ಕೂಗಿತು। ತನ್ನಿಂದಲೆ ಹಗಲು ಎಂದು ಗರ್ವದಿಂದ ಮೆರೆಯಿತು॥1॥ ತಾನು ಕೂಗಿ ಕರೆದರಾಗ ರವಿಯು ಬಂದೆ ಬರುವನು। ಕೂಗಿ ತಾನು ಕರೆಯದಿರಲು ಅವನು ನಿದ್ದೆಗೈವನು॥2॥ ಅವನನೇಕೆ ಇನ್ನು ಮೇಲೆ ಕೂಗಿ ತಾನು ಕರೆಯಲಿ?। ಎಂದು ತಿಳಿದಕೋಳಿ ಮಲಗಿ ನಿದ್ದೆ ಮಾಡಿತು॥3॥ ಆದರೇನು! ಬೆಳಕ ಚೆಲ್ಲಿ ರವಿಯು ಬಂದೆ ಬಂದನು। ಚಳಿಯನಟ್ಟಿ ಶಾಖ ಚೆಲ್ಲಿ ಭುವಿಗೆ ಗೆಲುವ ತಂದನು॥4॥ ಬಿಸಿಲ ಝಳಕೆ ಸಿಕ್ಕಲು ಕೋಳಿಕಣ್ಣು ಬಿಟ್ಟಿತು। ರವಿಯ ಕಂಡು ನಾಚಲು ಅದರ ಕೊರಳು ಕಟ್ಟಿತು॥5॥

**ಬಾನಲಿ ಹಾರದ ಬಣ್ಣದ ಕೋಳಿ (ಕೋಳಿ-ಖಗಮೃಗ)**

ಬಾನಲಿ ಹಾರದ ಬಣ್ಣದ ಕೋಳಿ। ಬೆಳಗಾದರೆ ಕೂಗೋದು ಎಲ್ಲರೂ ಏಳಿ।। ತರತರವಿರುವುದು ಹುಂಜ ಹೇಂಟೆ। ಹಳ್ಳೀಲಿ ಇದು ಸಮಯದ ಘಂಟೆ।।1।। ಹುಂಜದ ಅಂದವೆ ಜುಟ್ಟಿನ ಚಿಟ್ಟೆ। ಹೇಂಟೆಯು ಇಡುವುದು ಅಂದದ ಮೊಟ್ಟೆ। ಗಗನದಿ ಕಂಡರೆ ಆ ರಾಕ್ಷಸ ಹದ್ದು। ಹೆದರುತ ಅಡಗುವುವು ಮರೆಯಲಿ ಕದ್ದು।।2।।

**ಬೇಲಿ ಮೇಲೆ ಹಾರಾಡಿ** **ರಾಗ: ಶಂಕರಾಭರಣ**

ಬೇಲಿ ಮೇಲೆ ಹಾರಾಡಿ। ಹಾಗೆ ಹೀಗೆ ಓಲಾಡಿ। ಕೆಂಪು ಟೋಪಿ ತೂರಾಡಿ। ಹೇಳುವೆ ಏನಾ ಎಲೆ ಕೋಳಿ। ಕೊಕ್ ಕೊಕ್ ಕೊಕ್।।1।। ಬೆಳ್ಳಂಬೆಳಗು ಈಗಾಯ್ತು। ಹಳ್ಳಿಯೆಲ್ಲ ಹೊನ್ನಾಯ್ತು। ಏಳಿ ಏಳಿ ಎದ್ದೇಳಿ। ಹುಂಜ ಹಳ್ಳಿಯ ಗಡಿಯಾರ।।2।। ಕಾಲಿನಿಂದ ತಿಪ್ಪೆ ಕೆದರಿ। ಹುಳಾನೆಲ್ಲಾ ಹೆಕ್ಕಿ ತಿಂದು। ಹೊಟ್ಟೆ ತುಂಬಿ ಕೋಳಿ ಕೂಗಿಗು। ಕೊಕ್ಕೊ ಕೊಕ್ಕೊ ಕೊಕ್ಕೊ।।3।।

## ಹಂಸ

**ಮಮ ಮಾನಸ ಸರಹಂಸಾ** **ರಾಗ: ಹಿಂದೋಳ**

ಮಮ ಮಾನಸ ಸರಹಂಸಾ। ಮಮ ಮಾನ್ಯ ರಾಜಹಂಸಾ।।ಪ।। ಝುಗಝುಗ ಪೊಳೆಯುತ ಬಾ। ಮುಂಜಾವು ಮಾಡಿ ನೀ ಬಾ। ಸಾತ್ವಿಕ ವರ್ಣದ ಪುಂಡರೀಕ। ಸುಮನವನು ಅರಳಿಸಲು ಬಾ।।1।। ಮಿರಿಮಿರಿ ಮಿಂಚುತ ಬಾ। ಮಧ್ಯಾಹ್ನ ಮಾಡಿ ನೀ ಬಾ। ರಾಜಸವರ್ಣದ ಪಂಕಜ ಪುಷ್ಪವ। ಪುನೀತಗೊಳಿಸಲು ಬಾ।।2।। ಅಂಜನೆ ನೀಡುತ ಬಾ। ಮುಚ್ಚಂಜಿ ಮಾಡಿ ನೀ ಬಾ। ತಾಮಸವರ್ಣದ ಕುಮುದ। ಕುಸುಮದಾ ಕಾಲ ಕಳೆಯಲು ಬಾ।।3।।

## ಮರಕುಟಿಕ

**ಉದ್ದ ಕೊಕ್ಕಿನಾ ಹಕ್ಕಿ**

ಉದ್ದ ಕೊಕ್ಕಿನಾ ಹಕ್ಕಿ। ಗೂಡ ತೋಡುವೆ ಕುಕ್ಕಿ। ಮರದ ಮನೆಯ ಹಕ್ಕಿ। ಪಕ್ಷಿ ಸಂಕುಲದಲೆ ಲಕ್ಕಿ।।

## ಗೊರವಂಕ

**ಚೆಂದದ ಹೆಸರು**

ಚೆಂದದ ಹೆಸರು ಗೊರವಂಕ। ಪಕ್ಷಿ ಸಂಕುಲದಲ್ಲಿ ಅಂಜುಬುರುಕ। ಅದರ ಬಣ್ಣ ನೋಟ ಮನಮೋಹಕ। ಇಂಥ ಪಕ್ಷಿ ಪಡೆದು ಧನ್ಯವಾಯ್ತೀ ಲೋಕ।।

## ಗರುಡ

**ಅತಿ ಶೋಭಿಸುತಿದೆ ಶ್ರೀಪತಿ ವಾಹನಾ (ದೇವರನಾಮ)** **ರಾಗ: ಕಾಂಭೋದಿ**

ಅತಿ ಶೋಬಿಸುತಿದೆ ಶ್ರೀಪತಿ ವಾಹನಾ। ಚತುರದಶ ಲೋಕಪ್ರಖ್ಯಾತಿ ವಾಹನಾ।।ಪ।। ಕಾಲನಾಮಕನಾಗಿ ಕಮಲ ಭವನದಲಿ ಜನಿಸಿ। ಕಾಲಾತ್ಮ ಹರಿಯ ಸೇವಿಪ ವಾಹನಾ। ಕಾಳಗದಿ ಕಪಿವರರ ಕಟ್ಟು ಬಿಡಿಸಿದ ವಾಹನಾ। ವಾಲಿಖಿಲ್ಯರ ವರವ ಪಡೆದ ವಾಹನಾ।।1।। ವಿನುತ ಕಶ್ಯಪ ಋಷಿಯ ತನಯನೆನಿಸಿದ ವಾಹನಾ। ಅನುಜರನು ಕದ್ದೊಯ್ದು ಆಢ್ಯ ವಾಹನಾ। ವಾರಿಧಿ ಮಧ್ಯದಿ ನಾವಿಕರ ಭಕ್ಷಿಸಿದ ವಾಹನಾ। ಜನಕನಾಜ್ಞದಿ ಕೂರ್ಮಗಜ ನುಂಗಿದ ವಾಹನಾ।।2।। ಕೂಪರದೆಡೆಗೆ ಮಂದಾರ ಒಯ್ದು ವಾಹನ ನಿಜ। ರೂಪದಿಂ ಹರಿಸೇವೆ ಗೈಯ್ದ ವಾಹನಾ। ಆ ಪಿತೃಗಳಿಗಮೃತ ಪ್ರಾಪ್ತಮಾಡಿದ ವಾಹನಾ।। ಸೌಪರ್ಣಿ ಪತಿಯೆಂಬ ಪೊಂಬಣ್ಣದ್ವಾಹನಾ।।3।। ಕುಲಿಶಪಾಣಿಯ ಕೂಡೆ ಕಲಹ ಮಾಡಿದ

ವಾಹನ। ಒಳಹೊಕ್ಕು ಪೀಯೂಷ ತಂದ ವಾಹನಾ। ಮಲತಾಯಿ ಮಕ್ಕಳನು ಮರುಳುಗೊಳಿಸಿದ ವಾಹನಾ। ಬಲಿರಾಜನೊಯ್ದ ಮಕುಟವ ತಂದ ವಾಹನ॥4॥ ಪನ್ನಗಾಶಯನನಾದ ಪತಿತ ಪಾವನ ವಾಹನಾ। ಸನ್ನುತಿಪ ಸಜ್ಜನರ ಪೊರೆವ ವಾಹನಾ। ಪನ್ನಗಾಚಲವಾಸ ಜಗನ್ನಾಥ ವಿಠ್ಠಲಗೆ। ಉನ್ನಂತ ಪ್ರಿಯವಾದ ಗರುಡ ವಾಹನ॥5॥

**ಪಕ್ಷಿರಾಜ ಗಗನದಲ್ಲಿ** **ರಾಗ:ಅಭೇರಿ**

ಪಕ್ಷಿರಾಜ ಗಗನದಲ್ಲಿ। ಸ್ವೇಚ್ಛೆಯಿಂದ ಹಾರುತಿಹುದು। ಅದರ ನೆರಳು ನೆಲದ ಮೇಲೆ। ಹಕ್ಕಿಯಂತೆ ಕಾಣುತಿಹುದು॥ಪ॥ ಗಗನಕೆಲ್ಲ ರಾಜನಾಗಿ। ಎಡರು ತೊಡರು ಒಂದು ಇರದೆ। ಇಚ್ಛೆಯೊಂದೆ ದಾರಿ ಎನಿಸಿ ಸ್ವೇಚ್ಛೆಯಿಂದ ಹಾರುತಿಹುದು॥1॥ ನೆಲದ ಮೇಲೆ ಏನೆ ಇರಲಿ। ಆಶಾ ಸೌಧ ಎದುರು ಬರಲಿ। ಹೊನ್ನ ರಾಶಿ ಸುರಿದು ಇರಲಿ। ಸುಖದ ಸೇತು ತೂಗುತಿರಲಿ॥2॥ ಹಳ್ಳಕೊಳ್ಳ ಏನೆ ಬರಲಿ। ಬೆಟ್ಟಗುಡ್ಡ ಅಡ್ಡ ಬರಲಿ। ಕಲ್ಲು ಮುಳ್ಳು ದಾರಿಇರಲಿ। ಎಡರು ತೊಡರು ಏನೇ ಇರಲಿ॥3॥ ನೆರಳಿಗಿಲ್ಲ ಅದರ ಪರಿವೆ। ನಡೆವುದೊಂದು ಕಾಣದಂತೆ। ಹರಿಯು ನೀನು ನೆರಳು ನಾನು। ಹರಿಯ ಚಿತ್ತ ಹರಿದ ಕಡೆಗೆ। ಹರಿವುದೊಂದೇ ನನಗೆ ಧರ್ಮ॥4॥

## ಹಾಲಕ್ಕಿ

**ರಂಗು ಮಹಲಿನ ರಾಗ** **ರಾಗ:ಸಾರಂಗ**

ರಂಗು ಮಹಲಿನ ರಾಗ, ರಂಗುದುಟಿಗಳ ರಾಗ, ಇಂಗೊರಲು ಉಲಿವರಾಗ। ಶೃಂಗಾರ ಸೂತ್ರಜ್ಞೆ ಕೋಕಿಲೆಯ ಕುಕಿಲು ಸಹ ಕಡು ಬೇಸರಾಯಿತೀಗ। ಅಡ್ಡ ಹಾದಿಯ ಹಿಡಿವೆ। ಸಾವಿನಾಚೆಯ ನಾಡ ಗೂಢವಿಂದೊಡೆಯುತಿಹು। ಗುಡ್ಡಗಾಡಿನ ನಡುವೆ ಕಳಕುಳಗಿಳೆಂದು ಹಾಲಕ್ಕಿಯೊಡನುಡಿಯುತಿಹುದು। ಜೀರಿಡುವ ಹಾಲಕ್ಕಿ। ದೇವಲೋಕದ ಗುಟ್ಟು ಬಟ್ಟೆಯನು ನೀನೆ ಬಲ್ಲೆ॥ ಕಾರಿರುಳದೇವತೆಯು ಕಿವಿಯಲ್ಲಿ ಹೇಳಿದಳು ಇರಿಸಿ। ಮುಂಗೈಯ ಮೇಲೆ। ಈಚೆ ಮುಳುಗುವ ಭಾನು ಆಚೆ ಮೂಡುವನೆಂದು ಚೀರುತಿಹೆ ಬೇರೆ ಸ್ವರದಿ॥ ಊಚ-ನೀಚದ ಮಾನ ನಿನ್ನದೌ ಕನಸರಸಿ। ಸಾಗುವೆನು ನಾನು ತ್ವರದಿ॥ ನನ್ನ ದೈವದ ದೈವತವೆ। ನಿನ್ನ ಮನೆಯಲ್ಲಿ ಪರದಸಂಸಾರಿಯಾಗಿ ಇನ್ನು ಬಾಳುವೆನಮ್ಮ-ನಿನ್ನ ಒಳ್ಗುಡಿಯಲ್ಲಿ ಇಹದ ಸಂನ್ಯಾಸಿಯಾಗಿ॥ ಅಕ್ಕ ಶಕುನದ ಹಕ್ಕಿ। ನಿನ್ನ ಭಕ್ತನು ಅಂಗಲಾಚುವನು ಮುಂದೆನಿಂದು। ಕಕ್ಕುಲಾತಿಯ ತೋರಿ ಹರಿಸವ್ವ-ಜಗದಲ್ಲಿ ಹಗಲು ಇರುಳಾಗಲೆಂದು॥

## ಹಕ್ಕಿ

**ಆ ಚೆಲ್ವಾರಿ ಹಕ್ಕಿ** **ರಾಗ: ಶಂಕರಾಭರಣ**

ಆ ಚೆಲ್ವಾರಿ ಹಕ್ಕಿ। ಆಹಾ ಚೆಲ್ವಾರಿ ಹಂ। ಅಕ್ಕಿಕಾಳು ಮುಕ್ಕಿ। ಆಹಾ ರೆಕ್ಕೆ ಇಕ್ಕಿ। ಹಾರಿತು ಮನೆಯ ಮೇಲೆ॥1॥ ಹೊನ್ನ ಬಣ್ಣ ಪುಕ್ಕ। ನೀಲಿ ಅಕ್ಕ ಪಕ್ಕ॥ ಹಕ್ಕಿ ಬಾಳ ಪುಕ್ಕ। ಹಾರಿತು ಮನೆಯ ಮೇಲೆ॥2॥ ಅತ್ತ ಇತ್ತ ನೋಡಿ। ಏನೋ ಮಾತನಾಡಿ॥ ಬಿಟ್ಟು ನನ್ನ ಜೋಡಿ। ಕೂತಿದೆ ಮನೆಯ ಮೇಲೆ॥3॥ ಕೋಪವೆಲ್ಲ ಬಿಟ್ಟು। ಮತ್ತೆ ಜೋಡಿ ಕಟ್ಟು॥ ಬಂದು ನನ್ನ ಮುಟ್ಟು। ಇಳಿಯುತಾ ನೆಲದ ಮೇಲೆ॥4॥

**ಓ... ಪುಟಾಣಿ ನೀಲಿ ಹಕ್ಕಿ** **ರಾಗ:ನೀಲಾಂಬರಿ**

ಓ.... ಪುಟಾಣಿ ನೀಲಿ ಹಕ್ಕಿ। ಹಾಡು ಹಾಡು॥ಪ॥ ಚಂದ್ರ ಇದಾನೆ ಬಾನಲ್ಲಿ। ಬೆಳದಿಂಗಳು ಈ ಕಾಡ್ನಲ್ಲಿ। ಬರಲೇಬೇಕು ನೀನಿಲ್ಲಿ। ಹಾರಾಡುವ ಮಾತಿನ ಮಲ್ಲಿ॥1॥ ಅಲೆಯಾಡುತ್ತಿವೆ ಕೊಳದಲ್ಲಿ। ತೆನೆ ಕೂಗುತಿವೆ ಹೊಲದಲ್ಲಿ। ಬರಲೇ ಬೇಕು ನೀನಿಲ್ಲಿ। ಹಾರುಡುವ ಮಾತಿನ ಮಲ್ಲಿ॥2॥ ಬೆಳ್ಳಕ್ಕಿಗಳಿವೆ ಸ್ತರದಲ್ಲಿ। ಗಿಳಿಗಳು ಹಚ್ಚನೆ ಮರದಲ್ಲಿ। ನೀಲಿಯೊಳಾಡುವ ನೀಲಿಯ ಹಕ್ಕಿ। ಬರಲೇ ಬೇಕು ನೀನಿಲ್ಲಿ। ಹಾರಾಡುವ ಮಾತಿನ ಮಲ್ಲ॥3॥

**ಚಿಲಿಪಿಲಿಗುಟ್ಟುತ** **ರಾಗ: ದುರ್ಗ**

ಚಿಲಿಪಿಲಿಗುಟ್ಟುತ ಹಕ್ಕಿಯ ಹಿಂಡು ಭರ್ರನೆ ಹಾರುತಿದೆ। ಅದರ ಧ್ವನಿಯ ಮಾಧುರ್ಯವು ಮನವನು ಮೋಹಿಸಿದೆ।। ಜಾತಿ ಭೇದ ವರ್ಣಭೇದ ಮೇಲು ಕೀಳನರಿಯದೆ। ಸಂಘ ಜೀವನ ಸಮಾನತೆಗೆ ಆದರ್ಶವಾಗಿದೆ।।1।। ಅದರ ಅಂದ ಏನೆ ಇರಲಿ ಅದರ ಧ್ವನಿಯು ಎಂತೆ ಇರಲಿ। ಉದಯರಾಗ ಹಾಡುತಲಿ ತನ್ನತನವ ಪಡೆಯುತಲಿ।। ಉಷಃಕಾಲ ಸಮಯದಲಿ ನಲ್ಮೆಯಿಂದ ಪಾಡುತಲಿ।। ಗೋಧೂಳಿ ಹೊತ್ತಿನಲಿ ಗಡಿಬಿಡಿಯಲಿ ಸಾಗುತಲಿ।।2।। ಸುಖ ಜೀವನ ನಡೆಸುತ ತೃಪ್ತಿಯಿಂದ ನಲಿಯುತ। ಗಿಡಮರಗಳ ಆಸರೆ ಹೊಂದಿ ತನ್ನ ಬಾಳ ನಡೆಸುತಾ।। ಹಕ್ಕಿ ಹಿಂಡು ಗಗನದಲ್ಲಿ ಸ್ವತಂತ್ರವಾಗಿ ಹಾರುತ। ಅದರ ನೆರಳು ಹಿಂದೆ ಹಕ್ಕಿಯಂತೆ ಕಾಣುತ।।3।।

**ನಾನು ಪಂಜರದ ಪಕ್ಷಿ** **ರಾಗ:ಆನಂದಭೈರವಿ**

ನಾನು ಪಂಜರದ ಪಕ್ಷಿ ಇನ್ನು ನನಗಾರು ಗತಿ। ಕೇಳ ಬಯಸುವಿಯೇನು ನನ್ನ ಕಥೆಯ।। ಯಾರ ಸಂತೋಷಕ್ಕೆ ಹಿಡಿದುತಂದರೋ ನನ್ನ। ಅರಿಯಬಲ್ಲೆಯ ನನ್ನ ಒಡಲ ವ್ಯಥೆಯ।।1।। ಬಹುದೂರ ಯಾವುದೋ ಪರ್ವತದ ಓರೆಯಲಿ। ಮರದ ಕಿರಿ ಹೊದರಿನಲಿ ಜನಿಸಿ ಬಂದೆ। ಆ ತಂದೆ ತಾಯಿಯರು ನನ್ನಣ್ಣ ತಂಗಿಯರು। ಅವರ ಜೊತೆಯಲಿ ನಾನು ನಲಿಯುತ್ತಿದ್ದೆ।।2।। ಅಲ್ಲಿ ಬನ ಬನದಲ್ಲಿ ಕಾಡ ಗಿಡ ಗಿಡದಲ್ಲಿ। ಕೊಂಬೆ ಕೊಂಬೆಗು ಹೂವು ಸಾವಿರಾರು।। ಬನದ ಹಣ್ಣಿನ ರುಚಿಯ ಬರಿ ನೆನೆದರೇನುಂಟು। ಮರಳಿ ದೊರೆಯಲು ಬಹುದೆ ತೌರಿನವರು?।।3।। ಬಣ್ಣ ಬಣ್ಣದ ಹಕ್ಕಿ ಮತ್ತೆ ಪಾತರಗಿತ್ತಿ। ನನ್ನ ಗೆಳೆತನವಿತ್ತು ಬನದ ತುಂಬ। ಚೈತ್ರಋತು ಬಂದಾಗ ಬನ ತುಂಬಿ ನಿಂದಾಗ। ಎಂಥ ಸಂತೋಷವೋ ಕೊರಳ ತುಂಬ।।4।। ಗಿರಿ ಶಿಖರ ಝರಿ ನೀರು ಸ್ವಚ್ಛಂದ ಆಕಾಶ। ಇನ್ನೊಮ್ಮೆ ಅಂಥ ಸುಖ ಪಡುವೆನೇನು? ಯಾರ ಪ್ರೀತಿಯ ನಂಬಿ ಜೀವ ಹಿಡಿಯಲಿ। ನಾನು ಅರ್ಥವಿಲ್ಲದ ಹಾಡ ಹಾಡಲೇನು?।।5।।

**ಪಂಜರದ ಹಕ್ಕಿ ಸವಿಯಾಗಿ**

ಪಂಜರದ ಹಕ್ಕಿ ಸವಿಯಾಗಿ ನುಡಿ। ಅಕ್ಕರೆಯ ನೆನೆಸಿ ಮೈಮರೆಸು ನೀ।। ಸ್ವಚ್ಛಂದ ಬಾಳನ್ನು ಬಂದಿಹೆ ಕಳೆಕೊಂಡು। ಏಕಾಂತದಲಿಂದು ಏಕೆ ನಿನ್ನ ಕೊರಗು।।1।। ಒಡನಾಟ ಇಲ್ಲಿಲ್ಲ ದೂರವಿದೆ ಮನಸೆಲ್ಲಾ। ತನ್ನವರು ಯಾರಿಲ್ಲ ಸಮಾಧಾನ ಇನ್ನಿಲ್ಲ।। ಹೊಸಬಾಳು ಬೇಕೆಂದು ಅನುಸರಿಸಿ ಧರ್ಮವನು। ಹೊಂದಿ ನೀ ಧೈರ್ಯವನು ಶ್ರೀಶಾಂತಿ ಕಾಯುತಿರು।।2।।

**ಪುಟ್ಟ ಹಕ್ಕಿ ಗೂಡಿನಿಂದ**

ಪುಟ್ಟ ಹಕ್ಕಿ ಗೂಡಿನಿಂದ। ಇಣುಕಿ ನೋಡಿತು। ಕಾಳು ಕಂಡು ಹಾರಿ ಬಂದು ಮನೆಯ ಹೊಕ್ಕಿತು। ಅತ್ತ ಇತ್ತ ಕತ್ತು ಸರಿಸಿ ಸುತ್ತ ನೋಡಿತು। ಸಣ್ಣ ಪುಟ್ಟ ಕಾಳನೆಲ್ಲ ಹೆಕ್ಕಿ ತಿಂದಿತು।।1।। ಪುಟ್ಟದೊಂದು ಹಾಡು ಹೇಳಿ ನಕ್ಕು ನಲಿಯಿತು।। ಹೊರಗೆ ಬಂದು ರೆಕ್ಕೆ ಬಡಿದು ಹಾರಿ ಹೋಯಿತು।। ಬಾನಿನಲ್ಲಿ ತೇಲಿ ತೇಲಿ ಕಾಣದಾಯಿತು।।2।।

**ಪುಟ್ಟ ಹಕ್ಕಿ ಪುಕ್ಕ ಬಿಚ್ಚಿ** **ರಾಗ:ಶಂಕರಾಭರಣ**

ಪುಟ್ಟ ಹಕ್ಕಿ ಪುಕ್ಕ ಬಿಚ್ಚಿ। ಗೂಡು ಬಿಟ್ಟು ಹಾರಿತು। ಹಳ್ಳ ಕೊಳ್ಳ ಕಾಡು ಮೇಡು। ಎಲ್ಲೆಲ್ಲೂ ಸುತ್ತಿ ಬಂದಿತು।।ಪ।। ಹಣ್ಣುಕಾಯಿ ಹೆಕ್ಕಿ ಹೆಕ್ಕಿ। ರಸವನ್ನು ಹೀರುತಿತ್ತು। ಅತ್ತ ಇತ್ತ ಗಾಳಿಯಲ್ಲಿ। ಚುಕ್ಕಿಯಾಗಿ ಮೇಲೆ ಹಾರಿತು।।1।। ರೆಂಬೆಯಲ್ಲೂ ಕುಳಿತು ಮತ್ತೆ। ಬಾನಿನಲ್ಲೂ ಜಿಗಿಯಿತು। ಹಣ್ಣು ಕಾಯಿ ಹೆಕ್ಕಿ ಹೆಕ್ಕಿ ರಸವನ್ನು ಹೀರುತಿತ್ತು। ಅತ್ತ ಇತ್ತ ಗಾಳಿಯಲ್ಲಿ ಹಕ್ಕಿಯಂತೆ ಹಾರಿತು।।2।।

**ಪುಟಾಣಿ ಹಕ್ಕಿ ಹಳದಿಕೊಕ್ಕು**

ಪುಟಾಣಿ ಹಕ್ಕಿ ಹಳದಿಕೊಕ್ಕು। ಹಾರಿ ಬಂತು ಕಿಟಕಿ ಹೊಕ್ಕು। ಹೇಳಿತು ಹೊಳಪಿನ ಕಣ್ಣನು ಬಿಟ್ಟು। ಮಲಗಿಹೆ ಇನ್ನು

ನಾಚಿಕೆ ಬಿಟ್ಟು। ಕಿಟ್ಟಿ ಕಿಟ್ಟಿ ಏಳೆಲೆ ಕಿಟ್ಟೀ। ನನ್ನನ್ನು ನೋಡಿ ಕಲಿಯೆಲೆ ಕಿಟ್ಟಿ॥

**ಬಾರೆಲೆ ಹಕ್ಕಿ ಬಣ್ಣದ ಹಕ್ಕಿ** **ರಾಗ:ಸಾರಂಗ**

ಬಾರೆಲೆ ಹಕ್ಕಿ ಬಣ್ಣದ ಹಕ್ಕಿ। ಬಾರೆಲೆ ಹಕ್ಕಿ ಹಾರುವ ಹಕ್ಕಿ॥ಪ॥ ಗೆಳೆಯರು ಆಡಲು ಯಾರೂ ಇಲ್ಲ। ಕಳೆಯುವುದೆಂತು ವೇಳೆಯನೆಲ್ಲ। ಬಾಬಾ ನನಗೂ ಹಾಡಲು ಕಲಿಸು। ಬಾಬಾ ನನಗೂ ಹಾರಲು ಕಲಿಸು॥1॥ ಅವ್ವನು ನೀರಿಗೆ ಹೋಗಿಹಳು। ಅಪ್ಪನು ಪೇಟೆಗೆ ಹೋಗಿಹನು। ಅವ್ವನು ಬರಲಿ ಅಪ್ಪನು ಬರಲಿ। ತಿನ್ನಲು ಹಣ್ಣನು ಕೊಡಿಸುವೆನು॥2॥ ನನಗೂ ಎರಡೂ ರೆಕ್ಕೆಯ ಹಚ್ಚು। ಹಿಂಗಡೆ ಬಣ್ಣದ ಪುಚ್ಚವ ಚುಚ್ಚು। ನೆತ್ತಿಯ ಮೇಲೆ ಜುಟ್ಟನು ಹಚ್ಚು॥3॥ ಮೆಲ್ಲನೆ ಮೇಲೆ ಹಾರಲು ಹಚ್ಚು॥ ನಾನೂ ನೀನು ಇಬ್ಬರು ಕೂಡಿ। ಮುಗಿಲಿನ ಕಡೆಗೆ ಹಾರುವ ಬಾ। ಅಲ್ಲಿಂದಿತ್ತ ಇಲ್ಲಿಂದತ್ತ ಹಾರುತ। ಹಾಡುತ ನಲಿಯುವ ಬಾ॥4॥

**ಬಂದಿತು ಬಂದಿತು ಹಕ್ಕಿ ಹಾರುತ**

ಬಂದಿತು ಬಂದಿತು ಹಕ್ಕಿ। ಹಾರುತ ಹಾರುತ ಹಕ್ಕಿ। ಮೊರದಲಿ ಒಣಗಿಸೆ ಅಕ್ಕಿ ತಿನ್ನಲು ಕಾಳನು ಹೆಕ್ಕಿ॥1॥ ಚಿಲಿಪಿಲಿಗುಟ್ಟುತ ಹಿಂಡು ಬಂದವು ದಂಡುದಂಡು। ನನ್ನಜ್ಜಿಕೋಪಗೊಂಡು ಓಡಿದಳದನು ಕಂಡು॥2॥ ಅಜ್ಜಿಯ ಕೈಯಲಿ ಕೋಲು ಜಾರಿತು ಜುಯ್ಯನೆ ಕಾಲು। ಆಕೆಯದಾಯಿತು ಗೋಳು ಅಕ್ಕಿಯು ಹಕ್ಕಿಯ ಪಾಲು॥3॥

**ಮುದ್ದು ಹಕ್ಕಿ ಬಾಬಾ**

ಮುದ್ದು ಹಕ್ಕಿ ಬಾಬಾ। ನನ್ನ ಬಳಿಗೆ ಹಾರಿ ಬಾ। ಸವಿಯ ಹಾಡು ಹಾಡುಬಾ। ಕೊಡುವೆ ಕಾಳು ತಿನ್ನು ಬಾ। ನನ್ನ ಜೊತೆಯಲಾಡು ಬಾ॥1॥ ಪುಟ್ಟ ರೆಕ್ಕೆ ಬಡಿದು ಬಾ। ತಾಯಿ ಮಡಿಲ ಬಿಟ್ಟು ಬಾ। ಸಿಹಿಯ ಹಣ್ಣು ತಿನ್ನು ಬಾ। ನನ್ನ ಗೆಳೆಯನಾಗು ಬಾ॥2॥

**ಹಂಸವೆರಡು ನೀರಿನಲ್ಲಿ** **ರಾಗ:ಹಂಸನಾದ**

ಹಂಸವೆರಡು ನೀರಿನಲ್ಲಿ ಈಜುತ್ತಿದ್ದವು। ಒಂದನೊಂದ ಮದುವೆಯಾಗಲೊಪ್ಪಿಕೊಂಡವು। ಕಾಗೆ ಕಾವ್ ಕಾವ್ ಎಂದು ಬಳಗ ಕರೆಯಿತು। ಕಾವ್, ಕಾವ್, ಕಾವ್, ॥1॥ ಹದ್ದು ಬಂದು ಪುರೋಹಿತನ ಕೆಲಸ ಮಾಡಿತು। ಗುಬ್ಬಿ ಎದ್ದು ಗಂಧ ಹೂವು ಸಭೆಗೆ ನೀಡಿತು॥ ಕೋಗಿಲೆಯು ಕುಹುಕುಹು ಹಾಡು ಹೇಳಿತು। ಕೋ ೯ ೯ ಕೋ ೯ ೯ ಕೋ ೯ ೯॥2॥ ಪಾರಿವಾಳ ವಡವೆ ವಸ್ತ್ರ ಮುಯ್ಯಿ ಮಾಡಿತು॥ ಗಿಣಿಯು ತನ್ನ ಗೆಳತಿಯರೊಡನೆ ಆರತಿ ಮಾಡಿತು॥3॥ ನವಿಲು ತನ್ನ ಗರಿಯ ಬಿಚ್ಚಿ ನಾಟ್ಯವಾಡಿತು॥ ಅಂತು ಇಂತು ಎಲ್ಲಾ ಸೇರಿ ಮದುವೆಯಾಯಿತು॥ ಗೂಬೆ ಮಾತ್ರ ಬಾರದಂತೆ ದೂರ ನಿಂತಿತು॥4॥

## ಚಿಟ್ಟೆ

**ಅರಳಿದ ಹೂಗಳು**

ಅರಳಿದ ಹೂಗಳು ಕರೆಯುತಿವೆ। ಘಮಘಮ ಪರಿಮಳ ಬೀಸುತಿವೆ। ಕೆಂಪನೆ ಚಿಟ್ಟೆ ಕೈ ಯಿಂದ ಬಿಟ್ಟೆ। ಬೇಗನೆ ಹೂ ಬಳಿ ಸೇರುವೆಯಾ॥1॥ ಭರಭರ ಹಾರುವ ಸುಂದರ ನಿನ್ನೀ। ತೆರೆ ತೆರೆ ರಂಗಿನ ರೆಕ್ಕೆಯು ಚೆನ್ನ। ಹೂವನು ಸೇರಿ ಮಧುವನು ಹೀರಿ। ಬೇಗನೆ ಹೂ ಬಳಿ ಸೇರುವೆಯಾ॥2॥

**ಓ ಚಿಟ್ಟೆ ಬಣ್ಣದ ಚಿಟ್ಟೆ** **ರಾಗ:ಕುಂತಲವರಾಳಿ**

ಓ ಚಿಟ್ಟೆ ಬಣ್ಣದ ಚಿಟ್ಟೆ ಬಾ ಚಿಟ್ಟೆ ಬಣ್ಣದ ಚಿಟ್ಟೆ। ಓ ನಿನ್ನಂತೆ ಈ ಹೂವ ಬಣ್ಣ। ಆ ನೋಡೋಕೆ ಇದು ಎಂಥಾ ಚೆನ್ನಾ॥ಪ॥ ಆ ಗಗನ ನೀಲೀ ಬಣ್ಣದ್ದು। ಆ ಮುಗಿಲು ಬಿಳುಪು ಬಣ್ಣದ್ದು। ಈ ಎಲೆಯು ಹಸಿರು ಬಣ್ಣದ್ದು। ಈ ಕಮಲಾ

ಕೆಂಪು ಬಣ್ಣದ್ದು। ಎಲ್ಲೆಲ್ಲಿ ನೋಡು ಬರೀ ಬಣ್ಣವೇ। ಆ ಬಣ್ಣವೆಲ್ಲ ನಿನ್ನ ಮೈಲಿದೆ। ದೂರಿ ದೂರಿ ದುಮ್ಮ ಕ್ಕ ದೂರಿ।।1।। ನಾ ಬರುವೆ ದಿನವು ಸಂಜೇಲಿ। ನೀ ಹಾರಿ ಬಾರೋ ಗಾಳೀಲಿ। ನಾನಾರು ಎಂದು ನೀ ಬಲ್ಲೆ। ನಿನಗಾಗಿ ಇಲ್ಲಿ ನಾ ಬಂದೆನು। ಬಿಡಲಾರೆ ಇನ್ನು ನಾ ನಿನ್ನನು। ದೂರಿ ದೂರಿ ದುಮ್ಮ ಕ್ಕ ದೂರಿ।।2।।

### ಚಿಟ್ಟೆ2 ಎಲ್ಲಿಗೆ ಹೊರಟೆ

ಚಿಟ್ಟೆ ಚಿಟ್ಟೆ ಎಲ್ಲಿಗೆ ಹೊರಟೆ।ಮೈಗೆ ಬಣ್ಣ ಹಚ್ಚಿ ಜೋಡು ರೆಕ್ಕೆ ಬಿಚ್ಚಿ। ಎಲ್ಲಿಂದೆಲ್ಲಿಗೆ ಹೋಗುತ್ತಿ। ಹೊತ್ಕೊಂಡೇನೋ ತರುತ್ತಿ।।1।। ತಮ್ಮ ತಂಗಿ ತೋಟಕೆ ಹೊರಟೆ। ಹೂವಿನ ಮೇಲೆ ಕೂರ್ತೀನಿ। ರಸವನು ಕುಡಿದು ಬರ್ತೀನಿ। ಸಿಹಿ ಸಿಹಿ ಜೇನನು ಮಾಡ್ತೀನಿ।। ನಿಂಗು ಅದನು ಕೊಡ್ತೀನೀ।।2।।

### ಚಿಟ್ಟೆ2 ಬಣ್ಣದ ಚಿಟ್ಟೆ ನಿನ್ನ

ಚಿಟ್ಟೆ ಚಿಟ್ಟೆ ಬಣ್ಣ ಬಣ್ಣದ ಚಿಟ್ಟೆ। ನಿನ್ನ ಹಿಡಿಯೆ ಹಾರಿ ನಾ ಬಿದ್ದೆ ಕೆಟ್ಟೆ।। ಹಸಿರು ಗಿಡದ ಮೇಲೆ ಹಳದಿ ಬಣ್ಣದ ಚಿಟ್ಟೆ। ಹೆಜ್ಜೆ ಸದ್ದು ಕೇಳಿ ಮಾಯವಾಗಿ ಬಿಟ್ಟೆ।।1।। ಕೆಂಪು ಹೂವಿನ ಮೇಲೆ ಬಿಳಿಯ ಬಣ್ಣದ ಚಿಟ್ಟೆ। ಹೂವ ರಸವ ಹೀರಿ ಎಲ್ಲಿ ಹಾರಿ ಬಿಟ್ಟೆ।। ಬಣ್ಣದ ರೆಕ್ಕೆ ನಿನಗೆ ಚುಕ್ಕೆ ಅದರ ಒಳಗೆ। ಹಾರುವೆ ಎಲೆ ಮರೆಗೆ ನೋಡುವವರಿಗೆ ಎಂಥ ಬೆರಗೆ।।2।।

### ಚಿಟ್ಟೆ2 ಬಣ್ಣದ ಚಿಟ್ಟೆ ಎಲ್ಲಿಗೆ

ಚಿಟ್ಟೆ ಚಿಟ್ಟೆ ಬಣ್ಣದ ಚಿಟ್ಟೆ। ಎಲ್ಲಿಗೆ ದೂರಕೆ ಹಾರಿಬಿಟ್ಟೆ। ನಿನ್ನ ಹಿಡಿಯಲು ಇಷ್ಟಪಟ್ಟೆ। ಹಳ್ಳಕ್ಕೆ ಹೋಗಿ ಬಿದ್ದು ಬಿಟ್ಟೆ।।

### ಚಿಟ್ಟೆಯು ನಾನಾಗಿರೆ — ರಾಗ:ಶ್ರೀ

ಚಿಟ್ಟೆಯು ನಾನಾಗಿರೆ। ಚಿಟಿ ಚಿಟಿ ಚಿಟಿ ಎಂದು ಹಾರುವೆನು। ಪಟ ಪಟ ರೆಕ್ಕೆಯ ಬಡಿಯುವೆನು। ಥಳಥಳಥಳ ಎಂದು ಹೊಳೆಯುವೆನು।।1।। ಹೂವಿನ ಮೇಲೆ ಕೂರುವೆನು। ಹೂವಿನ ರಸಗಳ ಹೀರುವೆನು। ಜೇನುತುಪ್ಪವ ಮಾಡುವೆನು। ಬಾಯಲ್ಲಿ ನೀರನು ಸುರಿಸುವೆನು।।2।। ವಸಂತ ಕಾಲವು ನಮಗೆ। ಬಹಳ ಹರುಷವನೀಯುವುದು।। ಕೂತೆಡೆ ಕೂರದೆ, ಹಾರುವೆನು। ನಿಂತೆಡೆ ನಿಲ್ಲದೆ ಸುತ್ತುವೆನು।।3।।

### ತಿತ್‌ಲೀ ರಾಣೀ ತಿತ್‌ಲೀ

ತಿತ್‌ಲೀ ರಾಣೀ ತಿತ್‌ಲೀ ರಾಣೀ। ಕಿತ್‌ನೀ ಪ್ಯಾರಿ ಕಿತ್‌ನೀ ಸಯಾನೀ।।ಪ।। ರಂಗಬಿರಂಗೆ ಪಂಖ್ ಸಜೀಲೇ। ಲಾಲ್, ಗುಲಾಬಿ, ನೀಲೇ ಪೀಲೇ।। ಫೂಲ್, ಫೂಲ್ ಪರ ಜಾತಿ ಹೋ। ಮೀಠಾ ಮೀಠಾ ರಸ್ ಪೀಕರ್ ಉಠ್ ಜಾತೀ ಹೋ।।1।। ಅಪನೇ ಕೋಮಲ್ ಪಂಖ್ ದಿಖಾತೀ। ತಿತ್‌ಲೀ ರಾಣೀ ತಿತ್‌ಲೀ ರಾಣೀ। ಕಿತ್‌ನೀ ಸುಂದರ್ ತಿತ್‌ಲೀ ರಾಣೀ। ಇಸ್ ಬಗಿಯಾ ಮೇ ಆನಾ ರಾಣೀ। ತಿತ್‌ಲೀ ರಾಣೀ ತಿತ್‌ಲೀ ರಾಣಿ।।2।।

### ದೂರ್ ದೇಶ್ ಸೇ ಆಯೀ

ದೂರ್ ದೇಶ್ ಸೇ ಆಯೀ ತಿತಲೀ। ಚಂಚಲ್ ಪಂಖ್ ಹಿಲಾತೀ। ಫೂಲ್- ಫೂಲ್ ಪರ್ ಕಲೀ - ಕಲೀ ಪರ್। ಇತರಾತೀ ಇಠಲಾತೀ।। ಯಹ್ ಸುಂದರ್ ಫೂಲೋಂಕೀ ರಾಣೀ। ಧುನ್ ಕೀ ಮಸ್ತ್ ದಿವಾನೀ। ಹರೇ ಭರೇ ಉಪವನ್ ಮೇ ಆಯೀ। ಕರ್‌ನೇ ಕೋ ಮನ್‌ಮಾನೀ।। ಕಿತನೇ ಸುಂದರ್ ಪರ್ ಹೈ ಇಸ್‌ಕೇ। ಜಗ್ ಮಗ್ ರಂಗ್ ರಂಗೀಲೇ। ಲಾಲ್ ಹರೇ ಬೈಜನೀ ವಸಂತಿ। ಕಾಲೇ ನೀಲೇ ಪೀಲೇ।। ಕಹಾ ಕಹಾಂಸೇ ಫೂಲೋಂ ಕೇ ರಂಗ್। ಚುರಾ ಚುರಾ ಕರ್ ಲಾಯೀ। ಆತೇ ಹೀ ಇಸನೇ ಉಪವನ್ ಮೇ। ಕೈಸೀ ಧೂಮ್ ಮಚಾಈ।। ಡಾಲ್ - ಡಾಲ್ ಪರ್

ಪಾತ್ - ಪಾತ್ ಪರ್। ಯಹ್ ಉಡ್‌ತೀ ಫಿರ್‌ತೀ ಹೈ। ಕಭೀ ಖೂಬ್ ಊಂಚೀ ಚಢ್ ಜಾತೀ। ಫಿರ್ ನೀಚೇ ಗಿರ್‌ತೀ ಹೈ॥ ಕಭೀ ಫೂಲ್‌ಕೇ ರಸ್ ಪರಾಗ್ ಪರ್। ರೂಕ್ ಕರ್ ಜೀ ಬಹ್‌ಲಾತೀ। ಕಭೀ ಕಲೀ ಪರ್ ಬೈಠ್ ನ ಜಾನೇ। ಗುಪ್ ಚುಪ್ ಕ್ಯಾ ಕಹ್ ಜಾತೀ॥

**ನಿನ್ನ ಅಂದವೋ ಬಲು ಚೆಂದವೋ** **ರಾಗ: ಖರಹರಪ್ರಿಯ, ಕೆ. ರಾಜಲಕ್ಷ್ಮಿ**

ನಿನ್ನ ಅಂದವೋ ಬಲು ಚೆಂದವೋ। ನೋಡುವವರ ಮೈ ಮನಸಿಗಾನಂದವೋ। ಬದುಕು ಬಣ್ಣ ಮಯವೆಂಬ ಸಂಕೇತವೋ। ನಗು ನಗುತ ಹಗುರವಾಗೆಂಬಾದೇಶವೋ॥ಪ॥ ಎಲ್ಲರೊಂದೇ ಎಂಬ ಭಾವದಲ್ಲಿ। ಸಕಲ ಪುಷ್ಪಗಳಲಿ ನಲಿವೆ। ಕ್ಷಣಿಕ ಜೀವನದ ಸಾರ್ಥಕತೆ ಪಡೆ ಎಂದೇ? ನಿನಗೆ ಬಣ್ಣ ಬಳಿದ ಆ ಕಲಾವಿದನೆಲ್ಲಿಹನು? ಅಂಥ ಅಪರೂಪದ ಕುಂಚ ದೊರಕುವುದೆತ್ತ?॥1॥ ಓಡೋಡಿ ಬಂದು ಓಲಾಡುತ್ತಾ। ಓತ ಪ್ರೇಮ ವನೋದಿಸುವೆ। ನೀನುಡಿವ ಉಲಿಯೋ ಕಿವಿನುಡಿಯೋ। ತೊದಲ್ನುಡಿಯೋ। ಪರಸ್ಪರ ಕೇಳಿಸದು ನನಗೆ ನಿನ್ನುಲಿಯ ಮರ್ಮ॥2॥ ತಪ್ಪು ಹೆಜ್ಜೆಯಲಿಹ ನನಗೆ ಅದರ ಅರ್ಥ ಅರಿವ-ಅರಿವೆಲ್ಲಿ? ಪ್ರಿಯಪ್ರಿಯತಮೆಯರ ಬಾಹು ಬಂಧನದಂತೆ। ನಿನ್ನ ನಡೆ ನುಡಿ ನನಗೆ ಮೂಕ ವಿಸ್ಮಯವನೊಡ್ಡಿದೆ॥3॥ ಬಟ್ಟೆಯಲಿ ಬಸವಳಿದು ಬೆಂದರೂ ಸಾಗುತಿಹೆ ನೀ ಗುರಿಯತ್ತ। ಬದುಕು ಭಾರ, ಭವಣೆ, ಭರವಸೆಗಳ ಭಾವೈಕ್ಯದತ್ತ? ಪ್ರೀತಿ ಆದರಗಳ ಸವಿಯುಣಿಸಿ ಮೈಮರೆತು ಮತ್ತಿನಲಿ ಮುತ್ತಿಡುವೆ॥4॥ ಅಕ್ಕಪಕ್ಕ ಅಲ್ಲಲ್ಲಿ ಅನುರಾಗವಾಗಿ ಆರಾಧಿಸಲ್ಪಡುವೆ ಪವಿತ್ರಾತ್ಮನೆ। ನಲ್ಲ ನಲ್ಲೆಯರ ನಡುವಿನ ನಲ್ನುಡಿಯೋ, ವೈರಾಗ್ಯದ ಮಾಯೆಯೋ। ಪಾತರಗಿತ್ತಿಯಾಗಿ ಪ್ರೀತಿ ಪ್ರೇಮಗಳ ಪಿಸುಮಾತ ಪ್ರತೀಕವಾಗಿಹೆ ॥5॥

**ನೋಡೇ ನಲಿವುದು ಬಣ್ಣದ** **ರಾಗ: ರೇವತಿ**

ನೋಡೇ ನಲಿವುದು ಬಣ್ಣದ ಮಧುಪ। ಕೆದಕುತ ಮನದಲಿ ಇನಿಯನ ನೆನಪ॥ಪ॥ ಗುಲಾಬಿ ಹೂವಿನ ಕೆಂಪನು ರಮಿಸುತ। ಕೆಂಪಿನ ಒಳಗಿನ ರಸವನು ಸವಿಯುತ। ದಳದಳದೊಳಗೆ ಅಧರದ ಕಚಗುಳಿ। ಇರಿಸುತ ಬರುವುದು ಮತ್ತೆ ಬಳಿ॥1॥ ನದಿಯಲಿ ಮೀನಿನ ಮಿಂಚಿನ ಚಲನವ। ನಭದಲಿ ಹಕ್ಕಿಯ ಸಂಜೆಯ ಕಲರವ। ವನವನದೊಳಗೆ ಚಿಮ್ಮುವ ನೀರ್‌ಸುಳಿ। ಮೀರುತ ಬರುವುದು ಮತ್ತೆ ಬಳಿ॥2॥ ಗುಲಾಬಿ ಕೆಂಪೇ ಒಲವಿನ ಕುರುಹೇ। ಹಕ್ಕಿಯ ಕಲರವ ಭಾವವನರುಹೇ। ಹನಿಹನಿಯೊಳಗೆ ಪ್ರೀತಿಯ ಓಕುಳಿ। ಸಿಡಿಸುತ ಬರುವುದು ಮತ್ತೆ ಬಳಿ॥3॥

**ಪಾತರಗಿತ್ತಿ ಪಕ್ಕಾ ನೋಡಿದೇನಽ ಅಕ್ಕಾ** **ರಾಗ: ಮೋಹನ, ಏಕತಾಳ**

ಪಾತರಗಿತ್ತಿ ಪಕ್ಕಾ ನೋಡಿದೇನಽ ಅಕ್ಕಾ। ಹಸಿರು ಹಚ್ಚಿ ಚುಚ್ಚಿ ಮೇಲಽಕರಿಸಿಣ ಹಚ್ಚಿ। ಹೊನ್ನ ಚುಕ್ಕಿ ಚುಕ್ಕಿ ಇಟ್ಟು ಬೆಳ್ಳಿ ಅಕ್ಕಿ, ಸುತ್ತೂ ಕುಂಕುಮದೆಳಿ ಎಳೆದು ಕಾಡಿಗೆ ಸುಳಿ। ಗಾಳೀ ಕೇನೀಲೇನಽ ಮಾಡಿದ್ದಾರ ತಾನ। ನೂರು ಆರುಪಾರು ಯಾರು ಮಾಡಿದ್ದಾರು। ಏನು ಬಣ್ಣ ಬಣ್ಣ ನಡುವೆ ನವಿಲಗಣ್ಣ। ರೇಶಿಮೆ ಪಕ್ಕನಯ ಮುಟ್ಟಲಾರೆ ಭಯ। ಹೂವಿನ ಪಕಳಿಗಿಂತ। ತಿಳಿವು ತಿಳಿವು ಅಂತ? ಹೂವಿಗೆ ಹೋಗಿ ತಾವ ಗಲ್ಲಾ ತಿವಿತಾವ। ಬನ ಬನದಾಗ ಆಡಿ। ಪಕ್ಕಾ ಹುಡಿ ಹುಡಿ। ಹುಲ್ಲು ಗಾವುಲದಾಗ। ಹಳ್ಳೀ ಹುಡುಗೀ ಹಾಂಗ। ಹುಡದೀ ಹುಡದೀ ಭಾಳ। ಆಟಕ್ಕಿಲ್ಲ ತಾಳ। ಕಿರೇ ಸೂರೇ ಪಾನ। ದಲ್ಲಿ ಧೂಳಿಸ್ನಾನ॥ ತುರುಬಿ ತುಂಬಿ ತೋಟದಲ್ಲಿ ದಿನ ಊಟ। ಕಳ್ಳಿ ಹೂವ ಕಡಿದು। ಹೂತುಟನೀರ ಕುಡಿದು। ನಾಯೀ ಛತ್ತರಿನ್ಯಾಗ। ಕೂತು ಮೋಜಿನಾಗ। ರುದ್ರಗಂಟಿ ಮೂಸಿ ವಿಷ್ಣುಗಂಟಿ ಹಾಸಿ। ಹೇಸಿಗೆ ಹೂವ ಬಳಿಗೆ ಹೋಗಿ ಒಂದಽಗಳಿಗೆ। ಮದುಗುಣಿಕಿಯ ಮದ್ದು। ಹುರುಪಿಗಿಷ್ಟು ಮೆದ್ದು॥ ಕಾಡಗಿಡ ಗಂಟಿ ಅಂಚಿಗಂಟಿಗಿಂಟಿ। ಸೀಗಿಬಳ್ಳಿ ತಾಗಿ ಪಕ್ಕಾ ಬೆಳ್ಳಗಾಗಿ, ಗೋರಟಿಗೆಗೆ ಶರಣ। ಮಾಡಿದೂರಿಂದಽನ। ಮಾಲಿಂಗನ ಬಳ್ಳಿ ತೂಗೂ ಮಂಚದಲ್ಲಿ। ತೂಗಿ ತೂಗಿ ತೂಗಿ ದಣಿಧಾಂಗ ಆಗಿ, ಬೇಲೀ ಬಳ್ಳಿಯೊಳಗ। ಅದರ ನೆರಳ ತೆಳಗ, ನಿದ್ದಿಗುಳ್ಯಾಡಿ ಪಗಡಿ ಪಕ್ಕಾ ಆಡಿ, ಗುಲಬಾಕ್ಷಿಯ ಹೂವ। ಕುಶಲ ಕೇಳತಾವ। ಹುಡಿಯ ನೀರಿನ್ಯಾಗ ತುಳಗಿಸುತ್ತ

ಬ್ಯಾಗ। ಹಡಿಯೆ ಬೀಜ ಗಂಡು। ಹಾರಾ ಹರಕಿ ಅಂದು। ಅಡವಿ ಮಲ್ಲಿಗಿ ಕಂಡು। ಅದರ ಕಂಪನುಂಡು। ಹುಲ್ಲ ಹೊಲಕ ಬಂದು। ಗುಬ್ಬಿ ಬೆಳಸಿ ತಿಂದು। ಇಷ್ಟು ಎಲ್ಲಾ ಮಾಡಿ। ಸಪ್ಪಳಿಲ್ಲದಾಡಿ।। ತಾಳ ಚವ್ವ ಚಕ್ಕ। ಕುಣಿತ ತಕ್ಕ ತಕ್ಕ। ಆಸಿ ಹಚ್ಚಿಹ್ಯಾಂಗ। ಕಂಡು ಸಿಕ್ಕಿಧಾಂಗ। ಸಿಕ್ಕಲ್ಹೋಡತಾವ। ಅಲ್ಯೂ ಇಲ್ಯೂ ಅವ್. ಕಾಣದೆಲ್ಹೋ ಮೂಡಿ। ಬಂದು ಗಾಳಿ ಗೂಡಿ, ಇನ್ನು ಎಲ್ಲಿ ಗೋಟ? ನಂದನದ ತೋಟ।।

### ಪುಟ್ಟ ಚಿಟ್ಟೆ2 ಎಲ್ಲಿಗ್ಹೋಗ್ತೀಯಾ

ಪುಟ್ಟ ಚಿಟ್ಟೆ ಪುಟ್ಟ ಚಿಟ್ಟೆ ಎಲ್ಲಿಗ್ಹೋಗ್ತೀಯಾ। ರೆಕ್ಕೆ ಬಿಚ್ಚಿ ಬಣ್ಣ ಹಚ್ಚಿ ಎಲ್ಲಿಗ್ಹೋಗ್ತೀಯಾ।।1।। ಸಣ್ಣ ಮಗು ಸಣ್ಣಮಗು ತೋಟಕ್ಕೆ ಹೋಗ್ತೀನಿ। ಬಣ್ಣ ಬಣ್ಣದ ಹೂವ ಕಂಡು ಅಲ್ಲಿ ಕೂರ್ತೀನಿ।।2।।। ಪುಟ್ಟಚಿಟ್ಟೆ ಹೂವಿನ್ಮೇಲೆ ಏಕೆ ಕೂರ್ತೀಯಾ। ಪುಟ್ಟದೊಂದು ಕುರ್ಚಿ ಕೊಡ್ತೀನಿ ಇಲ್ಲಿ ಬರ್ತೀಯಾ।।3।। ಸಣ್ಣ ಮಗು ಹೂವಿನ ಮೇಲೆ ಸುಮ್ನೆ ಕೂರಲ್ಲ। ಬಣ್ಣದ ಹೂವಿನರಸವ ಹೀರ್ತೀನಿ ಇಲ್ಲಿ ನಿಲ್ಲಲ್ಲ ಇಲ್ಲಿ ನಿಲ್ಲಲ್ಲ।।4।।

### ಬಣ್ಣ ಬಣ್ಣದ ಚಿಟ್ಟೆ

ಬಣ್ಣ ಬಣ್ಣದ ಚಿಟ್ಟೆ। ನಿನ್ನ ಹಿಡಿಯೆ ಹಾರಿ। ನಾ ಬಿದ್ದೆ ಕೆಟ್ಟೆ।।1।। ಹಸಿರು ಗಿಡದ ಮೇಲೆ ಹಳದಿ ಬಣ್ಣದ ಚಿಟ್ಟೆ। ಹೆಜ್ಜೆ ಸದ್ದು ಕೇಳಿ ಮಾಯವಾಗಿ ಬಿಟ್ಟೆ।।2।। ಕೆಂಪು ಹೂವಿನ ಮೇಲೆ। ಬಿಳಿಯ ಬಣ್ಣದ ಚಿಟ್ಟೆ। ಹೂವ ರಸವ ಹೀರಿ। ಎಲ್ಲಿ ಹಾರಿ ಬಿಟ್ಟೆ।।3।। ಬಣ್ಣದ ರೆಕ್ಕೆ ನಿನಗೆ। ಚುಕ್ಕೆ ಅದರ ಒಳಗೆ। ಹಾರುವೆ ಎಲೆ ಮರೆಗೆ। ನೋಡುವವರಿಗೆ ಎಂಥ ಬೆರಗೆ।।4।।

### ಬಣ್ಣದ ಚಿಟ್ಟೆ ಬಾಬಾ ಚಿಟ್ಟೆ

ಬಣ್ಣದ ಚಿಟ್ಟೆ ಬಾಬಾ ಚಿಟ್ಟೆ। ಮಕ್ಕಳ ಕಣ್ಣು ಸೆಳೆಯುವ ಚಿಟ್ಟೆ। ಹೂವಿಂದ ಹೂವಿಗೆ ಹಾರುವ ಚಿಟ್ಟೆ। ಹೂಗಳ ರಸವ ಹೀರುವ ಚಿಟ್ಟೆ। ಬಾಬಾ ಚಿಟ್ಟೆ ಬಣ್ಣದ ಚಿಟ್ಟೆ।।1।। ನಾನಾ ರಂಗಿನ ಬೆಡಗಿನ ಚಿಟ್ಟೆ। ರಂಗಿನ ರೆಕ್ಕೆ ಬಡಿಯುವ ಚಿಟ್ಟೆ। ಛಂಗನೆ ಹಾರುವ ಚಿನ್ನಾರಿ ಚಿಟ್ಟೆ। ಮಕ್ಕಳಸಂಗ ಕುಣಿಯುವ ಚಿಟ್ಟೆ। ಬಾಬಾ ಚಿಟ್ಟೆ। ಬಣ್ಣದ ಚಿಟ್ಟೆ।।2।।

### ಬಾಬಾ ಚಿಟ್ಟೆ ಬಣ್ಣದ ಚಿಟ್ಟೆ

ಬಾ ಬಾ ಚಿಟ್ಟೆ ಬಣ್ಣದ ಚಿಟ್ಟೆ। ಕಣ್ಣಿಗೆ ಚೆಂದ ಕಾಣುವ ಚಿಟ್ಟೆ। ಹೂವಿಂದೂವಿಗೆ ಹಾರುತ ನೀನು। ಜೀವನ ಸಾಗಿಸುವೆ। ಕಾಮನ ಬಿಲ್ಲಿನ ಬಣ್ಣಗಳೇಳನು। ನೀನು ಪಡೆದಿರುವೆ।।1।। ಬೆಡಗಿನ ಚಿಟ್ಟೆ ನೋಡಲು ಬಂದರೆ ಬಿಂಕವಾ ತೋರುವೆಯಾ। ಹಿಡಿಯಲು ಬಂದರೆ ಅಲ್ಲಿಂದಿಲ್ಲಿಗೆ। ಸಿಕ್ಕದೆ ಹಾರುವೆಯಾ ಚಿಟ್ಟೆ ಸಿಕ್ಕದೆ ಹಾರುವೆಯಾ।।2।।

### ಹಾರಿತೊಂದು ಚಿಟ್ಟೆ

ಹಾರಿತೊಂದು ಚಿಟ್ಟೆ। ಇದೋ ಹಿಡಿದು ಬಿಟ್ಟೆ। ಅಮ್ಮ ನೋಡಿ ಕೂಗಲು। ಅದನು ಬಿಟ್ಟು ಬಿಟ್ಟೆ।।

### ಹೂವ ಹುಡುಕಿ ಹಾರುತ — ರಾಗ:ಅಭೇರಿ

ಹೂವ ಹುಡುಕಿ ಹಾರುತ। ಹೂ ಮಧುರಸ ಹೀರುತ। ಚಂದದಿಂದ ನಲಿಯುವ। ಮುದ್ದು ಮುದ್ದು ಚಿಟ್ಟೆ ಬಾಬಾ।।ಪ।। ರೆಕ್ಕೆ ಮೇಲೆ ಚುಕ್ಕೆ ಇರುವ। ಮೂತಿಯಲ್ಲಿ ಕಣ್ಣು ಇರುವ। ಮುದ್ದು ಚಿಟ್ಟೆ ಬಾಬಾ।।1।। ನಿನ್ನ ಹಿಂದೆ ನಾನು ಬರುವೆ। ನನ್ನ ಕಂಡು ಹಾರೆ ನೀನು। ಆಗ ನಗುತ ನಲಿವೆ ನಾನು। ಮುದ್ದು ಚಿಟ್ಟೆ ಬಾಬಾ।।2।। ನಿನ್ನ ಬಣ್ಣ ಕೆಂಪು ಆಗಿ। ನನ್ನ ತೋಟ ನೆಲೆಯು ಆಗಿ। ನೀನು ನನ್ನ ಗೆಳೆಯನಾಗಿ। ಇರುವಯಂತೆ ಓಡಿ ಬಾ।।3।।

## ಭೃಂಗ

### ಅರಳಿದ ಪುಷ್ಪದ ಪರಾಗ ರಾಗ:ಕಲ್ಯಾಣಿ

ಅರಳಿದ ಪುಷ್ಪದ ಪರಾಗ ಸ್ಪರ್ಶಕೆ। ಹಾರುತ ಬಂದಿತು ದುಂಬಿ। ತನುಮನ ತುಂಬಿದ ದುಂಬಿ॥ಪ॥ ದುಂಬಿಯ ಚುಂಬನ ಸ್ಪರ್ಶದ ನೋವಿಗೆ। ಪುಷ್ಪವು ನರಳಿತು ಹಿತದಲ್ಲಿ। ನರಳಿತು ಹಿತದಲಿ ತನುಮನವಾಗಿ॥1॥ ಹಿತದಲಿ ನರಳಿದ ಪುಷ್ಪದ ಮಧುವನು। ಹೀರಿದ ದುಂಬಿಯು ಹಾಡಿತು। ದುಂಬಿಯು ಹಾಡಿತು ತನುಮನ ದಣಿದು॥2॥ ಮಧುವನು ನೀಡಿದ ಬಳಲಿದ ಪುಷ್ಪವು। ನಲಿಯುವ ದುಂಬಿಯ ನೋಡಿತು। ದುಂಬಿಯ ನೋಡಿತು ಧನ್ಯತೆ ತಾಳಿ॥3॥

### ಬಾ ಭೃಂಗವೆ ಬಾ ರಾಗ:ಸಾರಂಗ

ಬಾ ಭೃಂಗವೆ ಬಾ ವಿರಾಗಿಯಂದದಿ ಭ್ರಮಿಸುವೆ ನೀನೇಕೇ। ಕಂಪಿನ ಕರೆಯಿದು ಸರಾಗವಾಗಿರೆ। ಬೇರೆಯ ಕರೆ ಬೇಕೇ॥ಪ॥ ಬರಲಿಹ ಕಾಯಿಯ ಪಾಡಿನ ರುಚಿಯೂ। ಇದರೊಳು ಅಡಗಿಹುದು। ನಾಳಿನ ಹಣ್ಣಿನ ರಸವಿಲ್ಲಿಯ ಮಕರಂದದೊಳಡಗಿಹುದು॥1॥ ಕವನ ಕೋಶದಿ ಕಮಲಗರ್ಭದಲಿ ಪರಾಗ ಅರಳಿಹುದು। ನಿನ್ನ ಮುಖ ಸ್ಪರ್ಶವೂ ಸಾಕು ಹೊಸ ಸೃಷ್ಟಿಯೆ ಬರಬಹುದು॥2॥

### ಭವ್ಯ ಭಾವನೆಗಳ ಭರಿಸುವ ಕೆ. ರಾಜಲಕ್ಷ್ಮಿ

ಭವ್ಯ ಭಾವನೆಗಳ ಭರಿಸುವ ಭ್ರಮರವೆ। ಬದುಕಿನಲಿ ಭವಣೆ ಎಂಬ ಬಕಾಸುರನಿದ್ದರೂ। ಭವ ಬಂಧನಕೆ ಭರವಸೆಯನೀಯುತ್ತ। ಪುಷ್ಪಗಳು ನಿನ್ನ ಓಲೈಸೆ ಸೊಬಗ ಸೂಸುತ್ತ॥1॥ ಬಣ್ಣ ಬಣ್ಣದ ಚಿತ್ತಾರ ಕಲ್ಪಿಸುತ ಬನಬನವನರಸಿ। ಭವಭವಕೆ ಮುಂದೂಡಿ ಭ್ರಮೆಯ ಬಣಬಣ ಎನಿಸಿ। ಸುರಭಿಯೆ ಸಂಗೀತವ ಸವಿದು ದುಂದುಂ ಎಂದ್ಹಾಡುತ್ತಾ। ಮಧುವನರಸಿ ಝೇಂಕರಿಸಿ ಮಧುಕರನೆಂಬ ಹೆಸರಹೊತ್ತೆ॥2॥ ನೀ ರಸವ ಹೀರುತ್ತ ನೀರಸವೆಂದು ಭ್ರಮಿಪ ನೀರೆಯರ ನಿಲಿಸಿ। ದುಂದುಭಿಯ ಮೊಳಗಿಸುತ ಬರಿದಾದ ಬಯಲು ಬಯಕೆಯನರಸಿ। ದುಂಬಿ ಸುಖದಿ ಬೃಂದಾವನದಿ ನಲಿಯುತ್ತ ಕಪ್ಪು ಕಸ್ತೂರಿಯಂತೆ। ಮಿಂಚುವ ಚಂಚಲತೆಯ ಚೆಲುವನೇ ಬಾ ಹಿಗ್ಗಿನಲಿ ನರ್ತಿಸುತೆ॥3॥ ಕಲ್ಲು ಮುಳ್ಳುದಾರಿಯಲಿ ಚೈತನ್ಯದ ಚಿಲುಮೆಯೆ। ಚಿನ್ಮಯನ ಅರಸುತ್ತಾ ಆಶಾ ಸೌಧದೆದುರಿನಲಿ। ಮುನ್ನಡೆಯೇ। ಮಾನವನಿಗೆ ದಾರಿದೀಪವೆನ್ನುತ್ತಾ॥4॥ ಭೀತಿಯಲಿ ಬಸವಳಿದು ಬೆನ್ನೇರಿದ ಬಯಕೆಗೆ। ದಿವ್ಯ ಚೇತನವನೀವೆ ಕರ್ಮಯೋಗಿಯೇ ವಿಶ್ವಮಾರ್ಗಿಯೇ ಭಗ್ನಗೊಂಡ ಜೀವನಕೆ ಭುಜಬಲವೆ ಭೃಂಗವೆ॥5॥

### ಹಾರಿ ಬಂತು ದುಂಬಿ

ಹಾರಿ ಬಂತು ದುಂಬಿ। ನನ್ನ ಕಣ್ಣು ತುಂಬಿ। ಯಾಕೆ ಬಂದೆ ದುಂಬಿ। ನನ್ನ ಮುದ್ದು ದುಂಬಿ॥

## ಜೇನುಹುಳು

### ಜೇನುಹುಳುವೆ

ಜೇನುಹುಳುವೆ ಜೇನುಹುಳುವೆ ಏನುಮಾಡುತಿರುವೆ? ಹೂವಿನಿಂದ ಗಂಧ ತಂದು ಜೇನು ಮಾಡುತಿರುವೆ॥1॥ ಜೇನು ಹುಳುವೆ ಜೇನುಹುಳುವೆ। ಕಚ್ಚಲೇಕೆ ಬರುವೆ? ಮಕ್ಕಳೆಲ್ಲ ಕೊಕ್ಕೆಯಿಂದ ಚುಚ್ಚುತಿಹರು ಮಗುವೆ॥2॥ ಜೇನು ಹುಳುವೆ ಜೇನು ಹುಳುವೆ। ಜೇನು ತುಪ್ಪ ನೀಡು। ಜಾಣಮಗುವೆ ಕೊಡುವೆ ನಿನಗೆ ಹೊಡೆಯ ಬೇಡ ಗೂಡು॥3॥

## ಸೊಳ್ಳೆ

### ಬೇಸಿಗೆ ಕಾಲ ಬಂತಪ್ಪ

ಬೇಸಿಗೆ ಕಾಲ ಬಂತಪ್ಪ। ಸೊಳ್ಳೆಗಳ ಹಾವಳಿ ಹೆಚ್ಚಪ್ಪ। ಎಲ್ಲರ ಬಿಡದೆ ಕಚ್ಚಪ್ಪ। ರಕ್ತವ ಬೇಗ ಹೀರಪ್ಪ॥

## ನೊಣ

**ಕ್ಷಣ ಒಂದು ನೊಣ ಕೂಡುವುದು** **ರಾಗ:ಸಾರಂಗ**

ಕ್ಷಣ ಒಂದು ನೊಣ ಕೂಡುವುದು-ಆಯುಷ್ಯದ ಅನ್ನದ ಮೇಲೆ। ಅದು ಇಟ್ಟ ಕೊಳೆ ತಿಂದು ಬದುಕುವರು ಯಾರಿಲ್ಲಿ? ಹತ್ತಾರು ರೋಗಗಳಿಗೆ ಒಂದು ನೊಣ ಒಂದು ಕ್ಷಣ॥1॥ ತಾಯಿ ತಂದೆ ಇದ್ದವರು ಹೇಳುವರು ಕ್ಷಣ(ನೊಣ)ದ ಮಹಾತ್ಮ್ಯೆ। ಕ್ಷುದ್ರರೆಕ್ಕೆಯ ಕೀಟ ಇಷ್ಟೊಂದು ಬಲಶಾಲಿ ಎಂದು। ಕೊಂಡಾಡುವರು ಕೀಟ ಜಾತಿಯನು॥2॥ ಬಂದು ಅಂಗೈಮೇಲೆ ಕುಳಿತಿರುವ ಕ್ಷಣ(ನೊಣ)ವನ್ನು। ಮತ್ತೊಂದು ಕೈಯಿಂದ ಬಡಿದರಾಯಿತು ಎಂದು। ಘಟ್ಟನೆ ಬಡಿದೆನು ಹಾರಿಹೋಯಿತು। ಕ್ಷಣ ಸತ್ತುಬಿದ್ದ ನೊಣ "ಸತ್ತವನ ಆತ್ಮಕ್ಕೆ ಶಾಂತಿಸಿಗಲಿ"॥3॥

## ಮಿಂಚುಹುಳು

**ಎಲೆಲೆ ಬೆಳಕಿನ ಬಿತ್ತೆ, ಇರುಳ ಮೂಗಿನ ನತ್ತೆ** **ರಾಗ:ಕುಂತಲವರಾಳಿ**

ಎಲೆಲೆ ಬೆಳಕಿನ ಬಿತ್ತೆ, ಇರುಳ ಮೂಗಿನ ನತ್ತೆ। ಹುಳುವೆಂದು ಹೆಸರಿಟ್ಟು ಹಳಿಯುವರೆ ನಿನ್ನ? ಹುಳುವಾಗಿ ಹುಟ್ಟಿ, ಲೋಕವ ಬೆಳಗುತಿರಲಿಂತು। ಒಳಮೈಯೊಳಾವ ಮಾಯದ ರೂಪೊ ನಿನಗೆ? ಆರ ಭಾವನೆಯೊಸರ ಬಿಂದುವಾಗಿಹೆ, ನೀನು? ಆರೆದೆಯ ತಾರ ಹಾರದ ಬಿಳಿಯ ಮುತ್ತು? ಆರ ದುಗುಡದ ಕಿಡಿಯು? ಆರ ಬಯಕೆಯ ಕುಡಿಯು। ಆರ ಎವೆಯಿಂ ಜಾರಿ ಬಿದ್ದ ಕಂಬನಿಯು? ಭಾವಶುದ್ಧಿಗೆ ನೆಲೆವನಲೆವ ಭಾವಿಕನೇನು? ಜೀವನಕೆ ಸೆರೆ ಬಿದ್ದ ದೇವನೇ ನೀನು? ಸಾವಿನಲಿ ಕುಡಿಗೊಂಡ ಜೀವದಂಕುರವೇನು? ಆವ ಹೆಸರದು ನಿನಗೆ? ನಿನ್ನ ಪರಿಯೇನು? ಆವ ನಾಡಿಂದೆ ಚಿರಪಥಿಕನಾಗುತೆ ಬಂದೆ? ಅವನಪ್ಪಣೆಗಿರುಳ ಕಾವಲಲ್ಲಿ ನಿಂದೆ। ಆವ ಪರಿಧಿಯ ಸುತ್ತ, ಆರ ನೀನರಹುತಿಹೆ? ಆವ ನೇಮವು ನಿನಗೆ ಕತ್ತಲೆಯ ಹಿಂದೆ? ಮಾತಾಡೆ; ಸರಗೂಡೆ; ಉಸಿರಾಡೆ; ಮೌನದೊಳೆ ಮಾತ ನೀ ಮೊಳಗಿಸುವೆ ಜಗವ ಬೆಳಗಿಸುವೆ ಪ್ರೀತಿಭಾಷೆಯು ಬೇರೆ ಮಾತಿನರ್ಥವು ಬೇರೆ ಹೂತಿಹುದು ನಿನ್ನ ನುಡಿ ನಿನ್ನ ಮಿಂಚಿನೊಳೆ॥ ಮಿರುಗತಿಹೆ ಕೊರಗುತಿಹೆ ನಾಚುತಿಹೆ ನಗುತಲಿಹೆ। ಪರಿಪರಿಯ ವಿಷಮ ಭಾವದೊಳೇಳ್ವೆ ಬೀಳ್ವೆ। ಬರೆವೆ ಹುಸಿ ಮಬ್ಬಿನಲಿ ನನ್ನಿ ಎಕ್ಕರಗಳನು। ಬರೆದುದನು ತೊಡೆವ ನನ್ನಿಯ ಹುಸಿಯೆ ಮಾಳ್ಪೆ ಧರೆಯ ನಿದ್ದೆಯ ಬಲೆಗೆ ಬಿದ್ದ ಮೀನೆಲೆ ನೀನು। ಇರುಳ ಕನಸಿನ ಸೀರೆ ನಿರಿಯ ಜರಿ ನೀನು। ಮರೆವೆ ಚೆಲ್ಲಿದ ತಿಳಿವಿನೊಂದು ತುಂತುರು ನೀನು। ಆರಿಕೆಯಲಿ ಹುಳು ನಿಜದಿ ಮೇಲ್ನಾಡ ಹುರುಳು॥

## ಇರುವೆ

**ಇರುವೆ2 ಕರಿಯ ಇರುವೆ**

ಇರುವೆ ಇರುವೆ ಕರಿಯ ಇರುವೆ। ಎಲ್ಲಾ ಕಡೆಯಲು ನೀನಿರುವೆ। ಮುಂದಿನ ದಿನಗಳ ಹಿಂದೆಯೇ। ನಿನ್ನಯ ಆಹಾರವ ಕೂಡಿಸುವೇ । ಒಗ್ಗಟ್ಟಿನಲ್ಲಿ ಬಲವಿದೆಯೆಂದು ಗುಂಪಿನಲ್ಲಿ ನೀನಿರುವೆ॥

**ಇರುವೆ2 ಕೆಂಪಿರುವೆ**

ಇರುವೆ ಇರುವೆ ಕೆಂಪಿರುವೆ। ನನ್ನನು ಏಕೆ ಕಚ್ಚಿರುವೆ। ಇದೊಂದು ಸಲ ನಿನ್ನ ಬಿಟ್ಟಿರುವೆ। ಇನ್ನೊಮ್ಮೆ ಕಚ್ಚಿದರೆ ಕೊಂದುಬಿಡುವೆ॥

**ಇರುವೆ2 ನೀವೆಲ್ಲಿ ಇರುವೆ** **ರಾಗ:ಶಂಕರಾಭರಣ**

ಇರುವೆ ಇರುವೆ ನೀವೆಲ್ಲಿ ಇರುವೆ? ಸಕ್ಕರೆ ಕೊಡುವೆ ಬನ್ನಿ ಬನ್ನಿ ಇರುವೆ।। ಸಾಲಾಗಿ ಬನ್ನಿ। ಸಕ್ಕರೆಯ ತಿನ್ನಿ। ಒಂದೊಂದೇ ಮರಳು। ಕಚ್ಚಿಕೊಂಡು ತನ್ನಿ।। ಗೂಡನ್ನು ಕಟ್ಟಿ ನೋಡಿ ಬನ್ನಿರೆನ್ನಿ। ಒಗ್ಗಟ್ಟೇ ಬಲವು। ಸೋಲೇ ಇಲ್ಲವೆನ್ನಿ।।1।। ಮಕ್ಕಳೇ ತಿಳಿಯಿರಿ। ಸೋಮಾರಿಯಾಗದಿರಿ। ಸಾಲನೆಂದೂ ಬಿಡದಿರಿ। ಆಗಲೇ ಗೆಲ್ಲುವಿರಿ ಎಂಬ ಪಾಠ ಕಲಿಸಿರಿ। ಮಾರ್ಗದರ್ಶಿಯಾಗಿರಿ। ಮೂರ್ತಿ ಚಿಕ್ಕದಾದರೂ। ಕೀರ್ತಿ ದೊಡ್ಡದೆನ್ನಿರಿ।।2।।

**ಇರುವೆ ಜಗದೊಳಗಿರುವೆ** **ರಾಗ:ಮಧ್ಯಮಾವತಿ, ಆದಿತಾಳ**

ಇರುವೆ ಜಗದೊಳಗಿರುವೆ। ಹರಿದಾಡುತಲಿರುವೆ। ಎಲ್ಲಿಯೂ ತುಂಬಿರುವೆ।।ಪ।। ಅಡಿಗೇ ಮನೆಯಲಿ ನೋಡುಲು ಇರುವೆ। ಗಡಿಗೇ ಬೆಲ್ಲದ ಒಳಗೆ ತುಂಬಿರುವೆ। ಸಡಗರದಿಂದಲಿ ಸಾಲಿಡುತಿರುವೆ। ಗಡಕಡ ನಿಲ್ಲದೆ ಓಡುತಲಿರುವೇ।।1।। ಊಟಮಾಡುವ ಸಮಯದಲಿರುವೆ। ಆಟಆಡುವ ವೇಳೆಯೊಳಿರುವೆ। ಕೋಟಲೆ ಬಿಡಿಸಲು ಓಡುತಲಿರುವೆ। ನಾಟಕಧರನೆಂದು ನಲಿಯುತಲಿರುವೆ।।2।। ದ್ರಾಕ್ಷಿಯ ನೋಡಲು ಅಲ್ಲಿ ತುಂಬಿರುವೆ। ಪಕ್ಷಿ ಹೆಗಲ ಮೇಲೇರುತಲಿರುವೆ। ಕುಕ್ಷಿಲಿ ಬ್ರಹ್ಮಾಂಡ ಪಾಲಿಸಿ ಇರುವೆ ಲಕ್ಷ್ಮೀರಮಣನೆಂಬೋ ಇರುವೆ।।3।।

**ಎಲ್ಲಾ ಕಡೆಯಲಿ ಕಾಣುವ** **ರಾಗ:ಶುದ್ಧಸಾವೇರಿ**

ಎಲ್ಲಾ ಕಡೆಯಲಿ ಕಾಣುವ ಇರುವೆ। ಮೂಸುತ ತಿಂಡಿಯ ಹುಡುಕುವ ಇರುವೆ। ಬೆಲ್ಲವನೆಲ್ಲವ ಮೆಲ್ಲುವ ಇರುವೆ।। ಎಲ್ಲಾ ಕಡೆಯಲಿ ನೀನಿರುವೆ।।1।। ಕಣ್ಣುಗಳಿಲ್ಲದೆ ಕಾಣುವ ಇರುವೆ। ಸಾಹಸದಿಂದಲಿ ಜೀವಿಪ ಇರುವೆ। ಒಗ್ಗಟ್ಟಿನ ಗುಟ್ಟನು ನೀನರಿತಿರುವೆ।। ಎಲ್ಲಾ ಕಡೆಯಲಿ ನೀನಿರುವೆ।।2।। ಕಾಲಕಾಲದಿ ಗೇಯುವ ಇರುವೆ। ಗುಟ್ಟಿನ ತಿಂಡಿಯ ಕದಿಯುವ ಇರುವೆ। ಗೂಡಿಗೆ ತಿಂಡಿಯ ಸಾಗಿಪ ಇರುವೆ। ಎಲ್ಲಾ ಕಡೆಯಲಿ ನೀನಿರುವೆ।।3।। ಕೆಂಪು ಬಣ್ಣದಾ ಮರದಾ ಇರುವೆ ಕಪ್ಪು ಬಣ್ಣದಾ ಕಚ್ಚುವ ಇರುವೆ। ಕಂದು ಬಣ್ಣದಾ ಬೆಲ್ಲದ ಇರುವೆ। ಎಲ್ಲಾ ಕಡೆಯಲಿ ನೀನಿರುವೆ।।4।। ತತ್ತಿಯ ಹೊತ್ತಿಹ ಗುಂಪಿರುವೆ। ಕಣ್ಣಿಗೆ ಕಾಣದ ಸಣ್ಣಿರುವೆ। ದೊಡ್ಡತಲೆಯ ಯಜಮಾನಿರುವೆ। ಎಲ್ಲಾ ಕಡೆಯಲಿ ನೀನಿರುವೆ।।5।। ಇರುವೆ ಇರುವೆ ಕೆಂಪಿರುವೆ। ನನ್ನನು ಏಕೆ ಕಚ್ಚಿರುವೆ। ಇದೊಂದು ಸಲ ನಿನ್ನ ಬಿಟ್ಟಿರುವೆ। ಇನ್ನೊಮ್ಮೆ ಕಚ್ಚಿದರೆ ಕೊಂದೆಬಿಡುವೆ।।6।।

**ಕಟ್ಟಿರುವೆ2 ನೀನೆಷ್ಟು ಗಟ್ಟಿರುವೆ** **ರಾಗ:ಖರಹರಪ್ರಿಯ**

ಕಟ್ಟಿರುವೆ ಕಟ್ಟಿರುವೆ ನೀನೆಷ್ಟು ಗಟ್ಟಿರುವೆ? ನಿನ್ನ ಭಾರಕ್ಕಿಂತ ದುಪ್ಪಟ್ಟು ಹೊತ್ತಿರುವೆ।। ಅಲ್ಲಿರುವೆ ಇಲ್ಲಿರುವೆ ಎಲ್ಲೆಲ್ಲೂ ನೀನಿರುವೆ। ಮಳೆಗಾಲ ಬಂದೊಡನೆ ಕಂಡ ಕಂಡಲ್ಲಿರುವೆ।।1।। ಸಕ್ಕರೆಯ ಕಂಡೊಡನೆ ಅಕ್ಕರದಿ ನೀ ಬರುವೆ। ನಿನ್ನ ಬಳಗವನೆಲ್ಲ ಮುದದಿಂದ ಕರೆತರುವೆ।। ಸಾಲಿಕ್ಕಿ ನೀ ಬರಲು ವೀರ ಯೋಧರಂತೆ। ಮದ್ದು ಗುಂಡನು ಹೊತ್ತು ಯುದ್ಧಕ್ಕೆ ಹೊರಟಂತೆ।।2।। ನಿನ್ನಲ್ಲಿ ಇರುವಂಥ ಒಗ್ಗಟ್ಟು ನಮಗಿಲ್ಲ। ಹುಚ್ಚು ಯೋಚನೆಯಿಂದ ಕಚ್ಚಾಟ ತಪ್ಪಿಲ್ಲ। ಹಂಚಿ ತಿನ್ನುವ ಗುಣವು ನಿನ್ನಿಂದ ಕಲಿಬೇಕು। ಅನುದಿನವು ನಿನ್ನಂತೆ ಒಟ್ಟಾಗಿ ಇರಬೇಕು।।3।।

**ಚೀಂಟಿ ಕೋ ದೇಖಾ? (ಹಿಂದಿ)**

ಚೀಂಟಿ ಕೋ ದೇಖಾ? ವಹ್ ಸರಲ್, ವಿರಲ್, ಕಾಲಿ ರೇಖಾ, ತಮ್ ಕೆ ತಾಗೆ ಸಿ ಜೋ ಹಿಲ್ ಡುಲ್। ಚಲತಿ ಲಘುಪದ್, ಪಲ್-ಪಲ್ ಮಿಲ್ ಜುಲ್। ವಹ್ ಹೈ ಪಿಪೀಲಿಕಾ ಪಾಂತಿ। ದೇಖೋ ನ, ಕಿಸ್ ಭಾಂತಿ। ಕಾಮ್ ಕರತಿ ವಹ್ ಸತತ್। ಕನ್-ಕನ್ ಕರಕೆ ಚುನತಿ ಅವಿರತ್। ಗಾಯ್ ಚರಾತಿ, ಧೂಪ್ ಖಿಲಾತಿ। ಬಚ್ಚೋಂ ಕಿ ನಿಗರಾನಿ ಕರತಿ। ಲಡತೀ, ಅರಿ ಸೆ ತನಿಕ್ ನ ಡರತಿ।। ದಲ್ ಕೆ ದಲ್ ಸೇನಾ ಸಂವಾರತಿ। ಘರ್ ಆಂಗನ್, ಜನಪಥ್ ಬುಹಾರತಿ।

ದೇಖೋ ವಹ್ ವಲ್ಮೀಕ್ ಸುಧರ್ ಉಸಕೆ ಭೀತರ್ ಹೈ ದುರ್ಗ್ ನಗರ್।। ಅದ್ಭುತ್ ಉಸ್‌ಕಿ ನಿರ್ಮಾಣ್ ಕಲಾ। ಕೋಯಿ ಶಿಲ್ಪ ಕ್ಯಾ ಕಹೇ ಭಲಾ। ಉಸ್‌ಮೆ ಹೈ ಸೌದ್, ಧಾಮ್, ಜನಪಥ್। ಆಂಗನ್, ಗೋ ಗೃಹ್ ಭಂಡಾರ್ ಅಕಥ್। ಹೈ ಡಿಂಬ್ -ಸದ್ಯ್ ವರಶಿಬಿರ್ ರಚಿತ್। ಡ್ಯೋಢಿ ಬಹು, ರಾಜ್ ಮಾರ್ಗ್ ವಿಸ್ತೃತ್। ಚಿಂಟೀ ಹೈ ಪ್ರಾಣಿ ಸಾಮಾಜಿಕ್। ವಹ್ ಶ್ರಮಜೀವಿ, ವಹ್ ಸುನಾಗರೀಕ್।।

### ಪುಟಾಣಿ ಇರುವೆ ಎಲ್ಲೆಡೆ ಇರುವೆ ರಾಗ:ಸಾರಂಗ

ಪುಟಾಣಿ ಇರುವೆ ಎಲ್ಲೆಡೆ ಇರುವೆ। ವಾಸನೆ ಹಿಡಿದು ತಿಂಡಿಗೆ ಬರುವೆ। ಜೊತೆಯಲಿ ಗೆಳೆಯರ ಕರೆತರುವೆ। ಎಲ್ಲರ ಒಟ್ಟಿಗೆ ಇರುತಿರುವೆ।।1।। ಸರದಿಯ ಸಾಲನ್ನು ಕಳಿಸಿರುವೆ। ಐಕ್ಯತೆಯ ಗುಟ್ಟನು ತಿಳಿಸಿರುವೆ। ಕ್ಷಣಕ್ಷಣ ಕೆಲಸವ ಮಾಡುತಲಿರುವೆ। ಜಡತೆಯ ತೊಲಗಿಸಿ ದುಡಿಯುತಲಿರುವೆ।।2।। ದೇಹಕ್ಕೂ ಹೆಚ್ಚಿನ ತೂಕವ ಹೊರುವೆ। ನಿನ್ನಿಂದೆಷ್ಟು ಪಾಠವ ಕಲಿವೆ। ಕಡ್ಡಿಯ ಹತ್ತೆ ಆಡಿಸುವೆ। ಕಣ ಕಣ ಸಕ್ಕರೆ ನಾ ಕೊಡುವೆ।।3।।

## ಹುಲಿ

### ಹುಲಿಯಣ್ಣಾ2 ಕಾಡಿಗೆ ನೀನೇ ರಾಗ:ಶಂಕರಾಭರಣ

ಹುಲಿಯಣ್ಣಾ ಹುಲಿಯಣ್ಣಾ ಕಾಡಿಗೆ ನೀನೇ ಹಿರಿಯಣ್ಣ।ಆದರು ನೀನು ಕಾಡಲ್ಲೇಇರು। ಊರಿನೊಳಗೆ ಬರಬೇಡಣ್ಣ। ಹುಲಿಯಣ್ಣಾ ಹುಲಿಯಣ್ಣಾ। ಎಂಥಾ ಮೀಸೆ ನಿನಗಣ್ಣ। ಎಂಥಾ ಬಾಯಿಎಂಥಾ ಹಲ್ಲು। ಎಂಥಾ ಗರ್ಜನೆ ನಿನದಣ್ಣ।।1।। ಹುಲಿಯಣ್ಣಾ ಹುಲಿಯಣ್ಣಾ। ಫಳ ಫಳ ಗಾಜಿನ ಕಣ್ಣಣ್ಣ। ಚೂರಿಗಿಂತಲೂ ಚೂಪು ಉಗುರು। ಬಣ್ಣದ ಪಟ್ಟೆಯ ಮೈಯಣ್ಣ।। ಹುಲಿಯಣ್ಣಾ ಹುಲಿಯಣ್ಣಾ। ಹತ್ತಿರ ನೀ ಬರಬೇಡಣ್ಣ। ಹತ್ತಿರ ಬಂದರೆ ನಾಲಿಗೆ ಒಣಗಿ। ಚಡ್ಡೀ ಒದ್ದೆ ತಿಳಿಯಣ್ಣ।।2।।

## ಆನೆ

### ಆನೆ ಬಂದಿತ್ತು ಅಣ್ಣಾ ರಾಗ:ಕುರಂಜಿ

ಆನೆ ಬಂದಿತ್ತು ಅಣ್ಣಾ ಆನೆ ಬಂದಿತ್ತು। ಹಬ್ಬದ ದಿನವೇ ಸುಬ್ಬನ ಮನೆಗೊಂದಾನೆ ಬಂದಿತ್ತು।।ಪ।। ಅಪ್ಪನು ಕೊಟ್ಟಾ ತೆಂಗಿನ ಕಾಯಿಯ ಗೊಳಕ್ ನುಂಗಿತ್ತು। ಅಮ್ಮನು ಕೊಟ್ಟಾ ಬೆಲ್ಲದ ಉಂಡೆಯು ಗುಳುಮ್ಮ ಆಗಿತ್ತು।।1।। ಉದ್ದ ಸೊಂಡಿಲು ಸಣ್ಣ ಕಣ್ಣು ಬೆಳ್ಳನೆ ಕೋರೆ ಇತ್ತು। ದಪ್ಪನೆ ಕಾಲು ಅಗಲದ ಕಿವಿಯು ಮೋಟುಬಾಲವಿತ್ತು।।2।। ಕಾಲಿಗೆ ಗೆಜ್ಜೆ ಕೊರಳಲಿ ಗಂಟೆ ಆನೆ ಬಂದಿತ್ತು। ಮೈ ಮೇಲೆಲ್ಲಾ ಚಿನ್ನದ ಬಟ್ಟೆ ಫಳ ಫಳ ಹೊಳೆದಿತ್ತು।।3।। ಹೆಜ್ಜೆಯ ಮೇಲೆ ಹೆಜ್ಜೆಯನಿಟ್ಟು ಆನೆ ಬಂದಿತ್ತು। ನೀರಿಗೆ ಇಳಿದು ಸೊಂಡಿಲು ಬಡಿದು ಜಳಕ ಮಾಡಿತ್ತು।।4।। ಹೊಟ್ಟೆ ಗುಡಾಣ ಕೇಳೋ ಜಾಣ ಆನೆ ಬಂದಿತ್ತು। ಕೆಳಕ್ಕೆ ಬಗ್ಗಿ ಸೊಂಡಿಲು ಎತ್ತಿ ಸಲಾಮು ಮಾಡಿತ್ತು।।5।। ಬನ್ನಿರಿ ಮಕ್ಕಳೆ ಸವಾರಿ ಮಾಡಿ। ಎಂದು ಕರೆದಿತ್ತು। ಮಕ್ಕಳನೆಲ್ಲಾ ಕೂರಿಸಿಕೊಂಡು ಸವಾರಿ ಹೊರಟಿತ್ತು।।6।।

### ಆನೆ ಬಂತು ಆನೆ ಬಂತು ಬನ್ನಿ ಎಲ್ಲಾರೂ

ಆನೆ ಬಂತು ಆನೆ ಬಂತು। ಬನ್ನಿ ಎಲ್ಲಾರೂ। ಬುಟ್ಟಿ ತುಂಬ ಕಬ್ಬು ಬೆಲ್ಲ ತನ್ನಿ ಎಲ್ಲಾರು।।1।। ಆನೆ ಹೊಟ್ಟೆ ಲಾರಿ ಹಾಗೆ ಬಾಳ ದೊಡ್ಡದು। ಕಣ್ಣು ಮಾತ್ರ ಗೋಲೀ ಹಾಗೆ ತುಂಬಾ ಸಣ್ಣದು।।2।। ಒಂದೊಂದ್ ಕಾಲೂ ಕಂಬದ ಥರ। ತುಳಿದ್ರೆ ಆಗ್ಹೋಯ್ತು। ಹಂಡೆಯಂಥ ಕುಂಬಳಕಾಯೂ ಪಡ್ಚ ಆದೀತು।।3।। ಆನೆ ಮುಂದೆ ಯಾರೂ ಇಲ್ಲ। ಗಪ್ ಚಿಪ್ ಎಲ್ಲಾನೂ ಸ್ಕೂಟರ್ ಕಾರು ಎಲ್ಲಾ ಅದಕ್ಕೆ ಆಟದ ಸಾಮಾನು।।4।। ಆನೆ ಬಂತು ಆನೆ ಬಂತು। ಸೊಂಡ್ಲು ತಿರುಗಿಸ್ತಾ। ಬೆಲ್ಲ ಕಬ್ಬು ತಿಂದೇ ಬಿಡ್ತು ಕಿವಿ ಆಡುಸ್ತಾ।।5।।

### ಆನೆ ಬಂತೊಂದಾನೆ ದಾರಿಬಿಡು

ಆನೆ ಬಂತೊಂದಾನೆ ದಾರಿಬಿಡು ಜಾಣೆ। ನೋಡು ಸೊಂಡಿಲಣ್ಣಾ ನೀಡು ಬಾಳೆ ಹಣ್ಣಾ। ಕಣ್ಣು ಮಾತ್ರ ಸಣ್ಣ, ಕಪ್ಪು ಅದರ ಬಣ್ಣ। ಕಾಲು ನಾಲ್ಕು ಕಂಬ ದಪ್ಪ ಉಂಟು ತುಂಬ॥1॥ ಅದರ ಹೊಟ್ಟೆ ದೊಡ್ಡ ಅದರ ಬಾಲ ಗಿಡ್ಡ। ಕಿವಿಯು ಎರಡು ಫ್ಯಾನು। ಚಾಲು ಮಾಡಿ ನೋಡು। ಕೋರೆ ಹಲ್ಲು ಎರಡು ಬೆಳ್ಳಗೆ ಒಂದು ಜೋಡು। ಬಾರೋ ನನ್ನ ಮಿತ್ರ ಬರೆವೆ ನಾನು ಚಿತ್ರ॥2॥

### ಆನೆ ಬಂತೊಂದಾನೆ ಯಾವೂರಾನೆ

ಆನೆ ಬಂತೊಂದಾನೆ ಯಾವೂರಾನೆ। ಚನ್ನ ಪಟ್ಟಣದಾನೆ ಇಲ್ಲಿಗೇಕೆ ಬಂತು?। ದಾರಿ ತಪ್ಪಿ ಬಂತು। ಆನೆ ಏನು ತಂತು? ಕೊಬ್ಬರಿ ಬೆಲ್ಲ ತಂದಿತು। ಪಟಾ ಪಟಾ ಮುರಿಯಿತು। ಮಕ್ಕಳಿಗೆಲ್ಲ ಕೊಟ್ಟಿತು॥1॥ ಓಡಿ ಓಡಿ ಹೋಯಿತು॥ ಆನೆ ಬಂತು ಆನೆ ಕಂಬದಂತ ಕಾಲಿನ ಆನೆ। ಮೊರದಂತ ಕಿವಿಯ ಆನೆ। ಗುಡಾಣದಂತ ಹೊಟ್ಟೆಯ ಆನೆ। ಚಿಕ್ಕಕಣ್ಣಿನ ಆನೆ। ಉದ್ದ ಸೊಂಡಿಲ ಆನೆ। ಧಕ್ ಧಕ್ ಹೆಜ್ಜೆ ಹಾಕಿ ಬಂತು॥2॥

### ಆನೆ ಬಂತೊಂದಾನೆ ನೋಡಬನ್ನಿ

ಆನೆ ಬಂತೊಂದಾನೆ। ನೋಡಬನ್ನಿ ಆನೆ। ಕಪ್ಪು ಬಣ್ಣದಾನೆ। ದೊಡ್ಡ ಹೊಟ್ಟೆಯ ಆನೆ। ಸಣ್ಣ ಕಣ್ಣಿನ ಆನೆ। ಅಗಲ ಕಿವಿಯ ಆನೆ। ಉದ್ದ ಸೊಂಡಿಲ ಆನೆ। ಚೂಪುದಂತದ ಆನೆ। ಮೋಟು ಬಾಲದ ಆನೆ। ಶಕ್ತಿಶಾಲಿ ಆನೆ॥

### ಆನೆ ಸೊಂಡಿಲು ಉದ್ದ

ಆನೆ ಸೊಂಡಿಲು ಉದ್ದ। ಅದರ ಬಾಲ ಗಿಡ್ಡ। ಅದರ ಕಿವಿ ದೊಡ್ಡ। ಕಣ್ಣು ಮಾತ್ರ ಸಣ್ಣ। ಹೊಟ್ಟೆ ಮಾತ್ರ ಡುಮ್ಮ॥

### ಕಾಡಿನಿಂದ ಓಡಿಬಂತು

ಕಾಡಿನಿಂದ ಓಡಿಬಂತು। ನೀರಿಗಾಗಿ ಆನೆ। ನಮ್ಮ ಊರ ಕೆರೆಗೆ ಇಳಿದು ಕುಡಿದು ಹೋಯ್ತು ಮೊನ್ನೆ॥1॥ ದಿಟ್ಟ ಹೆಜ್ಜೆ ಇಡುತ ಬಂತು ಪುಟ್ಟ ಬೆಟ್ಟದಂತೆ। ನಡೆದು ಬಂದ ಜಾಗವೆಲ್ಲ ತಾನೆ ಆಯ್ತು ರಸ್ತೆ॥2॥ ದೊಡ್ಡ ಹೊಟ್ಟೆ ಚಿಕ್ಕ ಕಣ್ಣು ಅಚ್ಚ ಕರಿಯ ಬಣ್ಣ। ಬಿಳಿಯ ಕೋರೆ ಮರದ ಕಿವಿ ನೋಡಲೆಷ್ಟು ಚೆನ್ನ॥3॥ ಕಂಬದಂಥ ನಾಲ್ಕು ಕಾಲು ಸೊಂಡಿಲೆಷ್ಟು ಉದ್ದ। ಕಬ್ಬು ತೆಂಗು ಬಾಳೆಹಣ್ಣು ಮೇಯಲಿಕ್ಕೆ ಸಿದ್ಧ॥4॥ ಯುದ್ಧವಿರಲಿ, ದಸರೆಯಿರಲಿ। ಎಲ್ಲಕ್ಕಿಂತ ಮುಂದು। ಇದಕೆ ಯಾರು ಸಾಟಿಯಿಲ್ಲ ಶಕ್ತಿಯಲ್ಲಿ ಗುಂಡು॥5॥

## ಕರಡಿ

### ಓ ಹೋ ಎನ್ನುವ ಜನಗಳ ಕೂಗು — ರಾಗ:ಕಲ್ಯಾಣಿ

ಓ ಹೋ ಎನ್ನುವ ಜನಗಳ ಕೂಗು। ಮುಟ್ಟಿತು ಮುಗಿಲ ಊರಿನಲಿ। ತನ್ನಯ ಮರಿಗಳ ಹುಡುಕುತ ಕರಡಿ। ಬಂದಿತು ಹಳ್ಳಿಯ ದಾರಿಯಲಿ॥ ಜನಗಳ ಕೂಗಿಗೆ ಗಾಬರಿಯಿಂದ। ಹೊಕ್ಕಿತು ಕರಡಿ ಮನೆಯೊಂದ। ಎಲ್ಲರೂ ಸೇರಿ ತಂತ್ರವ ಮಾಡಿ। ಹಿಡಿದೇ ಬಿಟ್ಟರು ಬೋನಿಂದ॥1॥ ಬೋನಿಗೆ ಸಿಕ್ಕಿದ ಕರಡಿಯು ಸೇರಿತು। ನಗರದ ಸರ್ಕಸ್ ಕಂಪನಿಯ। ತನ್ನಯ ಮರಿಗಳ ನೆನೆಯುತ ಕೊಟ್ಟಿತು। ನೋಡುವ ಜನಕೆ ರಂಜನೆಯ॥ ಲಾಗವ ಹೊಡೆದು ಸೈಕಲ್ ತುಳಿಯಿತು। ಬಿಕ್ಕುತ ದುಃಖದ ಕಡಲಲ್ಲಿ। ಚಾಟಿಯ ಶಬ್ದಕೆ ಥೈತಕ ಕುಣಿಯಿತು। ಮರುಗಿತು ನಿತ್ಯವು ಮನದಲ್ಲಿ॥2॥ ನನ್ನನ್ನು ಬಿಡಿಸಿ ಮರಿಗಳ ಹುಡುಕುವೆ। ಕಾಡಲಿ ಬದುಕುವೆ ಹರುಷದಲಿ। ಜೇನಿನ ಸವಿಯ ಹಲಸಿನ ರುಚಿಯ। ಸವಿಯುತ ಬಾಳುವೆ ಸ್ವೇಚ್ಛೆಯಲಿ॥ ಎನ್ನುವ ಅದರ ಮನಸಿನ ಇಂಗಿತ। ಸರ್ಕಸ್ ಶಬ್ದದ ಅಬ್ಬರದಿ। ನಿತ್ಯವು ಕರಗಿಯೆ ಹೋಯಿತು। ಕರಡಿ

ಕುಣಿಯಿತು ಸರ್ಕಸ್ ಬಂಧನದಿ।।3।।

### ಕರಡಿ ಬೆಟ್ಟ ಹತ್ತಿತು

ಕರಡಿ ಬೆಟ್ಟ ಹತ್ತಿತು। ಅತ್ತ ಇತ್ತ ನೋಡಿತು। ಹಲಸಿನ ಮರ ಏರಿತು। ಹಣ್ಣು ಕಿತ್ತು ತಂದಿತು।1।। ತೊಳೆ ಬಿಡಿಸಿ ಇಟ್ಟಿತು। ಅದಕೆ ಜೇನು ಬೆರೆಸಿತು। ಹೊಟ್ಟೆ ಬಿರಿಯೆ ತಿಂದಿತು। ಮಲಗಿ ನಿದ್ದೆ ಹೊಡೆಯಿತು।।2।।

## ಜಿಂಕೆ

### ಕುಣಿಕುಣಿದಾಡು ನಲಿನಲಿದಾಡು ರಾಗ:ಪೂರ್ವಿಕಲ್ಯಾಣಿ

ಕುಣಿಕುಣಿದಾಡು ನಲಿನಲಿದಾಡು। ಚಿಗರೆ ಮರಿಯೆ ಮತ್ತೆ ಓಡಿ ಬಾಬಾ।।ಪ।। ಬೇಟೆಗಾರ ಬಂದ,ಬಿಲ್ಲುಬಾಣ ತಂದ। ಚಿಗರೇ ಮರಿಯೇ, ಮತ್ತೆ ಓಡಿ ಓಡಿ ಬಾಬಾ।।1।। ಆನೆಯ ಹಿಂಡು ಅಲ್ಲಿನೋಡು ದಂಡು। ಚಿಗರೇ ಮರಿಯೇ ಮತ್ತು ಓಡಿ ಬಾಬಾ।।2।।ಅತ್ತ ಇತ್ತ ನೋಡಿ ಸುತ್ತಿಸುಳಿದಾಡಿ ಕತ್ತಲಾಯಿತೀಗ ಮತ್ತೆ ಓಡಿಬಾ।।3।। ಬೇಟೆಗಾರ ಬಂದ ಬಿಲ್ಲುಬಾಣ ತಂದ। ಆಟವಾಡದೇ ನೀನು ಬೇಗ ಓಡಿಬಾಬಾ।।4।।

## ಕುದುರೆ

### ಚಡ್ಡಿಗಿಡ್ಡಿ ಹಾಕಿಕೊಂಡು ರಾಗ:ಶಂಕರಾಭರಣ

ಚಡ್ಡಿಗಿಡ್ಡಿ ಹಾಕಿಕೊಂಡು। ಕುದುರೆ ಮೇಲೆ ಕುಳಿತು ಕೊಂಡು। ಲಗಾಮ್ ಹಿಡಿದು ಕೊಂಡು। ಹೈಹೈಹೈ।।1।। ಹುಲ್ಲು ಹುರುಳಿ ತಂದು ಕೊಟ್ಟು। ಅದರ ಬೆನ್ನ ಸವರಿ ತಟ್ಟಿ। ಸಾಕುವೆವು ನಮ್ಮ ಕುದುರೆ ಹೈಹೈಹೈ।।2।। ಕಂದು ಬಣ್ಣ ನನ್ನ ಕುದುರೆ ಗಾಳಿ ಹಾಗೆ ಓಡೊ ಕುದುರೆ ನನ್ನ ಕುದುರೆ ನಿನ್ನ ಕುದುರೆ ಹೈಹೈಹೈ।।3।। ಕುದುರೆ ಮೇಲೆ ಕುಳಿತುಕೊಂಡು। ಅದರ ಬೆನ್ನ ಕಟ್ಟಿಕೊಂಡು। ಅಲ್ಲಿ ಇಲ್ಲಿ ನೋಡಿಕೊಂಡು ಬಾಜು ಬಾಜು ಹೈಹೈಹೈ।।4।।

### ಬುದ್ಧನ ಯೋಗಿಯ ಮಾಡಿದ ಕುದುರೆ ರಾಗ:ಶಿವರಂಜನಿ

ಬುದ್ಧನ ಯೋಗಿಯ ಮಾಡಿದ ಕುದುರೆ। ಶಿವಾಜಿಯ ಶೂರನ ಮಾಡಿದ ಕುದುರೆ। ಬಾಬರ್ ಬಿಡದೆ ಹತ್ತಿದ ಕುದುರೆ। ಅಕ್ಬರ್ ರಾಜ್ಯವ ಕಟ್ಟಿದ ಕುದುರೆ।।1।। ಯುದ್ಧದಿ ವೀರನ ಗೆಲಿಸಿದ ಕುದುರೆ। ಸಿದ್ದರು ಕೀರ್ತಿಯ ಗಳಿಸುವ ಕುದುರೆ। ಸರ್ಕಸ್ ಆಟದಿ ನೋಟದ ಕುದುರೆ। ಪಶ್ಚಿಮ ದೇಶದ ರೈತರ ಕುದುರೆ।।2।। ಅರಸರು ಪ್ರೇಮಿಪ ಅರಮನೆ ಕುದುರೆ। ಶ್ರೀಮಂತರ ಸಿರಿ ಬೆಳಗಿಪ ಕುದುರೆ। ದೇವನ ಲೋಕದಿ ಬೆಳಗುವ ಕುದುರೆ। ದೀನರ ಲೋಕದಿ ಬೆಳೆಯುವ ಕುದುರೆ।।3।। ಕೋಚ್ ಮ್ಯಾನ್ ಜಟಕಾಗಾಡಿಯ ಕುದುರೆ। ವ್ಯಾಸ ವಾಲ್ಮೀಕಿಗಳು ಬಣ್ಣಿಸಿದ ಕುದುರೆ। ರೇಸ್ ಕೋರ್ಸ್‌ನಲ್ಲಿ ಓಡುವ ಕುದುರೆ। ಯಜ್ಞದಿ ತನ್ನನೆ ಅರ್ಪಿಸಿದ ಕುದುರೆ।।4।।

## ಕತ್ತೆ

### 'ಥೂ! ಛೀ! ಕತ್ತೆ'

'ಥೂ ! ಛೀ ! ಕತ್ತೆ' ಎಂದು ಬೈಯದಿರಿ ಯಾರನ್ನು। ಕತ್ತೆಯ ಮಾನ ಕಳೆವಿರೇಕೆ? ಕತ್ತೆಯೇನು ಮಾಡಿತು ನಿಮಗೆ? ಕತ್ತೆ ಅಗಸನ ಅಮೂಲ್ಯ ಸ್ವತ್ತು । ತಲೆಬಾಗಿ ನಡೆವುದು ಭಾರ ಹೊತ್ತು।।1।। ಬೆಳಗಿನಿಂದ ಬೈಗವರೆಗೆ ದುಡಿವುದೊಂದೇ ಅದಕ್ಕೆ ಗೊತ್ತು!।।2।। ಮಳೆಯಲ್ಲಿ ನೆನೆ ನೆನೆಯುತ್ತ। ಛಳಿಯಲ್ಲಿ ನಡು ನಡುಗುತ್ತ। ಬಿಸಿಲಲ್ಲಿ ಬೆಂದು ಬಳಲುತ್ತು। ತನ್ನ ಪಾಡಿಗೆ ತಾನಿರುವುದು ಕತ್ತೆ।।3।। ಹೊಡೆದರೆ ಹೊಡೆಸಿಕೊಂಡು। ಬೈದರೆ ಬೈಸಿಕೊಡು। ಬಾಳುತಿದೆ ಬಡಪಾಯಿಕತ್ತೆ। ಮೂದಲಿಕೆಗಳ ನುಂಗಿಕ್ಕೊಂಡು।।4।। ಕತ್ತೆಜನ್ಮವು ಹೀನಾಯವಲ್ಲ; ಕತ್ತೆ ಬದುಕು

**ವ್ಯರ್ಥವಲ್ಲ; ಅದೆಷ್ಟು ಭಾರವನು ಹೊತ್ತರೂ। ಅದರ ಬಾಳು ಅದಕ್ಕೆ ಭಾರವಲ್ಲ॥5 ॥**

ಹಹಾ! ಹಿಹೀ! ಹಹಾ! ಹಿಹೀ!

**ಹಹಾ! ಹಿಹೀ! ಹಹಾ! ಹಿಹೀ! ಹಟ್ಟಿಯೊಳಗೆ ಹುಟ್ಟಿಕೊಂಡು। ಬಟ್ಟ ಬಯಲೊಳಗೆ ನಾನು। ಬೆಟ್ಟ ಗುಟ್ಟೆಗಳಲಿ ನಾನು ಓಡಿಯಾಡುವೆ! ಬೂದಿಗುಡ್ಡೆ ಮೇಲೆ ನಾನು। ಮೋಟು ಗೋಡೆ ಬದಿಗೆ ನಾನು। ಎಲ್ಲಿ ಎಂದರಲ್ಲಿ ನಾನು। ಬಿದ್ದು ಕೊಳ್ಳುವೆ॥ ಅತ್ತಲಿಂದಲಿತ್ತಲೊಮ್ಮೆ। ಇದ್ದಲಿಂದತ್ತಲೊಮ್ಮೆ। ಹೊರಳಿ ಸುಖಿಸುವೆ! ಹುಟ್ಟಿನಿಂದ ಕತ್ತೆ ಜನ್ಮ। ಬಟ್ಟೆ ಮೂಟೆ ಹೊರುವ ಕರ್ಮ। ಏನು ಮಾಡಲಿ? ಹೊಟ್ಟೆ ಹೊರೆಯಲಷ್ಟೆ ನಾನು। ಬೆಟ್ಟದಷ್ಟು ದುಡಿದು ನಾನು ಬಿದ್ದುಕೊಳ್ಳುವೆ! ಮುದ್ದು ಕನಸು ಕಾಣುವೆ! ಹಟ್ಟಿಗೊಬ್ಬ ರಾಜ ಬೇಕು।ಹುಟ್ಟುಕೊಂಡೆ ನಾನೆ ರಾಜ! ಮೋಟು ಗೋಡೆ ಬದಿಯ ರಾಜ! ಈ ಶಿಖಾಮಣಿ! ಹಹಾ! ಹಿಹೀ! ಹಹಾ! ಹಿಹೀ!**

## ಹಸು

### ಅಕ್ಕಂದಿರಣ್ಣಂದಿರೆಲ್ಲರೂ ಕೇಳಿ (ಲಾವಣಿ) ರಾಗ:ಮೋಹನ

ಅಕ್ಕಂದಿರಣ್ಣಂದಿರೆಲ್ಲರೂ ಕೇಳಿ। ಚೊಕ್ಕದಲಿ ಗೋವಿನ ಒಡಗೂಡಿ ಬಾಳಿ॥ ಹಸುವಿಗೂ ನಮ್ಮಂತೆ ಸ್ವಾತಂತ್ರ್ಯವಿರಲಿ। ವೃಷಕೇಕೆ ಚಾವಟಿ ಹುರುಳಿಯೂ ಸಿಗಲಿ॥1॥ ಹಟ್ಟಿಲೀ ದನಗಳಿಗೆ ಹಗ್ಗವೂ ಬೇಡ। ಕಟ್ಟಲೂ ಕರುಗಳಿಗೆ ಕುಣಿಕೆಯೂ ಬೇಡ॥ ಹೊಟ್ಟೆಯಾ ತುಂಬಾ ಮೇಯಲೀ ದಂಡು। ಹಸುರಲೀ ನಲಿಯಲೀ ಹಸುಗಳಾ ಹಿಂಡು॥2॥ ಸಸಿಗಳಿಗೆ ಹಟ್ಟಿಯಾಗೊಬ್ಬರ ಹಾಕು। ಕೃಷಿಕಗೆ ಹೈನು ಉದ್ಯಮ ಬೇಕು॥ ಅರ್ಬುದಕೆ ಅರ್ಕವಾ ಕುಡಿಸಿದರೆ ಸಾಕು। ಪಂಚಾಮೃತಕೆ ದೇಶೀ ಗೋಕ್ಷೀರ ಬೇಕು॥3॥ ಕೇಳಿರಿ ಕೇಳಿರಿ ದೇಶಬಂಧುಗಳೇ। ಬೆಳಗಿರಿ ಭಾವ ಜಾಗರಣದ ಬೆಳಕು॥ ಮಾಡಿರಿ ದೇಸೀ ತಳಿಗಳ ರಕ್ಷಣೆ। ಹರಡಿರಿ ರಾಷ್ಟ್ರೋತ್ಥಾನದ ಝಳಕು॥4॥

### ಅಂಬಾ2 ಎನ್ನುವ ಕರುವೆ

ಅಂಬಾ ಅಂಬಾ ಎನ್ನುವ ಕರುವೆ। ಥಣ್ಣನೆ ಜಿಗಿದು ಹೇಗೆ ಓಡುವೆ। ನೆಗೆಯಲು ಕಲಿಸು ಹಾರಿ ಬಿಡುವೆ। ನಿನ್ನ ಜೊತೆಯಲಿ ಓಡಿ ಬರುವೆ। ಹೀಗೂ ಹಾಗೂ ಚಂದ। ನನ್ನ ಸರಿಸಮ ಬಂದರೇ। ದಾರಿ ಸಿಗುವುದಿಲ್ಲ ಅಪಾಯಕಾರಿ॥

### ಈ ಜಗದ ತಾಯಿ ಆನಂದದಾಯಿ ರಾಗ: ಶಿವರಂಜನಿ

ಈ ಜಗದ ತಾಯಿ ಆನಂದದಾಯಿ। ಸರ್ವೋಪಕಾರಿ ಗೋವು। ನಮ್ಮ ಬದುಕಿಗೆ ಮೂಲ ಈಕೆಯೆಂದರಿಯದಿರೆ। ಬಾಳಲ್ಲಿ ಪೂರ್ತಿನೋವು॥1॥ ಹಾಲೆಂಬ ಅಮೃತವನು ಕುಡಿದು ಪುಷ್ಟಿಯ ಹೊಂದಿ। ಬೆಳೆದವರೆ ಜಗದಿ ಎಲ್ಲಾ। ಸಕಲ ವಿಶ್ವಾಧಾರ ಗೋಮಾತೆಯನು ತ್ಯಜಿಸೆ। ಬದುಕು ಅಸಾಧ್ಯವು ಆಶ್ರಯವೆ ಇಲ್ಲ॥2॥ ಮುದಿತನವು ಬಂದೊದಗಿ ಹಸುವು ಬರಡಾಯ್ತೆಂದು। ಕಟುಕಕತ್ತಿಗೆ ತಾಯನೊಡ್ಡುವುದು ಸರಿಯೇ?। ಕಾಯಸ್ಥಕಣಕಣದಿ ಅವಳದೇ ಋಣಭಾರ। ಜನನಿಯನೆ ಕೊಲ್ಲ ಕೃತಘ್ನತೆಯು ತರವೇ?॥3॥ ನಮ್ಮ ಸಲಹಿದ ಮಾತೆ, ಕರೆಯುತಿಹಳು ಕ್ಷೀರ ಇರಲಿ ಗೋವಿನ ರಕ್ಷೆ ದಿನವು ದಿನವೂ। ಮಾತೃಸೇವೆಗೆ ನಮ್ಮ ಬದುಕು ಮುಡಿಪಾಗಿರಲಿ। ಇಂದು ಉಸಿರಾಗಲಿ ವಂದೇಗೋಮಾತರಮ್॥4॥

### ಕರುವಿನ ಕರೆಕೇಳಿ ರಾಗ:ಅಭೇರಿ-ಆದಿತಾಳ

ಕರುವಿನ ಕರೆ ಕೇಳಿ ತ್ವರೆಗರೆಯದ ಹಸು। ಇರಬಹುದೇನಲ್ಲಿ ರಾಮ ರಾಮ॥ಪ॥ ಮರುಗುವ ಮರಿಗಾಗಿ ಎರಕವನರಿಯದ ಮರುಕವು ಮರುಕವೇ ರಾಮರಾಮ॥1॥ ಮರುಗು ಮರುಕವು ಕೂಡಿ ಎರಡಲ್ಲ ಒಂದಹುದು। ಎರಕ

ಹೊಯ್ದಂತಹುದು ರಾಮ ರಾಮ॥2॥ ಮರುದನಿ ಸರಿದಂತೆ ನೆರವಾಗಿ ಇರುವುವು। ಎರವಾಗಬಹುದೇನು ರಾಮ ರಾಮ॥3॥ ತೀರ್ಥರೂಪಳು ನೀನು ತೀರ್ಥವಾಗುವುದೇನು। ಸಾರ್ಥಕವಲ್ಲವೇ ರಾಮ ರಾಮ॥4॥ ಸ್ವಾರ್ಥಕ ಪರಮಾರ್ಥದ ವೀಥಿಯ ತೋರೆಂದು ಪ್ರಾರ್ಥಿಸಿದೆನವಳ ರಾಮ ರಾಮ॥5॥

### ದೃಢ ಸಂಕಲ್ಪವ ಮಾಡೋಣ ರಾಗ:ಮೋಹನ

ದೃಢ ಸಂಕಲ್ಪವ ಮಾಡೋಣ। ನವಸಂದೇಶವ ಸಾರೋಣ। ದೇಸೀ ಗೋಸಂರಕ್ಷಣೆಯೆಂಬ। ದೀಕ್ಷಾವ್ರತಿಗಳು ಆಗೋಣ॥1॥ ಪಂಚಗವ್ಯದ ಸೇವನೆಯಿಂದ। ದೇಹಶುದ್ಧಿಯನು ಮಾಡೋಣ। ಭೂಸಾರವನು ಹೆಚ್ಚಿಸುವಂತಹ। ಗೋಮಯವನ್ನು ಬಳಸೋಣ॥2॥ ಗಿಡಪೋಷಕ, ಕ್ರಿಮಿನಾಶಕ। ಗೋಮೂತ್ರವನು ಬಳಸೋಣ। ಆರ್ಶ, ಗಲಗಂಡ, ಕಫ, ಪಿತ್ತ। ಶಮನಕೆ ಗೋಮಯ ಹಾಕೋಣ॥3॥ ದೇಸೀ ಆಕಳ ಸಗಣಿ, ಗಂಜಲ। ಗೋಮೂತ್ರವೆ ನಿಜಗಂಗಾಜಲ। ಪೆಟ್ರೋಲ್ ವಿದ್ಯುತ್ ಕೊರತೆ ನೀಗಿಸಲು। ಗೋಮಯ ತರುವುದು ನೈಜಬಲ॥4॥

### ನೊರೆ2 ಹಾಲು ರುಚಿ2 ಹಾಲು ರಾಗ: ಶುದ್ಧಧನ್ಯಾಸಿ

ನೊರೆ ನೊರೆ ಹಾಲು। ರುಚಿ ರುಚಿ ಹಾಲು। ಕಪಿಲೆ ಕೊಟ್ಟ ಹಾಲು। ಅಮ್ಮ ಕರೆದ ಹಾಲು। ಅಮ್ಮ ಕೊಟ್ಟ ಹಾಲು ರುಚಿರುಚಿ ಹಾಲು॥

### ಪುಟಾಣಿ ಕರುವೊಂದು

ಪುಟಾಣಿ ಕರುವೊಂದು ನಮ್ಮನೇಲಿದೆ। ಕಟ್ಟಿದರು ನಿಲ್ಲದಲೆ ಕುಣಿದಾಡುತ್ತೆ। ಹಗ್ಗದಂತ ಬಾಲವನೆತ್ತಿ ನೆಗೆದಾಡುತ್ತೆ। ಬಗ್ಗಿ ಬಗ್ಗಿ ನೆಲ ಮೂಸಿ ಜಿಗಿದಾಡುತ್ತೆ॥1॥ ಕಣ್ಣು ದೊಡ್ಡದಾಗಿ ಬಿಟ್ಟು ನನ್ನೇ ನೋಡುತ್ತೆ। ಬೆಣ್ಣೆಯಂತ ಮೈ ಮುಟ್ಟೋಕೆ ಝುಮ್ ಅನ್ನುತ್ತೆ। ಕಾಲನ್ನೆತ್ತಿ ಅಮ್ಮನತ್ತ ಓಡಿ ಹೋಗುತ್ತೆ। ಅಮ್ಮ ಅದನು ನೆಕ್ಕಿ ನೆಕ್ಕಿ ಮುದ್ದು ಮಾಡುತ್ತೆ॥2॥

### ಕಟ್ಟಿದ ಕಣ್ಣಿಯನು ಬಿಚ್ಚಿಕೊಳ್ಳಲು ರಾಗ:ಆನಂದಭೈರವಿ

ಕಟ್ಟಿದ ಕಣ್ಣಿಯನು ಬಿಚ್ಚಿಕೊಳ್ಳಲು ಅರಿಯೆ। ಹೊಟ್ಟೆಗೆ ಬೇಕೆಂದು ಕೇಳಲರಿಯೆ। ಪುಟ್ಟಕರು ಇಲ್ಲದಿರೆ ಕರೆದು ತಾರೆನಲರಿಯೆ। ನೀನಾರಿಗಾದೆಯೋ ಎಲೆ ಮಾನವಾ ಹರಿಹರಿ ಗೋವು ನಾನು॥1॥ ಇಟ್ಟರೆ ಸಗಣಿಯಾದೆ ತಟ್ಟಿದರೆ ಕುರುಳಾದೆ। ಸುಟ್ಟರೆ ನೊಸಲಿಗೆ ವಿಭೂತಿಯಾದೆ। ತಟ್ಟದೇ ಹಾಕಿದರೆ ಮೇಲು ಗೊಬ್ಬರವಾದೆ। ನೀನಾರಿಗಾದೆಯೋ ಎಲೆಮಾನವಾ॥2॥ ಹಾಲಾದೆ ಕರೆದರೆ, ಮೊಸರಾದೆ ಹೆತ್ತರೆ। ಮೇಲ್ಗೆನೆಯ ಕಡೆದರೆ ಬೆಣ್ಣೆಯಾದೆ। ಮೇಲಾದ ತುಪ್ಪವು ನಾನಾದೆ ಕಾಸಿದರೆ ನೀನಾರಿಗಾದೆಯೋ ಎಲೆ ಮಾನವಾ॥3॥ ಹಾದಿ ಬೀದಿಯಲಿರುವ ಕಸದ ಹುಲ್ಲನು ಮೇದು। ಬಂದು ಮನೆಗೆ ನಾನು ಅಮೃತವೀವೆ। ಅದನುಂಡು ನನಗೆರಡು ಬಗೆವ ಮಾನವ ನೀನು। ನೀನಾರಿಗಾದೆಯೋ ಎಲೆಮಾನವಾ॥4॥ ಹಾಯೆ ಹರಿಗೋಲಾದೆ, ರಾಯಭೇರಿಗೆ ಆದೆ। ರಾಯರಾ ಕಾಲಿಗೆ ಮುಳ್ಳೊತ್ತು ಆದೆ। ಆಯವರಿತು ಹೊಡೆಯೆ ಒಳ್ಳೆಗಾನಕೆ ಆದೆ। ನೀನಾರಿಗಾದೆಯೋ ಎಲೆ ಮಾನವಾ॥5॥ ದೇಹಶುದ್ಧಿಗೆ ನಾನು ಪಂಚಗವ್ಯವನೀವೆ। ವಾಹನಕೆ ಆಗುವನು ಎನ್ನ ಮಗನು। ಊಹೆಗಸದಳವಹುದು ನನ್ನ ಉಪಕಾರಗಳು ನೀನಾರಿಗಾದೆಯೋ ಎಲೆ ಮಾನವಾ॥6॥ ಉಳುವೆ ನಾ ಭೂಮಿಯನು ಹೊರುವೆ ನಾ ಹೇರನ್ನು। ತುಳಿದು ಕಡ್ಡಿಯ ಕಾಳ ವಿಂಗಡಿಸುವೆ!। ಕಳಪೆಯಾಗಿಹ ನೆಲವ ನಗುವ ತೋಪನು ಮಾಳ್ಪೆ। ನೀನಾರಿಗಾದೆಯೋ ಎಲೆ ಮಾನವಾ॥7॥ ಕರು ಸತ್ತ ಬೇಗೆಯಲಿ ನಾ ಬೇಯುತಿದ್ದರೆ। ಮರುಕವಿಲ್ಲದೆ ಸತ್ತಕರುವ ತಂದು। ತಿರುತಿರುಗಿ ಮುಂದಿಟ್ಟು ಹಾಲ ಕರೆವೆ ನೀನು। ನೀನಾರಿಗಾದೆಯೋ ಎಲೆ ಮಾನವಾ॥8॥

**ಮೇರೀ ಗೈಯ್ಯಾ (ಹಿಂದಿ)** **ರಾಗ:ಖರಹರಪ್ರಿಯ**

ಮೇರೀ ಗೈಯ್ಯಾ ಮೇರೀ ಗೈಯ್ಯಾ। ಉಜಲೀ ಉಜಲೀ ಸೀಧೀ ಸಾದೀ ಖಡೀ ಜುಗಾಲೀ ಕರತೀ ಹೈ। ಘರ್ ಮೇ ಸಾನೀ ಖಾಕರ್ ಬಾಹರ್ ಹರೀ ಘಾಸ್ ಭೀ। ಚರತೀ ಹೈ। ಬದಲೇ ಮೇ ಯಹ್ ಹಮ್ ಲೋಗೋಂ ಕೋ ಮಿಠಾ ದೂಧ್ ಪಿಲಾತೀ ಹೈ॥

## ಬಸವ

**ಗೆಜ್ಜೆಕಾಲನು ಕುಣಿಸುತ್ತಾ** **ರಾಗ:ಶಂಕರಾಭರಣ**

ಗೆಜ್ಜೆಕಾಲನು ಕುಣಿಸುತ್ತಾ। ಘಲುಕು ಘಲುಕು ಎನಿಸುತ್ತಾ। ಗಾಲಿಯ ಮೇಲೆ ಉರುಳುತ್ತಾ। ಬಾ ಬಾ ಬಸವಣ್ಣ॥1॥ ಆಟದ ಬಯಲಿಗೆ ಹೋಗೋಣ। ಗೋಲಿ ಬುಗುರಿ ಆಡೋಣ। ಹಸಿರು ಹುಲ್ಲಲಿಮಲಗೋಣ। ಬಾಬಾ ಬಸವಣ್ಣ॥2॥ ಅತ್ತೇ ಮನೆಗೆ ಹೋಗೋಣ। ಅವರೆಕಾಯಿ ತಿನ್ನೋಣ। ಅಲ್ಲಿಂದಿಲ್ಲಿಗೆ ಹೋಗೋಣ। ಬಾಬಾ ಬಸವಣ್ಣ॥3॥ ಮೋಟು ಬಾಲ ಮೇಲಕ್ಕೆತ್ತಿ। ಕೆಟ್ಟಮೂತಿ ನೆಟ್ಟಗೆ ಮಾಡಿ। ಕೊಟ್ಟದ್ದನ್ನು ಮುಟ್ಟಿ ನೋಡಿ। ಬಾಬಾ ಬಸವಣ್ಣ॥4॥ ಕೋಪ ಮಾಡಬೇಡಣ್ಣ। ಕೊಬ್ಬರಿ ಬೆಲ್ಲ ತಿನಿಸುವೆ। ಸಿಟ್ಟು ಬಿಟ್ಟು ಬಾರಣ್ಣ। ಅವರೆ ಹೊಟ್ಟು ಹಾಕುವೆ। ಬಾಬಾ ಬಸವಣ್ಣ॥ ಮೊಂಡು ಮಾಡಬೇಡಣ್ಣ॥5॥ ಬಂಡಿಹುಲ್ಲ ತಿನ್ನಿಸುವೆ। ಕೈಯ್ಯ ಮುಗಿದು ಕರೆಯುವೆ। ಬಾಬಾ ಬಸವಣ್ಣ॥6॥

## ನಾಯಿ

**ಟಾಮೀ2 ನಮ್ಮನೆ ನಾಯಿ** **ರಾಗ:ಶಂಕರಾಭರಣ**

ಟಾಮೀ ಟಾಮೀ ನಮ್ಮನೆ ನಾಯಿ। ಚುರುಕು ಅಂದರೆ ಚುರುಕು। ಆದರೆ ಸದಾ ಬೊಗಳುತ್ತಿ ರುವುದು। ಅದರ ಬಾಯೇ ಹರಕು॥1॥ ತಿಂಡಿ ಎಂದರೆ ಕಿವಿಯನು ಎತ್ತಿ ಬಾಲ ಕುಣಿಸುವುದು। ವಾಸನೆ ಬಂದರೆ ಅಡಿಗೆ ಮನೆಗೇ। ಸೀದಾ ನುಗ್ಗುವುದು॥2॥ ಅಜ್ಜಿಯು ಮಡಿಯಲಿ ಬಂದರೊ। ಟಾಮಿ ಓಡಿ ಮುಟ್ಟುವುದು। ಶನಿ ಮುಂಡೇದೆ ಎನ್ನುತ ಬಡಿಯಲು। ಕುಂಯ್ ಕುಂಯ್ ಗುಟ್ಟುವುದು॥3॥ ಪಕ್ಕದ ಮನೆಯ ಭಟ್ಟರ ಕಂಡರೆ। ಬೌಬೌ ಬೊಗಳುವುದು। ಕಿಟ್ಟೂ ಪುಟ್ಟೂ ಆಟಕೆ ಬಂದರೆ। ಥಕ ಥೈ ಕುಣಿಯುವುದು॥4॥ ದೂರ ಇದ್ದರೆ ಯಾರೇ ಇರಲಿ। ಜೋರು ಬೊಗಳುವುದು। ಅಟ್ಟಿ ಬಂದರೆ ಬಾಲ ಮುದುರಿ। ಒಳಗೇ ಓಡುವುದು॥5॥

**ಡೊಂಕುಬಾಲದ ನಾಯಕರೆ (ದೇವರನಾಮ)** **ರಾಗ: ಪೂರ್ವಿಕಲ್ಯಾಣಿ-ಆದಿತಾಳ**

ಡೊಂಕುಬಾಲದ ನಾಯಕರೆ ನೀವೇನೂಟ ಮಾಡಿದಿರಿ॥ಪ॥ ಕಣಕ ಕುಟ್ಟೋ ಅಲ್ಲಿಗೆ ಹೋಗಿ। ಹಣಿಕಿ ಇಣಿಕಿ ನೋಡುವಿರಿ। ಕಣಕ ಕುಟ್ಟೋ ಒನಕೆಲಿ ಬಡಿದರೆ। ಕುಂಯಿ ಕುಂಯಿ ರಾಗವ ಹಾಡುವಿರಿ॥1॥ ಹುಗ್ಗಿ ಮಾಡೋ ಅಲ್ಲಿಗೆ ಹೋಗಿ। ತಗ್ಗಿ ಬಗ್ಗಿ ನೋಡುವಿರಿ॥ಹುಗ್ಗಿ ಮಾಡೋ ಸೌಟಲಿ ಬಡಿದರೆ। ಕುಂಯಿ ಕುಂಯಿ ರಾಗವ ಮಾಡುವಿರಿ॥2॥ ಹಿರೇ ಬೀದಿಯಲಿ ಓಡುವಿರಿ। ಕರೇ ಬೂದಿಯಲಿ ಹೊರಳುವಿರಿ। ಪುರಂದರವಿಠ್ಠಲರಾಯನ ಈಪರಿ। ಮರೆತು ಸದಾ ನೀವ್ ಚರಿಸುವಿರಿ॥3॥

**ನಮ್ಮ ನಾಯಿ ಮೋತಿ**

ನಮ್ಮ ನಾಯಿ ಮೋತಿ। ಇದು ಒಳ್ಳೆ ಜಾತಿ। ಕಳ್ಳರಿಗಿದರ ಭೀತಿ। ನಾನು ಮಾಡುವೆ ಪ್ರೀತಿ॥

**ನಮ್ಮ ಪುಟ್ಟ ಬಹಳ**

ನಮ್ಮ ಪುಟ್ಟ ಬಹಳ ದಿಟ್ಟ। ನಾಯಿ ಬಾಲ ಜಗ್ಗಿದ। ಬೌ ಬೌ ಬೊಗಳಿದಷ್ಟು ಅವನು ಬಹಳ ಹಿಗ್ಗಿದ॥

### ನಮ್ಮ ಮನೆಯ ಪುಟ್ಟ ಟಾಮಿ

ನಮ್ಮ ಮನೆಯ ಪುಟ್ಟ ಟಾಮಿ ಬೊಗಳಿ ಬಿಡುವುದು। ಸದಾ ಮನೆಯ ಕದದ ಮುಂದೆ ಕುಳಿತು ಬಿಡುವುದು। ಬಾಲ ಅಲ್ಲಾಡಿಸಿ ಊಟವನ್ನು ತಿಂದುಬಿಡುವುದು॥1॥ ಹಾಕದಿದ್ದರೆ ನಮ್ಮನ್ನೇ ನೋಡುತಿರುವುದು॥ ಮಕ್ಕಳ ಜೊತೆ ಎಗರಿ ಎಗರಿ ಆಟವಾಡುವುದು। ಶಬ್ದ ಬಂದ ಕಡೆ ನೆಗೆದು ಓಡಿ ಹೋಗುವುದು॥2॥

### ನಾಯಿಯ ಮರಿಯೆ ಬಾಬಾ

ನಾಯಿಯ ಮರಿಯೆ ಬಾಬಾ ಮರಿಯೆ ಬಾಗಿಲ ಕಾಯುವ ಪುಟಾಣಿ ಮರಿಯೆ। ತಿಂಡೀ ಕೊಡುವೆ ಮೂಸಿ ತಿನ್ನಲು ಬಾ ಬಾ॥1॥ ಬಾಗಿಲ ಬಳಿಯಲಿ ಬಿದ್ದಿಹೆ ಏಕೆ? ಊಟವಿಲ್ಲದೆ ಕೊರಗುವೆ ಏಕೆ? ಡೊಂಕಿನ ಬಾಲವ ತಿರುವುತ ಬಾಬಾ॥2॥ ಗೆಳೆಯನು ನಾನಿರೆ ಚಿಂತೆ ಇದೇಕೆ? ಬಳಿಯೊಳು ಬೆಚ್ಚಗೆ ನಿನ್ನನು ಮಲಗಿಸಿ ಸಾಕುವೆ ಮರಿಯೆ ಓಡುತ ಬಾಬಾ॥ ಬೌ ಬೌ ಎಂದು ಬೊಗಳುತ ಬಾಬಾ॥3॥

### ನಾಯಿಮರಿ2 ತಿಂಡಿ ಬೇಕೆ? ರಾಗ:ಶಂಕರಾಭರಣ

'ನಾಯಿಮರಿ ನಾಯಿಮರಿ ತಿಂಡಿ ಬೇಕೆ?'। 'ತಿಂಡಿ ಬೇಕು ತೀರ್ಥ ಬೇಕು ಎಲ್ಲಾಬೇಕು'॥1॥ 'ನಾಯಿಮರಿ ತಿಂಡಿ ನಿನಗೆ ಏಕೆ ಬೇಕು?'। 'ತಿಂದು ಗಟ್ಟಿಯಾಗಿ ಮನೆಯ ಕಾಯಬೇಕು'॥2॥ 'ನಾಯಿಮರಿ ಕಳ್ಳ ಬಂದರೇನು ಮಾಡುವೆ?' 'ಲೊಳ್ ಲೊಳ್ ಭೌ ಎಂದು ಕೂಗಿಹೇಳುವೆ'॥3॥ 'ಜಾಣ ಮರಿ ತಾಳು ಹೋಗಿ ತಿಂಡಿ ತರುವೆನು'। 'ತಾ ನಿನ್ನ ಮನೆಯ ನಾನು ಕಾಯುತಿರುವೆನು'॥4॥

### ನಾಯಿ2 ಮನೆಯ ಕಾಯಿ

ನಾಯಿ ನಾಯಿ ಮನೆಯ ಕಾಯಿ। ದೊಡ್ಡದು ಮಾಡ ಬೇಡ ಬಾಯಿ। ಬೌ ಬೌ ಎನಲು ಎಂಥ ಚೆಂದ। ನನಗೂ ಕಲಿಸು ಇವತ್ತಿಂದ॥1॥ ಹೋಗ್ಹೋಗೋ ಬಂದ ಕುಂಯ್ ಕುಂಯ್ ಬೊಗಳುವುದೆನಗೆ ಚೆಂದ। ಬೇಡವೋ ನಿನಗೆ ಅದರ ಬೇಗೆ॥2॥

## ಕುರಿ

### ಚಿಕ್ಕ ಮರಿ ಚೆಲುವ ಮರಿ

ಚಿಕ್ಕ ಮರಿ ಚೆಲುವ ಮರಿ ಕುರಿಯ ಮರಿಯೆ ಬಾಬಾ। ಪುಟ್ಟ ಹೆಜ್ಜೆ ಇಟ್ಟು ಬೇಗ ಓಡಿ ಬಾಬಾ॥ 1॥ ಹಸಿರು ಹುಲ್ಲು ಬಟ್ಟ ಬಯಲು ಎಲ್ಲ ಕಡೆಯಲು ಹರುಷದಿಂದ। ಕುಣಿದು ಕುಣಿದು ಓಡಿ ಬಾಬಾ॥2॥

## ನರಿ

### ನರಿಯು ತೋಟಕೆ

ನರಿಯು ತೋಟಕೆ ಹೋಯಿತು। ಸುತ್ತ ತಿರುಗಿ ನೋಡಿತು। ಚಪ್ಪರದ ದ್ರಾಕ್ಷಿ ಕಂಡಿತು। ಬಾರಿ ಬಾರಿ ನೆಗೆಯಿತು। ಸಿಗದ ದ್ರಾಕ್ಷಿಯ ಹುಳಿ ಎಂದಿತು। ಹಿಂದಿರುಗಿನೋಡಿ ಓಡಿ ಹೋಯಿತು॥

## ಕೋತಿ

### ಉದ್ದನೆ ಬಾಲದ ಮಂಗಣ್ಣ

ಉದ್ದನೆ ಬಾಲದ ಮಂಗಣ್ಣ। ನೀನೊಂದು ಲಾಗ ಹಾಕಣ್ಣ। ಜಿಗಿದು ಮೇಲಕ್ಕೆ ನೆಗೆದು। ದೊಪ್ಪನೆ ಬೀಳೋ ಮಂಗಣ್ಣ॥1॥ ಮೂತಿಯ ನೋಡು ಮಂಗಣ್ಣ। ಆಟ ಆಡುವ ಬಾರಣ್ಣ। ಕೊಬ್ಬರಿ ಕೊಡುವೆನು ಬಾರಣ್ಣ॥2॥

### ಗೇರ್2 ಮಂಗಣ್ಣ ಕಡ್ಲೆಕಾಯ್

ಗೇರ್ ಗೇರ್ ಮಂಗಣ್ಣ ಕಡ್ಲೆಕಾಯ್ ನುಂಗಣ್ಣಾ। ಕೊಂಬೆಯಿಂದ ಕೊಂಬೆಗೆ ಹೈಜಂಪ್ ಮಾಡೋ ಹನುಮಣ್ಣಾ॥ ಆಟಕ್ ಕರ್‍ಕೊ ನನ್ನನ್ನೂ। ಲಾಗ ಹಾಕ್‌ತೀನಿ ನಾನೂನೂ। ಜೇಬೀನ್ ತುಂಬಾತಿಂಡಿನಾ ತಂದೀದೀನಿ ನಿನಗೂನು॥1॥ ಬೇರೆ ಕೋತಿ ಬೆನ್ನಿಂದ। ಹೇನು ಹೆಕ್ಕೋದು ಯಾಕಪ್ಪಾ। ಹೆಕ್ಕಿ ಅದನ್ನೇ ತಿಂತೀಯಾ। ಥೂಥೂ ಕೊಳಕಪ್ಪ। ಮರದ್ ತುಂಬಾ ಚೀಪೆಕಾಯ್ ಎಲ್ಲಾ ನಿಂಗೆ ಯಾಕಣ್ಣಾ। ಎರಡೇ ಎರಡು ಕಾಯಿನಾ ಕಿತ್ತು ತಂಮ್ಮ್‌ಗೆ ಹಾಕಣ್ಣಾ॥2॥ ಒಂದೇ ಗೇಣು ಇದ್ದೀಯಾ। ಲಂಕೆಗ್ಹಾರಿದ್ಯಂತಲ್ಲಾ। ಲಂಕೆಗೆ ಬೆಂಕಿ ಇಟ್ಯಂತೆ। Monkey ಅಂದ್ರೆ ನೀನಲ್ವಾ। ಪಿಳ್ ಪಿಳಾಂತ ಕಣ್ ಬಿಟ್ಟು। ಹಲ್ ಕಿರಿಯೋದು ಯಾಕಣ್ಣಾ। ನಿನ್ ಹಾಗೇನೇ ಆಡ್ತಾನೆ। ನಮ್ ಪಕ್ಕದ್ ಮನೆ ರಂಗಣ್ಣಾ॥3॥

### ಚಿಕ್ಕ ಪುಟ್ಟ ಮಕ್ಕಳೆಲ್ಲ

ಚಿಕ್ಕ ಪುಟ್ಟ ಮಕ್ಕಳೆಲ್ಲ ಸೇರುವೆವು। ತಾಳಗಳೊಡನೆ ಹಾಡುವೆವು। ಪುಂಡತನ ಕುಣಿತವ ಕುಣಿಯುವೆವು। ಮಂಗನ ಲೋಕಕೆ ಹೋಗುವೆವು॥

### ದೊಡ್ಡ ಕೋತಿ ಬಂದಿತು

ದೊಡ್ಡ ಕೋತಿ ಬಂದಿತು। ಅಂಗಡಿ ಮನೆಗೆ ನುಗ್ಗಿತು। ಬಾಳೆಹಣ್ಣು ತಿಂದಿತು। ದೊಣ್ಣೆ ಪೆಟ್ಟು ಬಿದ್ದಿತು॥1॥ ಬೀದಿ ನಾಯಿ ಬೊಗಳಿತು। ಕೋತಿ ದೂರ ನೆಗೆಯಿತು। ಓಡಿ ಮರವ ಹತ್ತಿತು। ಕೆಳಗೆ ಜನರ ಕಂಡಿತು॥2॥ ಹಲ್ಲು ಕಿರಿದು ನೋಡಿತು। ಕೋರೆ ಹಲ್ಲು ತೋರಿತು। ಉಗ್ರ ರೂಪ ತಾಳಿತು। ಕಲ್ಲು ಹೊಡೆತ ತಿಂದಿತು॥3॥ ತಲೆಗೆ ಪೆಟ್ಟು ತಾಕಿತು। ರಕ್ತ ಧಾರೆ ಹರಿಯಿತು। ನೋವು ತಿಂದು ಚೀರಿತು। ಸತ್ತು ಕೆಳಗೆ ಉರುಳಿತು॥4॥

### ಬಾಳೆಯ ತೋಟದ (ಕಥನ ಕವನ) ರಾಗ:ಕಾನಡ

ಬಾಳೆಯ ತೋಟದ ಪಕ್ಕದ ಕಾಡೊಳು ವಾಸಿಸುತಿದ್ದುವು ಮಂಗಗಳು। ಮಂಗಗಳೆಲ್ಲವು ಒಟ್ಟಿಗೆ ಸೇರುತ ಒಂದುಪವಾಸವ ಮಾಡಿದುವು। ಏನೂ ತಿನ್ನದೆ ಮಟಮಟ ನೋಡುತ। ಇದ್ದುವು ಮರದಲಿ ಕುಳಿತಲ್ಲೆ। "ನಾಳೆಗೆ ತಿಂಡಿಯ ಈಗಲೆ ಹುಡುಕುವ ಬನ್ನಿರಿ" ಎಂದಿತು ಕಪಿಯೊಂದು॥1॥ "ಹೌದೌದಣ್ಣಾ" ಎಂದೆನ್ನುತ। ಎಲ್ಲವು ಬಾಳೆಯ ತೋಟಕೆ ಹಾರಿದುವು। ತೋಟದಿ ಬಾಳೆಯ ಹಣ್ಣನು ನೋಡಲು ಆಶೆಯು ಹೆಚ್ಚಿತು ನೀರೂರಿ॥ "ಸುಲಿದೇ ಇಡುವ ಆಗದೆ?" ಎಂದಿತು। ಆಶೆಯ ಮರಿಕಪಿಯೊಂದಾಗ॥2॥ "ಹೌದೌದೆ"ನ್ನುತ ಹಣ್ಣನು ಸುಲಿದುವು। ಕೈಯೊಳೆ ಹಿಡಿದೂ ಕುಳಿತಿರಲು॥ 'ಕೈಯಲ್ಲೇತಕೆ ಬಾಯೊಳಗಿಟ್ಟರೆ ಆಗದೆ?"ಎಂದಿತು ಇನ್ನೊಂದು। ಹಣ್ಣನು ಬಾಯಲಿ ಇಟ್ಟವು। "ಜಗಿದೇ ಇಡುವೆವು" ಎಂದಿತು ಮತ್ತೊಂದು॥ ಜಗಿದೂ ಜಗಿದೂ ನುಂಗಿದುವೆಲ್ಲಾ। ಆಗಲೆ ಮುಗಿಯಿತು ಉಪವಾಸ॥3॥

### ಬಾರೋ2 ಮಂಗಣ್ಣ ನಾನು ಹಾಡುವೆ

ಬಾರೋ ಬಾರೋ ಮಂಗಣ್ಣ। ನಾನು ಹಾಡುವೆ ರಾಗ। ನಿನಗೆ ಉಂಟು ಬಾಲ। ನೀನು ಹಾಕುವೆ ಲಾಗ॥1॥ ಹಣ್ಣು ಗಿಣ್ಣು ತಿನ್ನುವೆ। ಸಿಪ್ಪೆ ಗಿಪ್ಪೆ ಎಸೆಯುವೆ। ಮರದಿಂದ ಮರಕ್ಕೆ ಹಾರುವೆ॥ ಮುದುಕನಂತೆ॥2॥ ನಡೆಯುವೆ ಡ್ಯಾನ್ಸ್ ಗೀನ್ಸ್ ಮಾಡುವೆ। ಕಿಸ್ ಗಿಸ್ ಕೊಡುವೆ। ಹಾಡುಗೀಡು ಹಾಡುವೆ। ಕುಂಟನಂತೆ ನಡೆಯುವೆ॥3॥ ಕಾಯಿ ಗೀಯಿ ಕಡಿಯುವೆ। ಟೆಸ್ಟ್ ಗಿಸ್ಟ್ ಮಾಡುವೆ। ನಿನಗೆ ಇಷ್ಟ ಟೋಪಿ। ನೆಗೆದು ನೆಗೆದು ನಲಿಯುವೆ॥4॥

### ಬಾರೋ2 ಮಂಗಣ್ಣ ಬಾಳೆಹಣ್ಣು

ಬಾರೋ ಬಾರೋ ಮಂಗಣ್ಣ। ಬಾಳೆಹಣ್ಣು ನುಂಗಣ್ಣ। ಮರದ ಮೇಲೆ ಕೂಡಣ್ಣ। ತಿಪ್ಪರಲಾಗ ಹಾಕಣ್ಣ।।

### ಮರದಲ್ಲೊಂದು ಮಂಗಣ್ಣ

ಮರದಲ್ಲೊಂದು ಮಂಗಣ್ಣ ಹಣ್ಣನು ಕೊಡುವೆನು ಬಾರಣ್ಣ। ಸಂಶಯ ನಿನಗೆ ಬೇಡಣ್ಣ। ಪರಪರ ಮೈಯನು ಕೆರೆಯಣ್ಣ। ಪಟಪಟ ಲಾಗವ ಹೊಡೆಯಣ್ಣ। ಕೀಟಲೆ ಮಾಡಲು ಬೇಡಣ್ಣ।।

### ಮರದ ಮೇಲಿಹ ಮಂಗಣ್ಣ

ಮರದ ಮೇಲಿಹ ಮಂಗಣ್ಣ ಹಣ್ಣನು ಕೊಡುವೆನು ಬಾರಣ್ಣ। ಕಣ್ಣನು ಪಿಳಿಕಿಸಿ ನೋಡಣ್ಣ। ಪರಪರ ಮೈಯನು ಕೆರೆಯಣ್ಣ।। ಚಟಪಟ ಲಾಗವ ಹಾಕಣ್ಣ। ಹಲ್ಲನು ಕಿರಿದು ಅರಚಣ್ಣ। ಚಂಗನೆ ಹಾರಿ ಕುಣಿಯಣ್ಣ। ಹಣ್ಣು ಹಿಡಿದು ಓಡಣ್ಣ।।

## ಬೆಕ್ಕು

### ಎಲೆಲೆ ಬೆಕ್ಕೆ ನೀ

ಎಲೆಲೆ ಬೆಕ್ಕೆ ನೀ। ಹುಲಿಯ ಸಾಮ್ಯವನು ತಳೆದಿರುತಿಹೆನೆಂದು ಬಲುಗರುವವ ನೀ ಬೆಳೆಯಿಸದಿರು ಹುಲಿ ಬಲುಮೆಯು ನಿನಗಿಹುದೇ?।। ಸುಳಿಸುಳಿದೀಕ್ಷಿಸಿ ನೆಲುವಿಗೆ ಹಾರುತ ತುಳುಕಿಸಿ ಪಾಲ್ಮಡಕೆಗಳನಿಳೆಗುರುಳಿಸಿ ಕೆಳಗಡೆ ಚೆಲ್ಲಿದ ಚಿನಿಪಾಲನು ಕುಡಿವೆ।। ಬಿಲಗಳ ಬಳಿಯೊಳು ಬಳಬಳಸುತ ಸಪ್ಪಳ ಮಾಡದೆ ನೀನು ಕುಳಿತು ಹೊಂಚಿ ಸಣ್ಣಿಲಿಗಳ ಹಿಡಿವುದರೊಳಗೆಯೆ ಕಲಿತನವು।।

### ಎರಡು ಬೆಕ್ಕು ಬಂದವು

ಎರಡು ಬೆಕ್ಕು ಬಂದವು। ರೊಟ್ಟಿಯನ್ನು ತಂದವು। ನನಗೆ ನಿನಗೆ ಎಂದುಕೊಂಡು ಹಂಚಿಕೊಂಡು ತಿಂದವು।।

### ನಮ್ಮ ಮನೆಯ ಬೆಕ್ಕು

ನಮ್ಮ ಮನೆಯ ಬೆಕ್ಕು। ತೀರಾ ಹೆದರು ಪುಕ್ಕು। ಹಾಲು ಮೊಸರು ನೀಡಲು। ತೋರಿಸದು ಸೊಕ್ಕು।।

### ನಮ್ಮ ಮನೆಯ ಪುಟ್ಟ ಬೆಕ್ಕು — ರಾಗ:ಶಂಕರಾಭರಣ

ನಮ್ಮ ಮನೆಯ ಪುಟ್ಟ ಬೆಕ್ಕು। ಬಿರ್ಜು ಅದರ ಹೆಸರು। ಬಾಳ ಇಷ್ಟ ಬಿರ್ಜೂಗೆ। ಗಟ್ಟಿಹಾಲು ಮೊಸರು।।ಪ।। ಬಿರ್ಜುಗಿದೆ ಗಾಜುಗಣ್ಣು। ಗೋಲಿಯಂತೆ ಫಳಫಳ। ಅದರ ಬಣ್ಣ ಸೇಬಿನ್ಹಣ್ಣು। ರೇಶ್ಮೆಯಂತೆ ಥಳಥಳ। ಮಲಗಿದ್ದರೆ ಪುಟ್ಟ ಹುಲಿ। ಓಡುತಿದ್ರೆ ಚೂಪು ಇಲಿ। ರಾತ್ರಿ ಇಡೀ ಬಿರ್ಜು। ಬೇಟೆಯಾಡಿ ಬರುವುದು।।1।। ಹಗಲು ಮಲಗಿ। ಇಲಿಯ ಕನಸ ಕಾಣುತಿರುವುದು। ಅಮ್ಮ ಕೊಂಚ ಕೂತಳೋ। ಬಿರ್ಜು ಓಡಿಬರುವುದು। ಮಗುವಿನಂತೆ ಅಮ್ಮನ ತೊಡಿ ಏರಿ। ಕೂತು ಬಿಡುವುದು।।2।। ಅಮ್ಮನ ಮೈ ಹತ್ತಿ। ಎದೆಗೆ ಕೈಯ್ಯನೊತ್ತಿ। ಪಾಪನಂತೆ ಕಣ್ಣು ಮುಚ್ಚಿ ಒರಗಿ ಬಿಡುವುದು।। ಜೊಂಪು ಹತ್ತಿ ಮೆಲ್ಲಗೆ ಗೊರಕೆ ಹೊಡೆವುದು।। ಬಾರೋ ಬಿರ್ಜು ಬಾರೋ। ಕಾಂಪೌಂಡನು ಹಾರೋ। ಗಟ್ಟಿಹಾಲು ಕುಡಿದು। ಆಗು ಬೆಕ್ಕುಗಳಿಗೆ ಹೀರೋ। ರೂಪ ನಡಿಗೆ ಗತ್ತಿನಲ್ಲಿ ನೀನು। ಥೇಟು ಹುಲಿ। ಬೇಟೆಯಾಡಿ ಹಿಡಿಯುವುದೋ। ವರ್ಷಕ್ಕೊಂದು ಇಲಿ।।3।।

### ಬೆಕ್ಕಣ್ಣಾ2 ಮನ್ಯಾಗೆಯಾರು

ಬೆಕ್ಕಣ್ಣಾ ಬೆಕ್ಕಣ್ಣಾ। ಮನ್ಯಾಗೆಯಾರು ಇಲ್ಲಣ್ಣ। ಕಿಟಕಿ ಒಳಗೆ ಬಾರಣ್ಣ। ಹಾಲಿನ ಡಬರಿ ನೆಕ್ಕಣ್ಣ।।

### ಬೆಕ್ಕು ಬಂತು ಬೆಕ್ಕು

ಬೆಕ್ಕು ಬಂತು ಬೆಕ್ಕು। ಅಡುಗೆ ಮನೆಗೆ ಬಂತು। ಮ್ಯಾವ್ ಮ್ಯಾವ್ ಎಂದಿತು ನಿಂತು। ಹಾಲು ಮೊಸರು ತಿಂತು। ಅಮ್ಮ ನೋಡಿದಳಾಗ। ಹಿಡಿದಳು ಬೆತ್ತ ಬೇಗ॥

**ಬೆಕ್ಕು ಒಂದು ಬಂದಿತು**

ಬೆಕ್ಕು ಒಂದು ಬಂದಿತು। ನಮ್ಮ ಮನೆಯ ಸೇರಿತು। ಅಡುಗೆ ಮನೆಗೆ ಹೋಯಿತು। ಹಾಲು ಕದ್ದು ಕುಡಿಯಿತು। ಮ್ಯಾವ್ ಮ್ಯಾವ್ ಎಂದಿತು। ನನ್ನ ಬಳಿಗೆ ಬಂದಿತು। ನನ್ನ ತೊಡೆಯ ಮೇಲೆ। ಮಲಗಿ ನಿದ್ದೆ ಮಾಡಿತು॥

**ಬೆಕ್ಕು2 ಬೇಗ ಬಾ ಬೆಣ್ಣೆಮುದ್ದೆ**

ಬೆಕ್ಕು ಬೆಕ್ಕು ಬೇಗ ಬಾ॥ಪ॥ ಬೆಣ್ಣೆ ಮುದ್ದೆ ತಿಂದು ಬಾ। ಕದ್ದು ಹಾಲು ಕುಡಿದು ಬಾ। ತಿಂದು ತೇಗಿ ಜಿಗಿದು ಬಾ। ಎದ್ದು ಬಿದ್ದು ಓಡಿ ಬಾ॥1॥ ಇಲಿಗಳ ಸಡಗರ ನೋಡು ಬಾ। ಬಿಲಗಳ ಬಳಿಯಲಿ ನಿಲ್ಲು ಬಾ। ಅಪ್ಪಿಲಿ ಅಮ್ಮಿಲಿ ತೋರುವೆ ಬಾ। ಅವ್ವಿಲಿ ಅಜ್ಜಿಲಿ ಕಾಣುವೆ ಬಾ॥2॥ ಸದ್ದುಗದ್ದಲ ಮಾಡದೆ ಬಾ। ಜೋಡಿಲಿ ಹಿಡಿದು ಆಡುವ ಬಾ। ಚೆಂಡಿನಾಟವ ತೋರುವೆ ಬಾ। ಮಂಚವನೇರಿ ಮಲಗುವ ಬಾ॥3॥

**ಬೆಕ್ಕೆ2 ಮುದ್ದಿನ ಸೊಕ್ಕೆ** — **ರಾಗ:ಕುರಂಜಿ**

ಬೆಕ್ಕೆ ಬೆಕ್ಕೆ ಮುದ್ದಿನ ಸೊಕ್ಕೆ। ಎಲ್ಲಿಗೆ ಹೋಗಿದ್ದೆ?। ಕರೆದರು ಇಲ್ಲ ಹಾಲು ಬೆಲ್ಲ। ಕಾಯಿಸಿ ಇಟ್ಟಿದ್ದೆ॥ ಕೇಳೊ ಕಳ್ಳ ಮುದ್ದಿನ ಮಳ್ಳ। ಮೈಸೂರರಮನೆಗೆ। ರಾಜನ ಸಂಗಡ ರಾಣಿಯು ಇದ್ದಳು। ಅಂತಃಪುರದೊಳಗೆ॥2॥ ಬೆಕ್ಕೆ ಬೆಕ್ಕೇ ಬೇಗನೆ ಹೇಳು। ನೋಡಿದ ಆನಂದ॥ ರಾಣಿಯ ಮಂಚದ ಕೆಳಗಡೆ ಕಂಡೆನು। ಚಿಲಿಪಿಲಿ ಇಲಿಯೊಂದ॥3॥

**ಬೆಕ್ಕಿನ ಮರಿಯೆ2 ಹಾಲನ್ನೇಕೆ** — **ರಾಗ:ಕುರಂಜಿ**

ಬೆಕ್ಕಿನ ಮರಿಯೆ ಬೆಕ್ಕಿನ ಮರಿಯೆ। ಹಾಲನ್ನೇಕೆ ಕುಡಿದು ಬಿಟ್ಟೆ? ಪುಟ್ಟ ತಮ್ಮ ಅಳುವನಲ್ಲಾ। ಅದಕೆ ನಿನಗೆ ಏಟುಕೊಟ್ಟೆ॥1॥ ಅಜ್ಜಿಯ ಪೆಟ್ಟಿಗೆ ಅಟ್ಟದ ಮೇಲೆ। ಅದರ ತುಂಬ ಹಳೆಯ ಬಟ್ಟೆ। ತಿಂದು ಬಿಟ್ಟಿದೆ ಇಲಿಯು ಎಲ್ಲಾ। ಇಲಿಯ ತಿನ್ನದೆ ಏಕೆ ಬಿಟ್ಟೆ?॥2॥ ಪಕ್ಕದ ಮನೆಯ ಕಪ್ಪು ನಾಯಿ। ತಿನ್ನಲು ಬಹುದು ನಿನ್ನನಟ್ಟಿ। ಜಿಗಿದು ಓಡು ಮುಚ್ಚಿ ಬಾಯಿ। ಆಗಲೆ ನಿನ್ನ ಜೀವ ಗಟ್ಟಿ॥3॥

## ಮೊಲ

**ನಾನು ಪುಟ್ಟ ಪ್ರಾಣಿ**

ನಾನು ಪುಟ್ಟ ಪ್ರಾಣಿ। ಮಾಡೋದಿಲ್ಲ ಹಾನಿ। ಕೆಂಪು ಗಾಜು ಕಣ್ಣು। ತಿನ್ನುವೆ ಹುಲ್ಲು ಹಣ್ಣು। ಹಾಲಿನಂಥ ಬಣ್ಣ। ಯಾರು ಹೇಳು ಅಣ್ಣ। ನಾನೇ ಮೊಲ ಅಂತ ಸಣ್ಣ ಪ್ರಾಣಿ ಕಾಣಣ್ಣ॥3॥

**ಮನೆ ಎದುರಲೊಂದು**

ಮನೆ ಎದುರಲೊಂದು ಬಿಲ। ಅದರಲೊಂದು ಮೊಲ। ಅದನು ನೋಡಿ ಪುಟ್ಟಿ। ನಗುವಳು ಕಿಲಕಿಲ॥

**ಮೊಲದ ಮರಿ** — **ರಾಗ:ಶಂಕರಾಭರಣ**

ಮೊಲದ ಮರಿ ಮೊಲದ ಮರಿ। ಆಡು ಬಾರೆ ಚುಪುಕೆ ಚುಪುಕೆ ಚುಪುಕೆ ಚುಪುಕೆ ನೆಗೆದು ಬಾರೆ॥1॥ ದೊಡ್ಡದಾದ ಕಾಡಿನೊಳಗೆ ಏನು ಮಾಡುವೆ? ಹೆಡ್ಡ ನೀನು ಪೊದರಿನೊಳಗೆ ಏಕೆ ಅಡಗುವೆ?॥2॥ ಪೊದರಿನಿಂದ ಪೊದರ ಬಳಿಗೆ ನಿನ್ನ ಆಟ। ಗಿಡದ ಚಿಗುರು ನಿತ್ಯ ನಿನಗೆ ಸೊಗಸಿನೂಟ॥3॥ ಗಿಡ್ಡ ಬಾಲ ದೊಡ್ಡ ಕಿವಿಯು ನಿನಗೆ ಚೆಂದ। ಎದ್ದು ಎನ್ನ

ಬಳಿಗೆ ಬಂದು ಆಡೊ ಕಂದಾ।।4।। ಗೂಡು ಕಟ್ಟಿ ತಿಂಡಿ ಕೊಡುವೆ ಪ್ರೀತಿಯಿಂದಾ। ಕಾಡ ಬಿಟ್ಟು ಗೂಡು ಸೇರೊ ಮೊಲದ ಕಂದಾ।।5।। ಮುದ್ದು ಮುದ್ದು ಮಾತುಗಳನು ನಿನಗೆ ಕಲಿಸುವೇ। ಮುದ್ದು ಮಾಡಿ ಪ್ರೀತಿಯಿಂದ ನಿನ್ನ ಸಲಹುವೇ।।6।।

## ಅಳಿಲು

### ಅಳಿಲೇ2 ಮುದ್ದಿನ ಅಳಿಲೇ? ರಾಗ:ಹಿಂದೋಳ

ಅಳಿಲೇ ಅಳಿಲೇ ಮುದ್ದಿನ ಅಳಿಲೇ ಓಡುವೆ ಏತಕೆ ನನ್ನ ಕಂಡರೆ ಟಕ್ಕನೆ ಹಾರಿ ಮರದಲಿ ಕೂರುವೆ।।1।। ಚಿಕ್ ಚಿಕ್ ಚಿಂವ್ ಚಿಂವ್ ಹಾಡುತ್ತ ಅತ್ತಿತ್ತ ನೆಗೆಯುತ ಪಿಳಿ ಪಿಳಿ ಎಂದು ಕಣ್ಣನು ಬಿಟ್ಟು ಅತ್ತಿತ್ತ ನೋಡುವೆ।।2।। ಮೂರು ಬಿಳಿಯ ಪಟ್ಟೆ ನಾಮ ಬೆನ್ನ ಮೇಲಿದೆ। ರೇಶಿಮೆಯಂಥ ನುಣ್ಣನೆ ಕೂದಲು ನಿನ್ನ ಮೈಗಿದೆ।।3।। ಹಣ್ಣು ಕಾಯಿ ಬೀಜ ಗೊರಟು ಹುಡುಕಿ ಅಲೆಯುವೆ। ಕಷ್ಟಪಟ್ಟು ಮೈಕೈ ಮುರಿದು ದುಡಿದು ತಿನ್ನುವೆ।।4।। ಪುಟ್ಟ ರೂಪ ಚೂಟಿ ದೇಹ ನೀ ಸುಮ್ಮನಿರೋಲ್ಲ। ಸದಾ ದುಡಿಯುವ ನಿನ್ನ ರೀತಿಗೆ ಸಮರು ನಿನಗಿಲ್ಲ।।5।।

### ಚಿಕ್2 ಚಿವ್2 ಎಂದುಕೊಂಡು ರಾಗ: ಶಂಕರಾಭರಣ

"ಚಿಕ್ ಚಿಕ್ ಚಿವ್ ಚಿವ್" ಎಂದುಕೊಂಡು। ಮರಗಳಲ್ಲಿ ಅತ್ತ ಇತ್ತ ಓಡುತಿರುವೆ। ನಾನು ಯಾರು?।।1।। ಹಣ್ಣು ಕಾಯಿ ಬೀಜ ಗೊರಟು। ದವಸಧಾನ್ಯವೆಲ್ಲವನ್ನು ತಿಂದುಕೊಂಡು। ಹೊಟ್ಟೆ ಹೊರೆವೆ ನಾನು ಯಾರು?।।2।। ಮರದ ಚಿಕ್ಕ ಪೊಟರೆಯೊಳಗೆ ಗೂಡುಕಟ್ಟಿ ಮರಿಗಳೊಡನೆ ವಾಸಮಾಡುತಿರುವೆನಣ್ಣ। ನಾನು ಯಾರು?।।3।। ಉಣ್ಣೆಯಂತೆ ನುಣ್ಣಗಾದ ರೋಮವಿರುವ। ಬೆನ್ನ ಮೇಲೆ ಬಿಳಿಯ ಮೂರು ಗೆರೆಗಳಿಹವು। ನಾನು ಯಾರು?।।4।। "ಚಿಕ್ ಚಿಕ್ ಚಿವ್ ಚಿವ್ ಚಿಕ್ ಚಿಕ್ ಚಿವ್ ಚಿವ್" ಎನುವ। ಪುಟ್ಟ ಹಾಡುಗಾರ ನಾನು ಯಾರು?।।5।।

## ಕಪ್ಪೆ

### ಆಡ ವೈತಾಲೂ ಬೆ ಬೊ (ಕೊಂಕಣಿ)

ಆಡ ವೈತಾಲೂ ಬೆ ಬೊ ಶತಾ ಮೆರೆ ರ್ ಉಬೊ ಹಾಯೆ ಮಣಲೆ। ಬೆಬ್ಯಾ ಬೆಬ್ಯಾ ಖ್ಯೆಯರೆ ತೂರ್ಝೋ ಗಾವ್ ಡೂಪಕಿ ಮಾರೂನ್ ಬೆಬ್ಯಾನ ಮಣಲೆಟರಾವ್ ಟರಾವ್।।

### ಕೆರೆಯಲಿರುವ

ಕೆರೆಯಲಿರುವ ಕಪ್ಪೆ ನಿನಗೆ। ಏನು ಬಂತೆ ಸಂಕಟ। ಮೂಲೆ ಹಿಡಿದ ಮುದುಕಿಯಂತೆ। ಒದರುತಿರುವೆ ವಟವಟ।।1।। ಇಲ್ಲಿ ಮುಳುಗಿ ಅಲ್ಲಿ ಎದ್ದು ನೀರಿನಾಟ ಆಡುವೆ। ಏನನರುಸುತಿರುವೆ ಹೇಳು ಅತ್ತ ಇತ್ತ ನೆಗೆಯುವೆ।।2।। ಈಜ ಕಲಿಸಿ ಕೊಡುವೆ ಏನು। ಕೆರೆಯ ನೀರಿಗಿಳಿದರೆ। ತಂದು ಕೊಡುವೆ ಒಂದು ನಾನು। ಪೇಟೆಯಿಂದ ಉಡುಗೊರೆ।।3।।

### ಮಣ್ಣ ಬಣ್ಣ ನೀಲಿ ಕಣ್ಣ ರಾಗ:ನೀಲಾಂಬರಿ

ಮಣ್ಣ ಬಣ್ಣ ನೀಲಿ ಕಣ್ಣ ಸಣ್ಣ ಜೀವಿ ನಾನು। ಸಂಜೆ ಹೊತ್ತು ಕೆರೆಯಾ ಸುತ್ತು। ನೋಡಿರುವೆಯಾ ನೀನು।।1।। ಬೇಸಿಗೆಯಲಿ ನೆಲದ ಒಳಗೆ ವಾಸವಿರುವೆನು, ಸುಡುವ ಬಿಸಿಲ ಕಾಲದಲ್ಲಿ ಅಡಗಿ ಬಿಡುವೆನು।।2।। ಬಿತ್ತಿ ಬೆಳೆವ ಹಳ್ಳಿ ರೈತ ನನ್ನ ಗೆಳೆಯನು। ನನ್ನ ಕೊರಳ ಹಾಡಿಗಾಗಿ ಕಾಯುತಿರುವನು।।3।। ತುಂಟ ಹುಡುಗ ನನ್ನ ಕಂಡು ಕಲ್ಲು ಎಸೆವನು। ಅವನು ಬರಲು ಮಾರು ದೂರ ಜಿಗಿದು ಬಿಡುವೆನು।।4।। ಅದೋ ನೋಡು ಕೇರೆರಾಯ ಬರುತಲಿರುವನು। ಆದ್ದರಿಂದ ಈಗ ಹೋಗಿ ಮತ್ತೆ ಬರುವೆನು।।5।।

## ಇಲಿ

**ಇಲಿಮರಿ2 ಗಿಡ್ಡುಪುಟ್ಟಾಣಿ** **ರಾಗ:ಶಂಕರಾಭರಣ**

ಇಲಿಮರಿ ಇಲಿಮರಿ। ಗಿಡ್ಡು ಪುಟ್ಟಾಣಿ ಇಲಿಮರಿ। ಆಟಕ್ಕೆ ಬಂದ್ರೆ ಕೊಡ್ತೀನಿ। ಬಿಸಿಬಿಸಿ ಮಸಾಲ್ ಪುರಿ॥1॥ ಪುರ್ ಪುರ್ ಓಡ್ತಿಯಾಕಪ್ಪ। ನಾನೇನ್ ಪೋಲೀಸ್ ಅಲ್ಲಪ್ಪ। ಹತ್ತಿರಬಂದು ಆಡಿದ್ರೆ। ತಿಂಡಿ ತೋರಿಸ್ತೀನಪ್ಪ॥2॥ ಚಕ್ಕುಲಿ ತುಂಬಿ ಡಬ್ಬಕ್ಕೆ। ಅಮ್ಮ ಹೋದ್ಲು ಸ್ನಾನಕ್ಕೆ। ಮುಚ್ಚುಳ ತೆಗೆದು ಡಬ್ಬಾನ। ಇಬ್ರು ಸೇರ್ಕೊಂಡ್ ಮೇಯೋಣ॥3॥ ತಿಂಡಿಪೋತ ನೀನಂತೆ। ನಿನ್ನ ತರಾನೆ ನಾನಂತೆ। ಬಾರೋ ಗೆಳೆಯ ಹೋಗೋಣ। ತಿಂಡಿ ಖಾಲಿ ಮಾಡೋಣ॥4॥

**ಇಲಿಮರಿ2 ಚಿಲಿಪಿಲಿ ಅಡಿಗೆ**

ಇಲಿಮರಿ ಇಲಿಮರಿ ಚಿಲಿಪಿಲಿ। ಅಡಿಗೆ ಮನೆಯಲಿ ಗಲಿಬಿಲಿ। ಕೋಣೆಯ ಒಳಗೆ ಸರಪರ। ಏನನ್ನು ಕೊರೆಯುವೆ ಕರಕರ॥1॥ ಸಕ್ಕರೆ ಹೋಳಿಗೆ ಕುರಿಕುರಿ। ಕಂಡರೆ ಹಿಗ್ಗುವೆ ಹಿರಿಹಿರಿ। ಬೆಕ್ಕನು ನೋಡಲು ಥರಥರ। ನಡುಗುತ ಓಡುವೆ ಭರಭರ॥2॥

**ನಮ್ಮ ಮನೆಯ ಮೂಲೆಯಲ್ಲಿ**

ನಮ್ಮ ಮನೆಯ ಮೂಲೆಯಲ್ಲಿ। ಒಂದು ಇಲಿಯ ಕಂಡೆನು। ಸುಮ್ಮನಿರದೆ ಕೋಲು ಹಿಡಿದು। ಹೊಡೆಯಲೆಂದು ಬಂದೆನು। ಅದನು ಕಂಡು ಇಲಿಯು ಕೂಡ। ಸಂದು ಗೊಂದು ಹುಡುಕಿತು॥1॥ ಬೆನ್ನು ಬಿಡದೆ ಹಿಡಿದ ನನ್ನ ಕೈಗೆ ಸಿಕ್ಕಿ ಬಿಟ್ಟಿತು। ಇದರ ನಡುವೆ ಪಾತ್ರೆ ಡಬ್ಬಿ ಸೀಸೆಯೆಲ್ಲ ಉರುಳಲು। ಸದ್ದು ಕೇಳಿ ಅಮ್ಮ ಅಪ್ಪ ಕೋಪದಿಂದ ಕೆರಳಲು। ನನ್ನ ಕೈಯೊಳಿದ್ದ ಇಲಿಯ ಅಮ್ಮ ನೋಡಿ ಬಿಟ್ಟಳು॥2॥ ಬಟ್ಟೆಯೆಲ್ಲ ಕಡಿದ ಅದನು ಹಿಡಿದೆ ಬೇಷ್ ಎಂದಳು। ಕೈಯಲ್ಲಿದ್ದ ತುಂಟ ಇಲಿಯ ನಾನು ಹೊಡೆಯ ಹೋದೆನು। ಅಯ್ಯೋ ಪಾಪ ಎನಿಸಿ ದೂರಹೋಗಿ ಬಿಟ್ಟು ಬಂದೆನು॥3॥

**ಗೋಡೆಗೆ ತಗುಲಿದ** **ರಾಗ:ಕುರಂಜಿ**

ಗೋಡೆಗೆ ತಗುಲಿದ ಗಡಿಯಾರದಲಿ। ಗೂಡನು ಮಾಡಿತು ಒಂದು ಇಲಿ। ಟಿಕ್ ಟಿಕ್ ಟಿಕ್ ಟಿಕ್ ಸದ್ದನು ಕೇಳಿ। ನೆನೆಯಿತು ತನ್ನಯ ಹಳೆ ಚಾಳಿ॥1॥ ಆ ಗಡಿಯಾರದ ಒಳಗಡೆ ಸರಿದು। ಯಂತ್ರವ ಕಚ್ಚುತ ಕೊರೆಕೊರೆದು। "ಒಳಗಡೆ ರೊಟ್ಟಿಯ ತಟ್ಟುವರದಕೇ। ಟಿಕ್ ಟಿಕ್" ಎಂದು ಅದು ಬೆದಕಿ॥2॥ ಒಳಗಿನದೆಲ್ಲಾ ರೊಟ್ಟಿಯ ತಿಂದು। ಮುಗಿಸದೆ ಬಿಡುವೆನೆ ನಾನೆಂದು। ಹಲ್ಲಲಿ ಕಡಿಯಲು ಕಾಲಲಿ ಕೆರೆದು। ಗಂಟೆಯು ಬಡಿಯಿತು ಮೊಳೆಮುರಿದು॥3॥ ಎಂದೂ ಕೇಳದ ಗಂಟೆಯ ಸದ್ದು। ಬೆದರಿತು ನಡುಗಿತು! ಇಲಿ ಬಿದ್ದು। ಗಂಟೆಗೆ ಹೆದರುತ ಇಲಿ ನೆಗೆದೋಡಿ। ಅವಿತಿತು ನೆಲದಲಿ ಬಿಲತೋಡಿ॥4॥

## ಹಾವು

**ನಾಗರ ಹಾವೆ ಹಾವೊಳು** **ರಾಗ: ಖರಹರಪ್ರಿಯ**

ನಾಗರ ಹಾವೆ ಹಾವೊಳು ಹೂವೆ। ಬಾಗಿಲ ಬಿಲದಲಿ ನಿನ್ನಯ ಠಾವೆ। ಕೈಗಳ ಮುಗಿವೆ ಹಾಲನ್ನೀವೆ। ಬಾಬಾಬಾಬಾಬಾಬಾಬಾಬಾ॥1॥ ಹಳದಿಯ ಹೆಡೆಯನು ಬಿಚ್ಚೋ ಬೇಗಾ। ಹೊಳಲಿನ ಹೊಂದಲೆ ತೂಗೋ ನಾಗಾ। ಕೊಳಲನ್ನೂದುವೆ ಲಾಲಿಸುರಾಗ। ನೀನೀ ನೀನೀ ನೀನೀ ನೀನೀ॥2॥ ಎಲೆ ನಾಗಣ್ಣ, ಹೇಳೆಲೊ ನಿನ್ನಾ। ತಲೆಯಲಿ ರನ್ನವಿಹ ನಿಜವನ್ನಾ। ಬಲು ಬಡವಗೆ ಕೊಪ್ಪರಿಗೆಯ ಚಿನ್ನಾ ॥ತಾತಾ ತಾತಾ ತಾತಾ ತಾತಾ॥3॥ ಬರಿಮೈ ತಣ್ಣಗೆ ಮನದಲಿ ಬಿಸಿಹಗೆ। ಎರಡೆಳೆ ನಾಲಗೆ ಇದ್ದರು ಸುಮ್ಮಗೆ। ಎರಗುವೆ ನಿನಗೆ, ಈಗಲೆ ಹೊರಗೆ। ಪೋಪೋ ಪೋಪೋ ಪೋಪೋ ಪೋಪೋ॥4॥

**ಬುಸ್2 ನಾಗ ಬಾ ನೀ ಬೇಗ** **ರಾಗ: ಕುರಂಜಿ**

ಬುಸ್ ಬುಸ್ ನಾಗ ಬಾ ನೀ ಬೇಗ। ಹಾಲನು ನಿನಗೆ ತಂದಿರುವೆ। ನಿನ್ನನು ನೋಡುವ ಆಸೆಯ ಹೊತ್ತು ನಾನೇ ಇಲ್ಲಿಗೆ ಬಂದಿರುವೆ॥1॥ ಹೊಳಪಿನಮೈಯನು ಹರಿಸುತ ಬಾಬಾ। ಅಂದದ ಹೆಡೆಯನು ಅರಳಿಸಿ ಬಾಬಾ॥ ಬುಸ್ ಬುಸ್ ಎನ್ನದೆ ಸುಮ್ಮನೆ ಬಾಬಾ॥2॥ ಹಾಲನು ನಿನಗೆ ತಂದಿರುವೆ। ನಿನ್ನನು ನೋಡುವ ಆಸೆಯ ಹೊತ್ತು ನಾನೇ ಇಲ್ಲಿಗೆ ಬಂದಿರುವೆ॥3॥

**ಹಾವು ಬಂತು2 ರಂಗನಾಥ**

ಹಾವು ಬಂತು ಹಾವು ಬಂತು ರಂಗನಾಥ। ಹಾಸಿಕೊಂಡು ಮಲಗಿಬಿಟ್ಟ ರಂಗನಾಥ। ಹಾವು ಬಂತು ಹಾವು ಬಂತು ಕೃಷ್ಣಮೂರುತಿ। ಹೆಡೆಯ ಹತ್ತಿ ಧಿಮಿಧಿಮಿ ಕೃಷ್ಣ ಮೂರುತಿ। ಹಾವು ಬಂತು ಹಾವು ಬಂತು ಸದಾಶಂಕರಾ। ಹಲ್ಲುಮುರಿದು ತೋಳು ಬಳೆ ಸದಾಶಂಕರಾ॥

## ಮೀನು

**ಮಛಲಿ ಜಲ್ ಕಿ ರಾಣಿ ಹೈ (ಹಿಂದಿ)** **ರಾಗ:ಶಂಕರಾಭರಣ**

ಮಛಲಿ ಜಲ್ ಕೀ ರಾಣಿ ಹೈ। ಜೀವನ್ ಉಸ್‌ಕೀ ಪಾನಿ ಹೈ। ಹಾಥ್ ಲಗಾವೊ ಡರ್ ಜಾಯೇಗಿ। ಬಾಹರ್ ನಿಕಾಲೋಗೆ ಮರ್ ಜಾಯೇಗಿ॥1॥

## ಆಮೆ

**ಹೊರಲಾರದ ಹೊರೆ ಹೊತ್ತು,** **ರಾಗ:ಭೌಳಿ**

ಹೊರಲಾರದ ಹೊರೆ ಹೊತ್ತು ಕತ್ತನ್ನು ನಿಧಾನ ಹೊರಚಾಚಿ, ಗಾಳಿಯನ್ನು ಮೂಸುತ್ತಾ ಹೊಟ್ಟೆ ಹೊಸೆದು ಜೀಕಿ,ಗರಿಕೆ ಒಂದೊಂದನ್ನೇ ಕಿತ್ತು ಜಗಿದು ಮೆಲುಕಾಡಿಸುತ್ತೇನೆ:॥ ತೆವಳಿ ಧೂಳಲ್ಲಿ, ನನ್ನ ಮಲದಲ್ಲೇ ಜೀಕಿ ನಾಲ್ಕೂ ಕಾಲೂರಿ। ಉಸಿರೆಳೆದು ಕುಂಭಿಸಿ, ಸೆಟೆದು ದೇಹವನ್ನೆತ್ತಿ ಒಂದಿಂಚು ಜರಗಿಸುತ್ತೇನೆ;॥ ವಿಶಾಲವಾಗಿದೆ ನನ್ನ ಜಗತ್ತು। ಸುತ್ತುವರಿದಿರುವ ತಂತಿಯ ಮುಳ್ಳಬೇಲಿ। ನಾಲ್ಕೇ ಹೆಜ್ಜೆ ದೂರದದೆಲ್ಲಿ ಕೃತಕ ಕೊಳದ ನೀರು। ತೆವಳುತ್ತೇನೆ ಧೂಳಲ್ಲಿ। ಮೇಲಿನಿಂದ ಸೂರ್ಯನೆಸೆದ ಬಿಸಿಲಿನ ಭರ್ಜಿ। ತಲೆ ಚುಚ್ಚಿದಾಗ ಕತ್ತಿನಲ್ಲಿ ನಗುವ ಮಗು ಬೀಸಿ ಬಿದ್ದ ಕಲ್ಲೇಟಿನ ಯಾತನೆ। ಕೃತಕ ಕೊಳದ ನೀರಿಗೆ ಬಾಯಾರಿ। ಬೇಯುತ್ತಿದ್ದೇನೆ॥ ಅತ್ತ ತೆವಳಲೆತ್ನಿಸಿದರೆ ಸಾಕು ಅಳೆಯಲಾರ। ದಾಳದಿಂದ ಹೆಸರರಿಯದದು। ಬಂದು ನಾಲ್ಕು ಬದಿಯಿಂದ ತನ್ನ ನಳಿಗೆಗಳ ನಿಧಾನ ತೂರಿ। ಆಲಂಗಿಸಿ ಹಿಡಿತ ಬಿಗಿಮಾಡಿ। ಬಂದಿಸುತ್ತದೆ ಬಂಧನದಲ್ಲಿ ಸಿಕ್ಕ ನಾನು। ಒದ್ದಾಡಲೂ ಆರದೆ ನಿಶ್ಯಕ್ತನಾಗಿ। ಮೈಮುದುಡಿ ತರುಗು ಕೈಕಾಲು ಮುಖಕತ್ತನ್ನೆಲ್ಲಾ ಚಿಪ್ಪೊಳಕ್ಕೆಳೆದು ಬಿದ್ದುಕೊಳ್ಳುತ್ತೇನೆ। ಬಿರಿಯಲಾರದ ಕವಚ ಸಿಡಿವಂತೆ ಅವಚುತ್ತದೆ ನಾನು ಚಿಪ್ಪೊಳಗೇ। ಬದುಕು ಸಾವಿನ ಕೂದಲೆಳೆಗಡಿಯಲ್ಲಿ ಕೃತಕ ಕೊಳದ ನೀರಿಗಾಗಿ ಕನಸು ಕಾಣುತ್ತೇನೆ॥

## ಪ್ರಾಣಿಗಳು

**ಆನೆ ಕರಡಿ ಮೊಸಳೆಯು**

ಆನೆ ಕರಡಿ ಮೊಸಳೆಯು। ನಾಯಿ ಗಿಳಿ ಜಿರಾಫೆಯು। ಭಲಾಭಲಾ ಹೊರಟವೆಲ್ಲಿ। ಭಾರಿ ಮೋಟಾರ್ ಕಾರಲ್ಲಿ। ಚಿಕ್ಕ ಪೇಟೆ ಬೀದೀಲಿ। ಕರಡಿ ಮೋಟಾರ್ ನಡೆಸಿತು। ನಾಯಿ ಹಾರನ್ ಮಾಡಿತು। ಆನೆ ಮೊಸಳೆ ಜಿರಾಫೆಯು। ಸಂತೋಷಗೊಂಡವು॥

**ಕಪ್ಪೆ ಕರಕರ ತುಪ್ಪ ಜಲಿಜಲಿ**

ಕಪ್ಪೆ ಕರಕರ ತುಪ್ಪ ಜಲಿಜಲಿ। ಮಾವಿನ ವಾಟೆ ಮರದಲಿ। ಕೋಟೆ ಹದ್ದಿನ ಕೈಯಲಿ। ಸುದ್ದಿ ಕಳುಹಿಸಿ। ಕಾಗೆಯ ಕೈಯಲಿ ಕಂಕಣ ಕಟ್ಟಿಸಿ। ನಳ್ಳಿಯ ಕೈಯಲಿ ನಗಾರಿ ಹೊಡೆಸಿ। ಸೊಳ್ಳೆಯ ಕೈಯಲಿ ಸೋಬಾನೆ ಹೇಳಿಸಿ। ಸಣ್ಣೆ ಮದುವೆ ಶನಿವಾರ। ಊಟಕೆ ಬನ್ನಿ ಬುಧವಾರ॥

**ಕಾಡಿನಲ್ಲಿರುವ ಪ್ರಾಣಿಗಳೆಲ್ಲವು** **ರಾಗ:ಸಾರಂಗ**

ಕಾಡಿನಲ್ಲಿರುವ ಪ್ರಾಣಿಗಳೆಲ್ಲವು ಒಂದೆಡೆ ಸಭೆಯಲಿ ಕೂಡಿದವು। ತಂ ತಮ್ಮೊಳಗೇ ಮಿಗಿಲಾರೆನ್ನುತ ಬಿರುಸಿನ ಚರ್ಚೆಯ ಮಾಡಿದವು॥1॥ ದೇಹದ ಗಾತ್ರದಿ ನಾಮಿಗಿಲೆಂದಿತು ಸೊಂಡಿಲ ತಿರುವುತ ಮದ್ದಾನೆ। ವೇಗದ ಓಟದಿ ನಾ ಮೊದಲೆನ್ನುತ ಎಗರಿತು ಜಿಂಕೆಯು ತಂತಾನೇ॥2॥ ಬುದ್ಧಿಯ ತಂತ್ರದಿ ನಾನೇ ಮೊದಲು ಎಂದನು ನಗುತಲಿ ನರಿಯಣ್ಣ। ಅಭಿನಯದಲಿ ನನಗಿಂತಲು ಮಿಗಿಲಾರ್ ಎಂದನು ಬಳುಕುತ ಕರಡಪ್ಪ॥3॥ ಮರವನು ಏರಲು ನನ್ನನು ಮೀರುವರುಂಟೇ ಎಂದಿತು ಕೋತಿಯದು। ನಾನೇ ಕಾಡಿನ ರಾಜನು ಎನ್ನುತ ಘರ್ಜಿಸಿ ಹೇಳಿತು ಸಿಂಹವದು॥4॥ ಚರ್ಚೆಯ ನಂತರ ನಿರ್ಣಯವಾಯಿತು ಎಲ್ಲರು ತಂತಂ ರೀತಿಯಲಿ। ಶ್ರೇಷ್ಠರು ಶಕ್ತರು ಬಾಳುವ ಕೂಡುತ ಸ್ನೇಹದಿಂದಲೇ ಕಾಡಿನಲಿ॥5॥

**ಕಾವೇರಿ ತೀರದಲ್ಲಿ ಒಂದು ಕಾಡು** **ರಾಗ:ಶಂಕರಾಭರಣ**

ಕಾವೇರಿ ತೀರದಲ್ಲಿ ಒಂದು ಕಾಡು। ಆ ಕಾಡೊಂದು ಮೃಗಗಳ ಬೀಡು। ಮೃಗರಾಜನಿಗೆ ಜನುಮದಿನ। ಅದು ಎಲ್ಲ ಪ್ರಾಣಿಗಳು ನಲಿವ ದಿನ॥ಪ॥ ಗಂಭೀರ ನಡೆ ಹಾಕಿ ಆನೆ ಬಂತು। ಸೊಂಡಿಲಲಿ ಬಾಳೆಗೊನೆಯನು ತಂತು। ದಾಪುಹೆಜ್ಜೆ ಹಾಕುತ ಕರಡಿ ಬಂತು। ಹಲಸು ಜೇನು ಕಲೆಸುತ ತಾನು ಕಾಣಿಕೆಯಾಗಿ ತಂತು॥1॥ ಬಣ್ಣ ಬಣ್ಣದ ಗರಿಗಳ ತೆರೆದು। ನವಿಲು ಕುಣಿಯಿತು ಆಡಿ। ರಾಜನ ನೋಡಿ ಹರುಷದಿ ಕೂಡಿ। ಕೋಗಿಲೆ ನುಡಿಯಿತು ಹಾಡನು॥2॥ ಕೇಳಿ ಸ್ಫೂರ್ತಿಯ ತಾಳಿ। ಕತ್ತೆಯು ಹಾಡಿತು ಜೊತೆಗೂಡಿ॥ ಆಡೋಣ ಬನ್ನಿ ಆಡೋಣ ಬನ್ನಿ ಅಪ್ಪಾಲೆ ತಿಪ್ಪಾಲೆ। ಹಾಕೋಣಬನ್ನಿ ಹಾಕೋಣ ಬನ್ನಿ ರಾಜಂಗೆ ಹೂಮಾಲೆ॥3॥

**ಕೋಕೋ ಕೋಳಿ**

ಕೋಕೋ ಕೋಳಿ ಬೆಳಗಾಯಿತು ಏಳಿ। ಬೌ ಬೌ ನಾಯಿ ಸಾಕು ಮುಚ್ಚು ಬಾಯಿ। ಅಂಬಾ ಅಂಬಾ ಕರುವೆ ಹುಲ್ಲು ಹೊತ್ತು ತರುವೆ। ಚಿಂವ್ ಚಿಂವ್ ಇಲಿ ಮಾಡಿಯಿಂದ ಇಳಿ। ಮಿಯಾವ್ ಮಿಯಾವ್ ಬೆಕ್ಕು ಕದ್ದು ಹಾಲು ನೆಕ್ಕು॥

**ನಾಯಿ ನರಿ ಸೇರಿತು**

ನಾಯಿ ನರಿ ಸೇರಿತು। ಮದುವೆ ಜೋರು ಆಯಿತು। ಕುದುರೆ ಕುಣಿತ ಸಾಗಿತು। ಕಾಗೆ ಕಾಕಾ ಎಂದಿತು। ಗುಬ್ಬಿ ತಾಳ ಹಾಕಿತು। ಮಂಗ ಡೋಲು ಬಡಿಯಿತು। ಕತ್ತೆ ಮೇಳ ಊದಿತು। ಮಳೆಯು ಜೋರು ಬಂದಿತು॥

**ಬಿಸಿಲು ಮಳೆಯು ಕೂಡಿದವು** **ರಾಗ:ಶಂಕರಾಭರಣ**

ಬಿಸಿಲು ಮಳೆಯು ಕೂಡಿದವು। ಧಗೆಯನು ತಂಪು ಮಾಡಿದುವು। ಕೋತಿಯು ಮಾಡಿತು ತುಂಟತನ। ಕೋಳಿಯು ಮಾಡಿತು ಮೂರ್ಖತನ॥1॥ ಕೋತಿಗು ಕೋಳಿಗು ನೆಂಟತನ। ಮಾಡಲುಬೇಕೆಂಬುವ ಹದನ। ಮೃಗಗಳು ಖಗಗಳು ಚರ್ಚಿಸುತ। ಮದುವೆಗೆ ಮಾಡಿದರಣಿ ನಗುತ॥2॥ ಮಂಗಗೆ ಪಂಚೆಯನುಡಿಸಿದರು। ರಂಗಿನ ಅಂಗಿಯ ಹಾಕಿದರು। ಸಿಂಗರ ದೊಡವೆಯ ತೊಡಿಸಿದರು॥3॥ "ಲಾಗ ಹಾಕೋ ಮಂಗಣ್ಣಾ। ಥೈ ಥೈ ಕುಣಿಯೋ ತಿಮ್ಮಣ್ಣಾ। ಕೋಳಿಯ ಗಂಡನೇ ಕಪಿಯಣ್ಣಾ। ಮದುವಣಿಗನು ನೀ ಹೌದಣ್ಣಾ॥"4॥ "ಮೃಗವದು ಹಕ್ಕಿಯ ವರಿಸುವುದು। ನಿನ್ನಿಂ ಮೊದಲಾದುದು ಇಂದು। ನೀನೇ ದಾರಿಯ ತೋರಿಸಿದೆ। ನೀನೇ ಸುಧಾರಕನೆನ್ನಿಸಿದೆ"॥5॥ ಎಂದು

ವಿನೋದದಿ ಆಡಿದರು। ಚಂದದ ಪದಗಳ ಹಾಡಿದರು। ಕೋಳಿಗೆ ಸೀರೆಯನುಡಿಸಿದರು। ಚಿನ್ನದೊಡವೆಗಳ ತೊಡಿಸಿದರು।।6।। "ಕೊಕ್ ಕೊಕ್ ಕೋ ಕೋ ಎಂದೆನ್ನು। ಮಂಗನ ರಾಣಿಯು ನೀನಿನ್ನು। ಬಗ್ಗಿಸುವೇತಕೆ ತಲೆಯನ್ನು? ಕೊಂಕಿಸುವೇತಕೆ ನಡೆಯನ್ನು?"।।7।। "ಬಿಡು ಬಿಡು ಲಜ್ಜೆಯ ಹೂಮಾಲೆ। ಕಪಿವರನಿಗೆ ಹಾಕೆಲೆ ಬಾಲೆ!" ಎನ್ನುತ ಚೇಷ್ಟೆಯ ಮಾಡಿದರು। ಹಿಗ್ಗುತ ನಲಿನಲಿದಾಡಿದರು।।8।। ಸಂಭ್ರಮದೊಳಗಾಯಿತು ಮದುವೆ। ಮರ್ಕಟ ಕುಕ್ಕುಟರಾ ಮದುವೆ।।9।।

**ಬೆಕ್ಕಿಗು2 ಮದುವೆ ಭೂಲೋಕದಲ್ಲಿ** **ರಾಗ:ಕುರಂಜಿ**

ಬೆಕ್ಕಿಗು ಬೆಕ್ಕಿಗು ಮದುವೆ। ಭೂಲೋಕದಲ್ಲಿ ಓಡಾಟ। ಆನೆ ಮೇಲೆ ಮೆರವಣಿಗೆ। ಒಂಟೆ ಜಿರಾಫೆ ನಾಟ್ಯ। ಗುರು ಗುರು ಕೋತಿಯ ತುಂಟಾಟ।।1।। ಅವಸರದಲ್ಲಿ ಊಟ। ತಾಳಿಯ ಕಟ್ಟುವ ಸಮಯದಲಿ। ಹುಡುಗ ಬೆಕ್ಕು ಕಾಣ್ದಾಯ್ತು। ಗಲಾಟೆ ಗಿಲಾಟೆ ಮಾಡದೆ। ಅಡುಗೆ ಮನೆಗೆ ನುಗ್ಗಿದ್ದ।।2।। ಅಲ್ಲಿದ್ದ ಹಾಲನ್ನೆಲ್ಲಾ। ಒಂದೇ ಉಸುರ್ಗೆ ಕುಡ್ಬಿಟ್ಟ। ನೋಡಿಯೆಬಿಟ್ಟಳು ಹುಡುಗಿಯ ತಾಯಿ। ಬಲು ಜೋರು ಮಾಡಿದಳು। ಬೇಡ ಬೇಡ ನಾಚಿಕೆಗೇಡಿನ ಈ ಸಂಬಂಧ। ಹೋಗಿ ಬನ್ನಿ ಎಂದ್ಬಿಟ್ಟು।।3।। ಪ್ರಾಣಿಗಳೆಲ್ಲವು ಅರಚಿದವು। ಬೇಕು, ಬೇಕು ಈ ಸಂಬಂಧ ನಾವೇ ತಾಳಿ ಕಟ್ಟೋಣ।।4।।

## ಚುಟುಕ (ಒಂದೇ ವಿಷಯದಲ್ಲಿ)

### ಮರಕೆ ನೆಗೆಯುವುದು

1. ಮರಕೆ ನೆಗೆಯುವುದು ಕೋತಿಗೆ ಆಟ। ಮರದಲ್ಲಿ ಗೂಡಿಡುವುದು ಕಾಗೆಯ ಪರಿಪಾಟ।ಮಧ್ಯೆ ಮಧ್ಯೆ ನಡೆಯುವುದು ಹೋರಾಟ। ಮಾನವನಿಗಿದೊಂದು ಮೋಡಿಯ ನೋಟ।।
2. ಕಪಿಚೇಷ್ಟೆ ಎನ್ನುವುದು ವಾಡಿಕೆ। ಕಾಗೆಯಂತೆ ಕಪ್ಪೆನ್ನುವುದು ಹೋಲಿಕೆ। ಸಹಜವಾಗಿ ಹೇಳುವ ಈ ಹೇಳಿಕೆ। ನಮ್ಮೆಲ್ಲರಿಗೆ ವಿಷಯಗಳ ಕಲಿಕೆ।।
3. ಮರದಿಂದ ಮರಕ್ಕೆ ನೆಗೆಯುವುದು ಕೋತಿಗೆ ಅಭ್ಯಾಸ। ಮರದಿಂದ ಮರಕ್ಕೆ ಹಾರುವುದು ಕಾಗೆಗೆ ಅಭ್ಯಾಸ।। ಸತತ ಹೋರಾಡುವುದು ಇವುಗಳಿಗೆ ಅಭ್ಯಾಸ।। ಪ್ರೇಕ್ಷಕನಿಗೆ ಪ್ರತಿಸಾರಿ ನೋಡುವುದೇ ಅಭ್ಯಾಸ।।

### ಎಳೆಯರ ಪ್ರಾಸ

1. ಅವಳ ಹೆಸರು ಪದ್ದು। ಬುದ್ಧಿ ಇಲ್ಲ ಪೆದ್ದು। ಮನೆಯಲ್ಲೆಲ್ಲಾ ಮುದ್ದು। ತಿನ್ನೋದೆಲ್ಲಾ ಕದ್ದು। ಒಮ್ಮೆ ಸಿಕ್ಕಿ ಬಿದ್ದು। ಬಿತ್ತು ನಾಲ್ಕು ಗುದ್ದು।
2. ಇದ್ದನೊಬ್ಬ ಪಿಳ್ಳೆ। ತಿನ್ನುತ್ತಿದ್ದ ಕಳ್ಳೆ। ಕಚ್ಚಿತೊಂದು ಸೊಳ್ಳೆ। ಕಾಲಲಿ ಬಂತು ಗುಳ್ಳೆ।।
3. ಗೆಳೆಯನಿದ್ದ ಸೀನು ಹಿಡಿಯುತ್ತಿದ್ದ ಮೀನು। ಸೀನಿಗೆ ಬಂತು ಸೀನು। ಜಾರಿಹೋಯ್ತು ಮೀನು।।
4. ಸರಿಗಮ ಪದನಿಸ। ನಿನ್ ಜುಟ್ಟಿಗೆರಿಸ।। ಪ್ರಭಾಕರ ಎಮ್ಮೇಕರ। ಬಂದಿತದು ಭರಭರ।।
5. ಶಾಂತಾಮಣಿ ಕಾಂತಾಮಣಿ। ಕತ್ತಿಗೆ ಕಟ್ಟುವೆ ಕರಿಯಮಣಿ।।
6. ನನ್ನ ಗೆಳತಿ ವಿಮಲ। ಅವಳ ಗೆಳತಿ ಕಮಲ। ಆಡಿದರವರು ಜಗಳ।।
7. ಸಿದ್ದ ಗೊದ್ದ ಭಾವೀಲಿ ಬಿದ್ದ। ಬೆಲ್ಲ ಕೊಟ್ಟರೆ ಬೇಡ ಎಂದ। ಕಪ್ಪೆ ಕೊಟ್ಟರೆ ಗೋಳಕ್ ಎಂದ।।

**ಮೇಲಿನಿಂದ ಕೆಳಗೆ**

| | |
|---|---|
| ಕಿಟಕಿ | ಶಿವಾಜಿ |
| ಟಗರು | ವಾಯಿಲೇ |
| ಕಿರುಬ | ಜಿಲೇಬಿ |

**ಹಿಂದು ಮುಂದು ಒಂದೆ**

ಕಮಕ, ಜಲಜ, ನಮನ, ಸರಸ, ಚಮಚ, ವಿಕಟಕವಿ, ನವಜೀವನ, ಕುಬೇರನಿಗೇನಿರಬೇಕು, ಮದ್ರಾಸಿನಸಿದ್ರಾಮ, ನಯನ, ಕಳಂಕ.

## ಚುಟುಕ(ತಮಿಳು-ಕನ್ನಡ)

### ಗಾಂಧಿ ವಂದಾರಾಂ (ತಮಿಳು)

1. ಗಾಂಧಿ ವಂದಾರಾಂ। ಬೂಂದಿ ತಿನ್ನಾರಾಂ। ಏಪಂ ಉಟ್ಟಾರಾಂ। ಎಳಚಿ ಪೋಯ್ಯಾರಾಂ॥
2. ಕಲ್ಕತ್ತಾಕ್ಕು ಪೋಗಲಾಂ। ಕಲ್ಲು ನೆಕ್ಲೇಸ್ ವಾಂಗಲಾಂ। ಕಳುತುಕ್ಕುಳ್ಳೈರ ಪೋಡಲಾಂ। ಕನ್ನಾಡಿಕುಳ್ಳೆ ಪಾರ್ಕಲಾಂ॥
3. ತಿರುಪತ್ತಿಕ್ಕಿ ಪೋಗಲಾಂ। ತಿರುಪ್ಪು ಚೊಂಬುವಾಂಗಲಾಂ। ಇಡುಪ್ಪುಕುಳ್ಳೈ ವೆಕ್ಕಲಾಂ। ತಿರಿಪ್ಪಿ ತಿರಿಪ್ಪಿ ವಕ್ಕಲಾಂ॥

### ಕನ್ನಡಾನುವಾದ

1. ಗಾಂಧಿ ಬಂದರು ಬೂಂದಿ ತಿಂದರು। ತೇಗು ಬಿಟ್ಟರು ತೆಳ್ಳಗಾದರು॥
2. ಕಲ್ಕತ್ತಾಗೆ ಹೋಗೋಣ। ಕಲ್ಲು ನೆಕ್ಲೇಸ್ ತರೋಣ॥ ಕುತ್ತಿಗೆಯೊಳಗೆ ಹಾಕೋಣ। ಕನ್ನಡಿಯಲ್ಲಿ ನೋಡೋಣ॥
3. ತಿರುಪತಿಗೆ ಹೋಗೋಣ। ತಿರುವೋ ಚೊಂಬು ತರೋಣ। ನಡುವಿನಲ್ಲಿ ಇಡೋಣ ತಿರುಗಿಸಿ ತಿರುಗಿಸಿ ನೋಡೋಣ।

## ಹಾಸ್ಯಗೀತೆ

**ಅತ್ತೆವ್ವಾ ನಾ ಬಂದೀನಿ (ಸಂಭಾಷಣಾಗೀತೆ)** **ರಾಗ: ಶ್ರೀ**

ಅಳಿಯಾ:-ಅತ್ತೆವ್ವಾ ನಾ ಬಂದೀನಿ ಅತ್ತೆವ್ವಾ। ಅತ್ತೆ:- ಬಂದಾರೆ ಬಾರ ನಿಂದಾರೆ ನಿಲ್ಲ। ನಾನಿನ್ ಅಳಿಯಾ ಅಂತಂದಿಲ್ಲ॥ ಅಳಿಯಾ:- ಹಂಗಲ್ಲತ್ತೆವ್ವ ಸುಳ್ಳಿನ ಸೋಗಿನತ್ತೆವ್ವ ಈಗಿನ್ ಫ್ಯಾಶನ್ ಅತ್ತೆವ್ವ ನನ್ನ ಹೆಂಡ್ತೀನ ಕಳುಹವ್ವ॥ ಅತ್ತೆ:- ಹೆಂಡ್ತಿ ಹೆಂಡ್ತಿ ಎಂದರೇನೊ ಅಳಿಯಾ ಬೆಲ್ಲದ ಹೆಂಟೆಯೇನೋ ಅಳಿಯಾ ಮಣ್ಣಿನ ಹೆಂಟೆಯೇನೋ ಅಳಿಯಾ। ಹೆಂಡ್ತಿ ಎಂದರೇನೋ॥ ಅಳಿಯಾ:- ಹಂಗಲ್ಲತ್ತೆವ್ವಾ ಸುಳ್ಳಿನ್ ಸೋಗಿನತ್ತೆವ್ವ ಈಗಿನ ಫ್ಯಾಶನ್ ಅತ್ತೆವ್ವ ಎನ್ನ ಮಡದೀಯ ಕಳುಹವ್ವ॥ ಅತ್ತೆ:- ಮಡದಿ ಮಡದಿ ಅಂದರೇನೊ ಅಳಿಯಾ ವೀಳೆಯ ಮಡಿ ಏನೋ ಅಳಿಯಾ ಸೊಪ್ಪಿನ ಮಡಿ ಏನೋ ಅಳಿಯಾ ಮಡದಿ ಎಂದರೇನೋ॥ ಅಳಿಯಾ:- ಹಂಗಲ್ಲತ್ತೆವ್ವ ಸುಳ್ಳಿನ್ ಸೋಗಿನತ್ತೆವ್ವ ಈಗಿನ್ ಫ್ಯಾಷನ್ ಅತ್ತೆವ್ವ। ಎನ್ನ ವೈಫನ್ನು ಕಳುಹವ್ವ॥ ಅತ್ತೆ :-ವೈಫು ವೈಫು ಅಂದರೇನೋ ಅಳಿಯಾ ನಲ್ಲಿಯ ಪೈಪೇನೋ ಅಳಿಯಾ ಸೇದುವ ಪೈಪೇನೋ ಅಳಿಯಾ। ವೈಫು ಎಂದರೇನೋ॥ ಅಳಿಯಾ:- ಹಂಗಲ್ಲತ್ತೆವ್ವ ಸುಳ್ಳಿನ್ ಸೋಗಿನತ್ತೆವ್ವ ಈಗೀನ್ ಫ್ಯಾಷನ್ ಅತ್ತೆವ್ವ ಎನ್ನ ಪ್ಯಾರಿಯ ಕಳುಹವ್ವ॥ ಅತ್ತೆ:- ಪ್ಯಾರಿ ಪ್ಯಾರಿ ಅಂದರೇನೊ ಅಳಿಯಾ ಬೀದಿಯ ಮೋರಿಯೇನೊ ಅಳಿಯ ಕತ್ತೆಯ ಮರಿಯೇನೋ ಅಳಿಯ ಪ್ಯಾರಿ ಎಂದರೇನೋ॥ ಅಳಿಯಾ: ಕರ್ಮ ಕರ್ಮ ಇವ್ರು ಕಳ್ಸೋಲ್ಲ ನಾನ್